# ಕಸ್ತೂರಿ

ಜುಲೈ 1990 ರೂ. 3-00

ಸೊಹನಿ-ಮಹಿವಾಲ್:
ಅಪೂರ್ವ
ಪ್ರಣಯಿಗಳು

ಅವರು ಸಮುದ್ರಕ್ಕೇ
ತಡೆಯೊಡ್ಡಿದರು

ಮೂವತ್ತು ಸಾವಿರ ಜನರ
ಮಾರಣ ಹೋಮ

'ಓಂ'ಕಾರದ ರಹಸ್ಯ

ಆನೆಗಳ ಕಾಡಲ್ಲಿ
ಸೋಲಿಗರ ಬೀಡಲ್ಲಿ





ಈ
ತಾಯಿಗಳ
ಬಗೆಗೇಕೆ
ತಾತ್ಸಾರ ಭಾವ?




# ಲೋಕ ಶಿಕ್ಷಣ ಟ್ರಸ್ಟ್
# ಗ್ರಂಥಮಾಲೆಯ ಪ್ರಕಟಣೆಗಳು
# ಹುಬ್ಬಳ್ಳಿ-ಬೆಂಗಳೂರು

| | | ಬೆಲೆ |
|---|---|---|
| 1. ಶ್ರೀ ರಾಮದಾಸರು ಹೇಳಿದ ಕಥೆಗಳು | ಶ್ರೀ ಬಸಪ್ಪ ದಾನಪ್ಪ ಜತ್ತಿ | ರೂ. 12-00 |
| 2. ಅಂತರಾತ್ಮನಿಗೆ | ಶ್ರೀ ರಂಗನಾಥ ದಿವಾಕರ | ರೂ. 5-00 |
| 3. ಗೀತೆಯ ಗುಟ್ಟು | ಶ್ರೀ ರಂಗನಾಥ ದಿವಾಕರ | ರೂ. 15-00 |
| 4. ಪುಟಾಣಿಗೆ ಶರಣರ ಕಥೆಗಳು | ಶ್ರೀಮತಿ ಜೆ.ವಿ.ಜಯಾ ರಾಜಶೇಖರ | ರೂ. 3-50 |
| 5. ಮರಳಿ ಬಂದ ಮಧುರ ಮಾಸ | ಶ್ರೀಮತಿ ಜೆ.ವಿ.ಜಯಾ ರಾಜಶೇಖರ | ರೂ. 12-00 |
| 6. ವಿಚಾರ ಜ್ಯೋತಿ | ಶ್ರೀ ಕೆ.ಟಿ.ಪಾಂಡುರಂಗಿ | ರೂ. 10-00 |
| 7. ವಚನಗಳಲ್ಲಿ ಪ್ರತಿಮೆಗಳು | ಶ್ರೀಮತಿ ಉಷಾಕಿರಣ್ | ರೂ. 25-00 |
| 8. ಶಿಶುನಾಳ ಶರೀಫ ಸಾಹೇಬರು | ಶ್ರೀ ಶಿವಾನಂದ ಗುಬ್ಬಣ್ಣವರ | ರೂ. 15-00 |
| 9. ನನಗೆ ನಾನೇ ಮಾದರಿ (ಆತ್ಮಕಥನ) | ಶ್ರೀ ಬಿ.ಡಿ.ಜತ್ತಿ | ರೂ. 40-00 |
| 10. ಕೋಟ್ಯಧೀಶ್ವರರ ಪ್ರಪಂಚದಲ್ಲಿ 60 ದಿನ | ಶ್ರೀ ಎಸ್.ಪಿ.ಭಟ್ಟ | ರೂ. 20-00 |

ಪುಸ್ತಕ ದೊರೆಯುವ ಸ್ಥಳ:

**ಸಂಯುಕ್ತ ಕರ್ನಾಟಕ ಪ್ರೆಸ್,**
**ಕೊಪ್ಪಿಕರ ರೋಡ್, ಹುಬ್ಬಳ್ಳಿ**

ವಿ.ಸೂ:- ಒಂದೊಂದು ಪುಸ್ತಕದ ಕನಿಷ್ಟ 10 ಪ್ರತಿ, ಅದಕ್ಕಿಂತಲೂ ಹೆಚ್ಚು ಖರೀದಿಸಿದಲ್ಲಿ ಶೇ. 15ರಂತೆ ಕಮೀಶನ್ ಕೊಡಲಾಗುವುದು. ಅಂಚೆ ವೆಚ್ಚ ಪ್ರತ್ಯೇಕ.




# ಕಸ್ತೂರಿ
ಕನ್ನಡ ಡೈಜೆಸ್ಟ್

ವರ್ಷ: 34

ಸಂಚಿಕೆ: 11

ಜುಲೈ 1990

●

ವ್ಯವಸ್ಥಾಪಕ ಸಂಪಾದಕ:
ಕೆ.ಶಾಮರಾವ್

ಸಂಪಾದಕ:
ಆರ್.ಎ.ಉಪಾಧ್ಯ

●

ಮುಖಪುಟದ
ವರ್ಣಚಿತ್ರಗಳು

ಕೆ.ಕೃಪಾಕರರಾವ್
ರೇಣುಕ

●

ಕಸ್ತೂರಿ ಕಾರ್ಯಾಲಯ
ಕೊಪ್ಪೀಕರ ರಸ್ತೆ
ಹುಬ್ಬಳ್ಳಿ-580020


## ಬೆಳಕಿಂಡಿ

★ ಮುಂಗಡಪತ್ರವೆಂದರೆ ನಿಮ್ಮ ಹಣ ಎಲ್ಲಿಗೆ ಹೋಯಿತೆಂದು ವಿಸ್ಮಯಪಡುವ ಬದಲು ಅದಕ್ಕೆ ಇಂಥಲ್ಲಿಯೇ ಹೋಗೆಂದು ಅಪ್ಪಣೆ ಕೊಡುವುದು.

- ಸಿ.ಇ.ಹೂವರ್

★ ವಿದ್ವತ್ತು ಸಂತೆಯ ಸರಕಾಗಲೊಪ್ಪದು. ಸಂತೆಗೆ ವಿದ್ವತ್ತಿನ ಬೆಲೆ ತಿಳಿಯದು.

- ಡಿ.ವಿ.ಜಿ.

★ ಜಗತ್ತಿನ ಅತ್ಯಂತ ದೊಡ್ಡ ಡಾಕ್ಟರುಗಳೆಂದರೆ ಡಾ|| ಪಥ್ಯ, ಡಾ|| ಶಾಂತಿ ಮತ್ತು ಡಾ|| ಆನಂದ.

- ಸ್ವಿಫ್ಟ್

★ ಜಗತ್ತಿನಲ್ಲಿ ಏನೂ ಕೆಲಸವಿಲ್ಲದೆ ಬದುಕುವ ಜನ ಬಹಳಷ್ಟಿದ್ದಾರೆ. ಅದರಂತೆ ಬದುಕನ್ನು ಬಾಳದೆ ಬರೀ ಕೆಲಸ ಮಾಡುವ ಜನರೂ ಹೆಚ್ಚಿನ ಸಂಖ್ಯೆಯಲ್ಲಿದ್ದಾರೆ.

- ಜೆ.ಪಟ್ರಿಕ್‌ವೆನಾನ್

★ ಪ್ರಪಂಚದಲ್ಲಿ ಯಾರೂ ಎಂದೂ ಬೇಸರಿಯದ ವಸ್ತುಗಳು ಮೂರಿವೆ. ಆರೋಗ್ಯ, ದೀರ್ಘಾಯು ಮತ್ತು ಐಶ್ವರ್ಯ.

- ನುಡಿಮುತ್ತು


### ಚಂದಾ ದರಗಳು

| | | |
|---|---|---|
| ಬಿಡಿ ಸಂಚಿಕೆ | ... | 3=00 |
| 1 ವರ್ಷಕ್ಕೆ | ಅಂಚೆ ಸೇರಿ | 34=00 |
| 2 ವರ್ಷಕ್ಕೆ | ... | 65=00 |
| 3 ವರ್ಷಕ್ಕೆ | ... | 100=00 |

### ಚಂದಾದಾರರಿಗೆ ಸೂಚನೆ

'ಕಸ್ತೂರಿ' ತಿಂಗಳ 1ನೇ ದಿನಾಂಕದೊಳಗೆ ಪ್ರಕಟವಾಗುವುದು. ತಿಂಗಳ 5ನೇ ದಿನಾಂಕದೊಳಗೆ ತಲುಪದೇ ಹೋದರೆ ಚಂದಾದಾರರು ತಮ್ಮ ಟಪಾಲು ಕಟ್ಟೆಯಲ್ಲಿ ಮೊದಲು ವಿಚಾರಿಸಿ ಅನಂತರ ನಮಗೆ ತಿಳಿಸಬೇಕು. ಪತ್ರ ವ್ಯವಹಾರ ಮಾಡುವಾಗ ಚಂದಾ ನಂಬರು ಹಾಕಿರಬೇಕು.

ಕ್ಷಣದ ಮೂಲ

'ಕಸ್ತೂರಿ'ಯ ಏಪ್ರಿಲ್ ಸಂಚಿಕೆಯಲ್ಲಿ ಬಂದ ನ್ನ ಲೇಖನಕ್ಕೆ ಅನೇಕರು ಪ್ರತಿಕ್ರಯಿಸಿದ್ದನ್ನು ವು ಪ್ರಕಟಿಸಿದ್ದೀರಿ-ಅವುಗಳಿಗೆ ಉತ್ತರ ದು:

ಗೋರಕ್ಷಪುರದ ಗೀತಾ ಪ್ರೇಸ್ಸಿನಲ್ಲಿ ವಿಕ್ರಮ 2010ರಲ್ಲಿ ಪ್ರಕಟವಾಗಿರುವ ಶ್ರೀ ಮದ್ಭಾಗ ತ ಮಹಾಪುರಾಣದ ಮೂರನೇ ಸ್ಕಂದದ ನ್ನೊಂದನೆಯ ಅಧ್ಯಾಯದ ಏಳನೆಯ ್ಲೋಕದಲ್ಲಿ ''ಕ್ಷಣ''ದ ನಿರೂಪಣೆ ಇರುವು ನ್ನು ಯಾರು ಬೇಕಾದರೂ ನೋಡಬಹುದು. ಲ್ಲಿ ಕಾಲದ ಸ್ವರೂಪ ವಿವರಣೆಯು ಪ್ರತ್ಯಕ್ಷ ಮ್ಯವಾಗಿಯೂ ಅನುಭವಸಿದ್ಧವಾಗಿಯೂ ರುತ್ತದೆ. ''ಲವ''ದಿಂದ ಅನುಕ್ರಮವಾಗಿ ಯಾಮ''ದವರೆಗೂ ಕಾಲವು ಸುಲಭವಾಗಿ ಂಗಡಿಸಲ್ಪಟ್ಟಿರುವುದನ್ನು ಅಲ್ಲಿ ನಾವು ತಿಳಿಯ ಹುದು.

# ಸ್ವಚಿಂತನ

ತೆಯೇ ಕ್ಷೇತ್ರ ವಿಭಾಗವಾಗಿಯೂ ಇದೆ. ನಾಡೀ ವಿನಾಡಿಗಳೇ ಕ್ಷೇತ್ರ ವಿಭಾಗದಲ್ಲಿ ಕಲೆ-ವಿಕಲೆಗಳಾಗಿ ನಿಂತಿರುತ್ತವೆ. ಭೂಮಿಯು ತನ್ನ ಕಕ್ಷೆಯಲ್ಲಿ ಒಂದು ಕಲೆ

| ಸೂತ್ರಗಳು | | ಅರ್ಥಗಳು |
|---|---|---|
| 1. ನಿಮೇಷಃ ತ್ರಿಲವೋಜ್ಞೇಯಃ | - | ನಿಮೇಷವೆಂದರೆ ಮೂರು ಲವಗಳು. |
| 2. ಆಮ್ನಾತಃ ತೇತ್ರಯಃ ಕ್ಷಣಃ | - | ಕ್ಷಣವೆಂದರೆ ಮೂರು ನಿಮೇಷಗಳು. |
| 3. ಕ್ಷಣಾನ್ ಪಂಚವಿದುಃ ಕಾಷ್ಠಾಂ | - | ಕಾಷ್ಠಾ ಎಂದರೆ ಐದು ಕ್ಷಣಗಳು. |
| 4. ಲಘು ತಾದಶ ಪಂಚಚ | - | ಲಘು ಎಂದರೆ ಹದಿನೈದು ಕಾಷ್ಠಗಳು. |
| 5. ಲಘೂನಿ ವೈಸಮಾಮ್ನಾತಾ ದಶ ಪಂಚಚ ನಾಡಿಕಾಂ | - | ನಾಡೀ (ಅಥವಾ ಘಟೀ) ಎಂದರೆ ಹದಿನೈದು ಲಘುಗಳು. |
| 6. ತೇ ದ್ವೇ ಮುಹೂರ್ತಃ ಪ್ರಹರಃ | - | ಮುಹೂರ್ತ (ಅಥವಾ ಪ್ರಹರ) ಎಂದರೆ ಎರಡು ನಾಡಿಗಳು |
| 7. ಷಡ್ಯಾಮಃ ಸಪ್ತವಾ ನೃಣಾಂ | - | ಆರು ಅಥವಾ ಏಳು ನಾಡಿಗಳಿಗೆ ಒಂದು ಯಾಮ |

ಯಾಮವೆಂದರೆ ದಿವಸದ ಎಂಟನೇ ಒಂದು ಾಗವಾಗುವುದರಿಂದ ಸರಾಸರಿ ಅದು ಏಳೂ ರೆ ಘಳಿಗೆಗಳಿಗೆ ಬಂದು ನಿಲ್ಲುತ್ತದೆ.

ನಾಡೀ ವಿನಾಡೀ ಎಂಬುದನ್ನೇ ಘಟೀ ಘಟೀ ಎಂಬುದಾಗಿ ಪಂಚಾಂಗಗಳಲ್ಲಿ ಈಗಲೂ ಬರೆಯುತ್ತಾ ಇದ್ದಾರೆ, ನಾಡೀ ನಾಡೀ ಎಂಬುದು ಕಾಲವಿಭಾಗವಾಗಿರುವಂ

ಮುಂದುವರಿಯುವುದಕ್ಕೆ ಒಂದು ಘಟೀ ಕಾಲ ವನ್ನು ತೆಗೆದುಕೊಳ್ಳುತ್ತದೆ. ಆದುದರಿಂದ ಘಟೀ ಅಥವಾ ಘಳಿಗೆ ಎಂಬುದು ವೈಜ್ಞಾನಿಕ ವಾದುದು. ಈಗ ''ವಿಲೋಮವಾಗಿ'' ಘಳಿಗೆ ಯಿಂದ ಕ್ಷಣದವರೆಗೂ ಕಾಲವು ಮೆಟ್ಟಿಲು ಮೆಟ್ಟಿಲಾಗಿ ಚಿಕ್ಕದಾಗುವುದನ್ನು ಯಾರು ಬೇಕಾದರೂ ತಿಳಿಯಬಹುದಾಗಿರುತ್ತದೆ.

1. **ಮುಹೂರ್ತ** ಎಂದರೆ ಎರಡು ಘಳಿಗೆ ಅಥವಾ 48 ನಿಮಿಷಗಳು ಅಥವಾ 120 ವಿಘಳಿಗೆಗಳು ಅಥವಾ 2880 ಸೆಕೆಂಡ್‌ಗಳು ಅಥವಾ 2250 ಕ್ಷಣಗಳು.
2. **ಘಳಿಗೆ** ಎಂದರೆ 15 ಲಘುಗಳು ಅಥವಾ 60 ವಿಘಳಿಗೆಗಳು ಅಥವಾ 24 ನಿಮಿಷಗಳು ಅಥವಾ 1440 ಸೆಕೆಂಡಗಳು ಅಥವಾ 1125 ಕ್ಷಣಗಳು.
3. **ಲಘು** ಎಂದರೆ 15 ಕಾಷ್ಠಗಳು ಅಥವಾ 4 ವಿಘಳಿಗೆಗಳು ಅಥವಾ 96 ಸೆಕೆಂಡ್‌ಗಳು (1 ವಿಘಟೀ=24 ಸೆಕೆಂಡ್) ಅಥವಾ 75 ಕ್ಷಣಗಳು.
4. **ಕಾಷ್ಠ** ಎಂದರೆ 5 ಕ್ಷಣಗಳು ಅಥವಾ 6.4 ಸೆಕೆಂಡ್‌ಗಳು.
5. **ಕ್ಷಣ** ಎಂದರೆ 1.28 ಸೆಕೆಂಡ್ (ಕಾಷ್ಠದ 5ನೇ 1 ಭಾಗ) (ಕ್ಷಣವನ್ನು ಸ್ಥೂಲವಾಗಿ ಸೆಕೆಂಡ್ ಎಂದು ಹೇಳಬಹುದು.)
6. **ನಿಮೇಷ** ಎಂದರೆ ಕ್ಷಣದ ಒಂದು ಮೂರನೇ ಭಾಗ ಅಥವಾ 0.427 ಸೆಕೆಂಡ್. (ನಿಮೇಷವೇ ಬೇರೆ-ನಿಮಿಷವೇ ಬೇರೆ ಎಂಬುದು ಜ್ಞಾಪಕವಿರಲಿ!)
7. **ಲವ** ಎಂದರೆ 0.142 ಸೆಕೆಂಡ್ (ನಿಮೇಷದ ಒಂದು ಮೂರನೇ ಭಾಗ)

ಕಾಲವು ನಿಮೇಷದಿಂದ ಮುಂದಕ್ಕೆ ''ಮೂರ್ತ''ಸ್ವರೂಪವಾದುದು ನಿಮೇಷದಿಂದ ತಳಕ್ಕೆ ''ಅಮೂರ್ತ'' ಸ್ವರೂಪವಾದುದು. ಆದುದರಿಂದ ''ಲವ'', ''ಪಲ'', ''ತ್ರುಟಿ'', ''ಲಗ್ನ'', ಇವುಗಳು ಎಲ್ಲವೂ ''ಅಮೂರ್ತ ಸ್ವರೂಪ''ಗಳಾಗಿ ಇರುತ್ತವೆ. ಎಂದರೆ ಪತ್ಯಕ್ಷಗಮ್ಯತೆಯೂ, ಅನುಭವಸಿದ್ಧಿಯೂ ಕೈತಪ್ಪಿಹೋಗುತ್ತವೆ. ಆದುದರಿಂದ ''ವಿದ್ಯಾ ಮಾಧವೀಯ''ದ ಪ್ರಥಮ ಭಾಗದ 37ನೇ ಪುಟದಲ್ಲಿ ನಾರದ ಮಹರ್ಷಿಗಳು ಹೇಳಿರುವಂತೆ,

''ತ್ರುಟೀಃ ಸಹಸ್ರ ಭಾಗೋಯೋ ಲಗ್ನ ಕಾಲಃ
ದೇವೋಽಪಿ ತನ್ನಜಾನಾತಿ ಕಿಂಪುನಃ ನರಃ?''

ಎಂಬ ವಚನವನ್ನು ಎಲ್ಲರೂ ಮನ್ನಿಸುವುದು ಒಳ್ಳೆಯದು.

**ಬೆಂಗಳೂರು** **ಕರಿಗಿರಿ ನರಸಿಂಹಮೂರ್ತಿ**

## ಸರಿಯೋ ತಪ್ಪೋ

1990 ಎಪ್ರೀಲ್ ಸಂಚಿಕೆಯಲ್ಲಿ ಪ್ರಕಟವಾದ ಜಿ.ಜಿ.ಹೆಗಡೆಯವರ ''ವಿಯಟ್‌ನಾವಿನಲ್ಲೊಂದು ಮಮ್ಮಿ'' ಎಂಬ ಲೇಖನದ (ಪುಟ 32) 9ನೇ ವಾಕ್ಯವೃಂದದ 10ನೇಯ ಸಾಲು ''ದೇಹ ಹಾಳಾಗುವ ಹಾಗೂ ಕ್ಷಯಿಸುವ ಲಕ್ಷಣ ಕಂಡು ಬಂದದ್ದೇ ಆದರೆ....'' ಎಂದು ಮುದ್ರಿತವಾಗಿದೆ.

ಆದರೆ ವಾಕ್ಯಕ್ಕೆ ಸರಿಯಾದ ಅರ್ಥ ಬರಬೇಕಿದ್ದಲ್ಲಿ ಅದು ''ದೇಹ ಹಾಳಾಗುವ ಹಾಗೂ ಕ್ಷಯಿಸುವ ಲಕ್ಷಣ ಕಂಡು ಬರದಿದ್ದರೆ ಆದರೆ....'' ಎಂದು ಓದಿಕೊಂಡು ಹೋಗಬೇಕು.

ಎರಡನೆಯದಾಗಿ, ಶ್ರೀಕಾಂತ ಮಳಗಿಯವರ ಸಂಗ್ರಹ ''ಪರಮಾಣು ಯುದ್ಧಕ್ಕೆ ಎರಡೇ ತಿಂಗಳಿರುವಾಗ''ದಲ್ಲಿ ಸಹ ಇದೇ ತೆರನಾದ ಮುದ್ರಣ ದೋಷ ಕಂಡು ಬಂದಿರುವುದು. ಈ ಸಂಗ್ರಹದ ಮೊದಲನೆಯ ವಾಕ್ಯವೃಂದದ (ಪುಟ 106) 13ನೇಯ ಸಾಲಿನಲ್ಲಿ ''ಹತ್ತು ಮೈಲು'' ಎಂದು ಮುದ್ರಿತವಾಗಿದೆ. ಆದರೆ, ಅದು ''ಹತ್ತು ಅಡಿ'' ಎಂದಿರಬೇಕಾಗಿತ್ತೆಂಬುವುದು ನನ್ನ ಅನಿಸಿಕೆ.

**ಜಮಖಂಡಿ** **ಸತೀಶ ಹೆಬ್ಬಾರ**

(ಮೊದಲನೆಯದು ನಿಮ್ಮದು ಸರಿ; ಹಾಗೆಯೆ ಎರಡನೆಯದು ನಮ್ಮದು ಸರಿ **-ಸಂ)**

# ಈ ಸಂಚಿಕೆಯಲ್ಲಿ



## ಪುಸ್ತಕ ವಿಭಾಗ

# ಪ್ರಧಾನಿ ಆಮೆ

ಚೀನಾದ ಚಕ್ರವರ್ತಿ ಪ್ರಧಾನಮಂತ್ರಿಯ ಹುದ್ದೆಗೆ ಅತ್ಯಂತ ಜ್ಞಾನಿಯನ್ನು ನಿಯಮಿಸಲು ನಿರ್ಧರಿಸಿ, ಹಾಗೆ ಇರುವವ ಯಾರೆಂದು ವಿಚಾರಿಸಿದ.

ಆ ಕಾಲದ ಮಹಾಜ್ಞಾನಿ ಉತ್ತರದ ಪರ್ವತದಲ್ಲಿ ವಾನಪ್ರಸ್ಥನಾಗಿರುವುದು ತಿಳಿಯಿತು. ಚರ್ಕವರ್ತಿಯ ಆಜ್ಞೆಯಂತೆ ದುರ್ಗಮ ಅರಣ್ಯಗಳನ್ನು ದಾಟಿ ರಾಜಪ್ರತಿನಿಧಿಗಳು ಆ ಪರ್ವತದ ಆಶ್ರಮವನ್ನು ಜಾಲಾಡಿದರು. ನದಿಯಾಚೆ ಏನೋ ಗುನುಗುತ್ತ ಮೀನು ಹಿಡಿಯುತ್ತಿದ್ದ ಅರೆಬತ್ತಲೆ ವ್ಯಕ್ತಿಯೊಬ್ಬನನ್ನು ಬಿಟ್ಟು ಬೇರಾರೂ ಅಲ್ಲಿ ಇರಲಿಲ್ಲ.

ಪಕ್ಕದ ಹಳ್ಳಿಯಲ್ಲಿ ವಿಚಾರಿಸಿದಾಗ ''ಆ ಅವನೇ ಜ್ಞಾನಿ,'' ಎಂದು ತಿಳಿದು, ಅಲ್ಲಿಗೇ ಪುನಃ ಬಂದು, ಕಾಯುತ್ತಾ ನಿಂತರು. ಮೀನು ಹಿಡಿದಾದ ಮೇಲೆ ನದಿ ಹಾದು ಆತ ಈಚೆ ಬಂದ. ಬರಿಗಾಲು, ಚಿಂದಿ ಚೀಲದಲ್ಲಿ ನಾಲ್ಕು ಮೀನು, ಕೈಯಲ್ಲಿ ಕೋಲು, ಗೌರವದಿಂದ ತಲೆಬಾಗಿದವರನ್ನು, ''ಮೀನು ಬೇಕೆ?'' ಎಂದು ವಿಚಾರಿಸಿದ! ಅವರು ಕಾಣಿಕೆಗಳನ್ನು ಅವನ ಕಾಲಬಳಿ ಇಟ್ಟು, ''ಮಹಾಸ್ವಾಮಿ, ಇವು ಸಾರ್ವಭೌಮರು ತಮಗೆ ಒಪ್ಪಿಸಿದ ಗೌರವ. ತಾವು ಇದನ್ನು ಸ್ವೀಕರಿಸಿ. ತಾವು ಪ್ರಧಾನಮಂತ್ರಿಯಾಗಬೇಕೆಂಬುದು ಚಕ್ರವರ್ತಿಗಳ ಬಯಕೆ,'' ಎಂದರು.

''ಪ್ರಧಾನಮಂತ್ರಿ? ನಾನೇ? ನಿಮ್ಮ ಚಕ್ರವರ್ತಿಗಳಿಗೆ ತಲೆ ಸರಿಯಿಲ್ಲವೇ?'' ಎಂದು ಬಿದ್ದು ಬಿದ್ದು ನಕ್ಕ. ದಿಕ್ಕು ತೋಚದೆ ಸಂದಿಗ್ಧದಲ್ಲಿ ನಿಂತವರನ್ನು ನೋಡಿ, ತನ್ನ ನಗೆ ಆರಿದ ಮೇಲೆ ಮತ್ತೆ ಮಾತಾಡಿಸಿದ ಆ ಜ್ಞಾನಿ,

''ಚಕ್ರವರ್ತಿಗಳ ಸ್ವಂತ ದೇವರ ಮನೆಯ ಪೀಠದಲ್ಲಿ ರತ್ನಖಚಿತವಾದ ಚಿಪ್ಪುಳ್ಳ ಪವಿತ್ರ ಆಮೆಯ ಅವಶೇಷವಿದೆ ಅಲ್ಲವೆ?''

''ಅಹುದು ಮಹಾಸ್ವಾಮಿ.''

''ಇಗೋ ಈ ಕೊಚ್ಚೆಯಲ್ಲಿ ಬಾಲ ಆಡಿಸ್ತಾ ಇರೋ ಮರಿ ಆಮೆ ಆ ಪವಿತ್ರ ಆಮೆಯ ಜತೆ ಸ್ಥಳ ಬದಲಾವಣೆ ಮಾಡಿಕೊಳ್ಳುತ್ತದೆಯೇ?''

''ಇಲ್ಲ ಸ್ವಾಮಿ.''

''ಚಕ್ರವರ್ತಿಗೆ ಹೇಳಿ.. ನಾನೂ ಹೀಗೆ ಸ್ಥಾನ ಬದಲಾವಣೆ ಬಯಸಲಾರೆ ಅಂತ, ಏಕೆಂದರೆ, ಪಾಣಿಪೀಠದ ಮೇಲೆ ಯಾರೂ ಜೀವಂತ ಇರಲಾರರು!''

To have or to be? ಶ್ರೀಮಂತಿಕೆ, ಪಟ್ಟದ ಪ್ರಭಾವದಲ್ಲಿ ವ್ಯಕ್ತಿ ಮರೆಯಾಗಲೇಬೇಕಾಗುತ್ತದೆ.

ಸಂಗ್ರಹ: ಎಚ್.ಪಾಂಡುರಂಗ ವಿಠಲ



# ಈ ತಾಯಿಗಳ ಬಗೆಗೇಕೆ ತಾತ್ಸಾರ ಭಾವ?



ಆರತಿಗೊಬ್ಬ ಮಗಳು – ಕೀರುತಿಗೊಬ್ಬ ಮಗ. ಶಾಲೆಯಿಂದ ಮನೆಗೆ ಮರಳಿದ್ದಾರೆ. ತಾಯಿಗೇನೋ ಅತ್ಯವಶ್ಯ ವಸ್ತು ಬೇಕಿದೆ. ತಂದು ಕೊಡಲು ಮಗನನ್ನು ಕೇಳುತ್ತಾಳೆ. "ತುಂಬಾ ಸುಸ್ತಾಗಿದೆ ಕಣಮ್ಮ, ಅಕ್ಕನಿಗೆ ಹೇಳು" ಎನ್ನುತ್ತಾನೆ ಕುಲದೀಪಕ. "ನನಗೂ ದಣಿವಾಗಿದೆ ಅಮ್ಮ," ಎಂದು ಮುದ್ದುಮುಖದ ಹುಡುಗಿ ಹೇಳುತ್ತಿದ್ದಂತೆಯೆ ಶುರುವಾಗುತ್ತದೆ ತಾಯಿಯ ಬೈಗಳು, "ನೀನು ಹುಡುಗಿ ಮದುವೆಯಾಗಿ ಬೇರೆ ಮನೆ ಸೇರೋಳು. ಹೆಣ್ಣು ಎಂದೂ ದಣಿವು

ಗಿಣಿವು ಅನ್ನಬಾರದು. ಆತ ಏಷ್ಟಾದರೂ ಹುಡುಗ. ತಿಳೀತಾ? ಏಳು, ಕೂತುಬಿಟ್ಟೆಯಲ್ಲ'' ಮುಂತಾಗಿ.

''ಸ್ವಲ್ಪ ಯೋಚಿಸಿ'' ಎನ್ನುತ್ತದೆ ಉದ್ಘೋಷಕನ ಕಂಠ. ಇದೊಂದು ಟಿ.ವಿ.ಜಾಹೀರಾತು ಚಿತ್ರ.

ಇದೇ ಸರಣಿಯ ಇನ್ನೊಂದು ಚಿತ್ರದಲ್ಲಿ ಒಬ್ಬ ಹತ್ತರೊಳಗಿನ ಬಾಲೆ. ಹುಡುಗರ ಹಿಂಡಿಗೆ ಸವಾಲು ಹಾಕಿ, ದಾಂಡಿನಿಂದ ಚಿಣಿಯೆಬ್ಬಿಸಿ ಹೊಡೆದು, ಅದು ರೊಂಯ್ಯೆನ್ನುತ್ತ ಕಣ್ಣಿಗೆ ಕಾಣದ ಹಾಗೆ ಹಾರಿಹೋಗುತ್ತಿದ್ದಂತೆಯೇ, ''ಒಂದು ಅವಕಾಶ ಕೊಟ್ಟು ನೋಡಿದರೆ ತಾನೆ ನಮ್ಮ ಸಾಮರ್ಥ್ಯ ಗೊತ್ತಾಗೋದು?'' ಎಂದು ಮತ್ತೊಂದು ಸವಾಲೆಸೆಯುತ್ತಾಳೆ ಆ ಹಳ್ಳಿಯ ಹುಡುಗಿ.

ಸ್ತ್ರೀ ಸಮಾನತೆ, ಸ್ತ್ರೀ ವಿಮೋಚನಾ ಚಳವಳಿಯ ಕುರಿತು ಚಿಕ್ಕದಾಗಿ ಆದರೆ ತುಂಬ ನೇರವಾಗಿ ನಮ್ಮ ಸಮೂಹ ಮಾಧ್ಯಮಗಳು ಪರಿಚಯಿಸುವ ಪರಿಯಿದು. ಶತಮಾನಗಳಿಂದ ''ನ ಸ್ತ್ರೀ ಸ್ವಾತಂತ್ರ್ಯಮರ್ಹತಿ'' ಎಂಬ ಮನುವಾಕ್ಯವನ್ನೂ, ''ಯತ್ರ ನಾರ್ಯಸ್ತು ಪೂಜ್ಯಂತೇ ರಮಂತೇ ತತ್ರ ದೇವತಾಃ'' ಎಂಬ ಅಮೃತವಾಣಿಯನ್ನೂ ಒಟ್ಟೊಟ್ಟಿಗೆ ಉಚ್ಚರಿಸಿಕೊಂಡು ಬಂದಿದ್ದ ಭಾರತೀಯ ಸಮಾಜ. ನಮ್ಮದು ವೈವಿಧ್ಯಗಳ ನಾಡು: ಆಭಾಸಗಳಲ್ಲೂ ವೈವಿಧ್ಯ!

ಇದು ಬರಿ ಭಾರತಕ್ಕೆ ಸೀಮಿತವಾದ ಚಿತ್ರವಲ್ಲ-ಏಶಿಯದ ಹಲವಾರು ದೇಶಗಳಲ್ಲಿ ಬೆಳೆದು ಬೇರುಬಿಟ್ಟಿರುವ ಪೂರ್ವಾಗ್ರಹ. ಹೆಣ್ಣಾಗಿರುವ ತಾಯಿಗೇ ಬೇಡ ಹೆಣ್ಣು ಶಿಶು! ಅವಳಿಗೆ 'ವರದಾನ'ವಾಗಿ ಪರಿಣಮಿಸಿದೆ ಗರ್ಭಸ್ಥ ಶಿಶುವಿನ ಲಿಂಗ ಪರೀಕ್ಷೆ. ''ಹುಟ್ಟಲಿರುವ ಶಿಶು ಮಗನಾಗಿದ್ದರೆ ಇರಲಿ, ಮಗಳಾಗಿದ್ದರೆ ಬೇಡ.''

ತಾಯಿ ಎಂದಿಗೂ ತಾಯಿಯೆ. ಅಂದಿಗೂ ಇಂದಿಗೂ ಮುಂದಿಗೂ. ಆಕೆ ಮಮತಾಮಯಿ. ಸಂಸಾರದ ಸಮತೋಲದ ಪರಡಿ. ಆದರೆ ನಾಳಿನ ಈ 'ತಾಯಿ'ಗಳ ಬಗೆಗೇಕೆ ತಾತ್ಸಾರ ಭಾವ? ಸದ್ಯದ ಪರಿಸ್ಥಿತಿಯೆ ಮುಂದುವರಿದರೆ ಏಶಿಯದಲ್ಲಿ ಪುರುಷ ಪ್ರಾಬಲ್ಯವೆ ಜಾಸ್ತಿಯಾಗಿಬಿಟ್ಟೀತು. ಕೌಶಲ, ಸೌಂದರ್ಯ, ಮಮತೆಗಳೆಂಬ ಪದಗಳೇ ಅಪರಿಚಿತವಾಗಿಬಿಟ್ಟಾವು. ●

# ಯಾರು ಕಾರಣರು?

ಡಾ. ಎಲ್. ಎಸ್. ಕುಲಕರ್ಣಿ

ಗರ್ಭಿಣಿಯೋರ್ವಳು ಹಿರಿಯರಿಗೆ ನಮಸ್ಕರಿಸಿದಾಗ 'ಗಂಡುಮಗುವಿನ ತಾಯಿಯಾಗು' ಎಂದೇ ಆಶೀರ್ವದಿಸುತ್ತಾರೆ! ಆದರೆ ಅವರ ಆಶೀರ್ವಾದ ಅಷ್ಟು ಸುಲಭದಲ್ಲಿ ಸತ್ಯವಾಗುವುದಿಲ್ಲವಲ್ಲ! ಅಕಸ್ಮಾತ್ ಅವಳು ಹೆಣ್ಣು ಹೆತ್ತರೆ ಎಲ್ಲರಿಂದಲೂ ಹೀಯಾಳಿಕೆ!

ಒಬ್ಬ ಮಹಿಳೆಗೆ ಇರುವ ಎರಡೂ ಹೆಣ್ಣು ಮಕ್ಕಳೇ. ಅವಳೀಗ ಮೂರನೆಯ ಸಾರಿ ಗರ್ಭಿಣಿ. ಈ ಸಲವೂ ಹೆಣ್ಣಾದರೆ? ಈ ವಿಚಾರದಿಂದ ಅವಳು ತತ್ತರಿಸಿ ಹೋಗುತ್ತಾಳೆ. ಅವಳಿಗೆ ಗಂಡುಮಗುವೇ ಬೇಕು. ಇಲ್ಲವಾದಲ್ಲಿ ಅವಳ ಪಾಡು ನಾಯಿ ಪಾಡು. ಅದಕ್ಕಾಗಿ ಅವಳು ಆಸ್ಪತ್ರೆಗೆ ಧಾವಿಸುತ್ತಾಳೆ. ಮಗು ಗಂಡೋ ಹೆಣ್ಣೋ ಎಂದು ಈಗ ಗರ್ಭಧಾರಣೆಯ ಕೆಲವು ತಿಂಗಳುಗಳಲ್ಲೇ ಕಂಡು ಹಿಡಿಯುತ್ತಾರೆ. ಹೊಟ್ಟೆಯಲ್ಲಿ ಬೆಳೆಯುತ್ತಿರುವ ಮಗು ಹೆಣ್ಣಾಗಿದ್ದರೆ ಆ ಮಗು ತಾಯಿಗೆ ಬೇಕಿಲ್ಲ. ಅದನ್ನು ತೆಗೆಯಲು ವೈದ್ಯರಿಗೆ ಶಕ್ಯವಿದೆ. ಹೀಗೆ ಭ್ರೂಣಹತ್ಯೆ ನಡೆದು ಹೋಗುತ್ತದೆ. ಆದರೆ ಇದರಲ್ಲಿ ತಪ್ಪು ಯಾರದು? ತಾಯಿಯದೇ? ವೈದ್ಯರದೆ? ಅಥವಾ ಹೆಣ್ಣಿನ ಬಗ್ಗೆ ಕೀಳರಿಮೆ ಬೆಳೆಯಲು ಕಾರಣಕರ್ತೃವಾದ ನಮ್ಮ ಸಮಾಜದ್ದೆ?

ಇದು ಭಾರತದಲ್ಲಷ್ಟೇ ಅಲ್ಲ, ಜಗತ್ತಿನ

ನೇಕ ಅಭಿವೃದ್ಧಿಶೀಲ ರಾಷ್ಟ್ರಗಳಲ್ಲಿ ಕಂಡು ರುವ ಅತಿ ಸಾಮಾನ್ಯ ದೃಶ್ಯ! ಅಭಿವೃದ್ಧಿಹೊಂ ದ ರಾಷ್ಟ್ರಗಳಲ್ಲಿ ಇದು ಕಂಡು ಬರುವುದಿಲ್ಲ. ಮ್ಮಲ್ಲಿ ಹೆಣ್ಣುಮಗು ಸಂಸಾರಕ್ಕೊಂದು ಭಾರ ಂಬ ಭಾವನೆ ಬಲವಾಗಿ ಬೇರೂರಿದೆ. ಅದಕ್ಕೆ ರಣಗಳು ಹಲವಾರು: ಹೆಣ್ಣು ಮಗು ಬೆಳೆದ ೀಲೆ ಅವಳ ಮದುವೆಯ ಖರ್ಚು - ವರದ ಣೆ ಇವೆಲ್ಲ ತಂದೆಗೆ ಹೊರೆಗಳೇ! ಹೆಣ್ಣು ಕ್ಕಳ ಸಂಖ್ಯೆ ಹೆಚ್ಚಿದಂತೆಲ್ಲ ವೆಚ್ಚದ ಭಾರ ಚ್ಚುತ್ತಾ ಹೋಗುತ್ತದೆ. ಒಬ್ಬ ಬಡ ತಂದೆ ವನ್ನೆಲ್ಲ ಹೇಗೆ ನಿಭಾಯಿಸಬಲ್ಲ? ಹೆಣ್ಣು ುಗಳು ಎಷ್ಟೆಂದರೂ ನಾಳೆ ಈ ಮದುವೆಯಾದ ಂತರ ಬೇರೆ ಮನೆ ಸೇರುವವಳು. ಅವಳಿಂದ ಹುಟ್ಟಿದ ಮನೆಗೆ ಏನೂ ಲಾಭವಿಲ್ಲ. ಒಂದು ವೇಳೆ ಅವಳು ಕಲಿತು ನೌಕರಿ ಮಾಡಿದರೂ ಕೂಡ. ಅದರ ಲಾಭ ಗಂಡನ ಮನೆಗೇ ಅಲ್ಲವೆ? ಈ ಎಲ್ಲ ವಿಚಾರಗಳೂ ಕಟು ಸತ್ಯ ಅಲ್ಲವೆ? ಅದೇ ಒಂದು ಗಂಡುಮಗುವಿದ್ದರೆ ಅವನು ಕಲಿತು ದೊಡ್ಡವನಾದ ಮೇಲೆ ತಾಯಿ ತಂದೆಯರ ಆಸರೆಗೆ ಬರುತ್ತಾನೆ, ಎಂಬ ಆಸೆ ಸಹಜವಾದದ್ದು. ನಮ್ಮ ದೇಶದಲ್ಲಿ ಬರೀ ಹೆಣ್ಣು ಮಕ್ಕಳಿರುವ ತಂದೆ ತಾಯಿಯರ ಸ್ಥಿತಿ ಮುಪ್ಪಿನಲ್ಲಿ ಶೋಚನೀಯವಾಗುವುದು ಅಪ ರೂಪವೇನಲ್ಲ. ಎಷ್ಟೇ ಪ್ರತಿಭಾವಂತ ಹೆಣ್ಣು ಮಕ್ಕಳಿದ್ದರೂ ಅವರಿಂದ ತಂದೆತಾಯಂದಿರಿಗೆ ಅನುಕೂಲವಾಗುವುದಿಲ್ಲ. ಒಂದು ವೇಳೆ ಆಕೆ ತಂದೆತಾಯಿಯರನ್ನು ಸಾಕಬಯಸಿದರೂ ಅದು ತಂದೆ ತಾಯಂದಿರಿಗೆ ಒಂದು ತರಹದ ದಾಕ್ಷಿಣ್ಯ ವಾಗುತ್ತದೆ. ಯಾವ ಅಭಿಮಾನಿ ತಂದೆ ತಾಯಿ ಗಳೂ ಮಗಳ ಅಥವಾ ಅಳಿಯನ ಗಳಿಕೆಯ

---

**ಕನ್‌ಫ್ಯೂಶಿಯಸ್** ಚೀನದ ಮನು. ಆತ ಕೂಡ "ಸ್ತ್ರೀಗೆ ಸ್ವಾತಂತ್ರ್ಯ ಸಲ್ಲ"-ವೆಂದೇ ಹೇಳಿದಾತ. ದಕ್ಷಿಣ ಕೋರಿಯಾ-ದಲ್ಲೂ ಆತನ ವಾಕ್ಯ ಸರ್ವಮಾನ್ಯ.

ಚೀನ ಮತ್ತು ಭಾರತಗಳ ಜನಸಂಖ್ಯೆ ಜಗತ್ತಿನ ಜನಸಂಖ್ಯೆಯ ಐದರಲ್ಲಿ ಎರಡು ಪಾಲಿನಷ್ಟು. ಜನ ನಿಯಂತ್ರಣ ಈ ಎರಡು ದೇಶಗಳ ಪರಮ ಧ್ಯೇಯವಾಗಿರುವುದು ಕೂಡ ಸ್ತ್ರೀ ಶಿಶುಗಳಿಗೆ ಮಾರಕವಾಗಿ ಪರಿ-ಣಮಿಸಿದೆ. 1979ರಿಂದ ಚೀನ ಏಕ ಶಿಶು ಕುಟುಂಬ ಸೂತ್ರವನ್ನು ಜಾರಿಗೆ ತಂದಿತು. ತತ್ಪರಿಣಾಮವಾಗಿ ತಂದೆ-ತಾ-ಯಂದಿರು ಮೂರಕ್ಷರದ ಬದಲು ಎರಡ-ಕ್ಷರವನ್ನೇ ಜಪಿಸತೊಡಗಿದರು: 'ಮಗಳು' ಬೇಡವಾದಳು 'ಮಗ' ಬೇಕಾದ ಅವರಿಗೆಲ್ಲ. ಅಕ್ರಮ ಗರ್ಭಪಾತ, ಭ್ರೂಣದ ಲಿಂಗ ಪರೀಕ್ಷೆಗಳು ಚೀನದ ಹೆಂಗಸರ ಆರೋ-ಗ್ಯದ ಮೇಲೆ ಕೆಟ್ಟ ಪರಿಣಾಮ ಬೀರತೊ-ಡಗಿದವು. ಬೇಡದ ಭ್ರೂಣಹತ್ಯೆಯೊಂದು ಲಾಭದಾಯಕ ವೃತ್ತಿಯಾಗಿ ಬೆಳೆಯತೊಡ-ಗಿತು. ಸರಕಾರ ಭ್ರೂಣದ ಲಿಂಗ ಪರೀಕ್ಷೆ-ಭ್ರೂಣ ಹತ್ಯೆಗಳನ್ನು 'ಮಹಾಪರಾಧ'ಗ-ಳೆಂದು ಸಾರಿತು. ಶಿಶು ಹಂತಕರನ್ನು ಹಿಡಿಯಲು ಜಾಲ ಬೀಸಿತು. ಇದರಲ್ಲಿ ಅಲ್ಲಿಯ ಕುಟುಂಬ ಯೋಜನಾ ಇಲಾ-ಖೆಯೇ ಅಪರೋಕ್ಷವಾಗಿ ತೊಡಗಿಕೊಂಡಿ-ರುವುದು ಸರಕಾರಕ್ಕೂ ಗೊತ್ತು. ಆದರೆ ಆ ಇಲಾಖೆಯವರು 'ಜನಸಂಖ್ಯಾ ನಿಯಂ-ತ್ರಣ'ದ ರಕ್ಷೆಯಲ್ಲಿದ್ದಾರಲ್ಲ.

ಕೆಲವು ಪ್ರತ್ಯಕ್ಷ ಸಾಕ್ಷಿಗಳಿವು: ಹೊಲ-ಗದ್ದೆಗಳ ಬದುವಿನಲ್ಲಿ, ತಗ್ಗುಗಳಲ್ಲಿ ನವ-ಜಾತ ಸ್ತ್ರೀ ಶಿಶುಗಳಶವಗಳು ಕಂಡು ಬರು-ತ್ತವೆ. ಗೋಣಿ ಚೀಲಗಳಲ್ಲಿ, ಪೆಟ್ಟಿಗೆಗಳಲ್ಲಿ ತುಂಬಿದ ಇಂಥ ಕೂಸುಗಳು ನದಿಗಳಲ್ಲಿ ತೇಲಿಬರುವುದುಂಟು. ತಿಪ್ಪೆಗಳಲ್ಲಿ ಆಗೀಗ ನಾಯಿಗಳಿಗೆ, ಹದ್ದುಗಳಿಗೆ ಆಹಾರವಾಗು-ವುದೂ ಉಂಟು.

ಅಲ್ಲಿಯ 'ಪೀಪಲ್ಸ್ ಡೇಲಿ' ಪತ್ರಿ-ಕೆಯ ಸಮೀಕ್ಷೆಯೊಂದರ ಪ್ರಕಾರ 1980-81ರ ಅವಧಿಯಲ್ಲಿ ಉತ್ತರ ಅನ್ಹುಯ್ ಪ್ರಾಂತದಲ್ಲಿ ನದಿಯಲ್ಲಿ ತೇಲಿಬಂದ ಸ್ತ್ರೀ ಶಿಶು ಶವಗಳ ಸಂಖ್ಯೆ ನಲವತ್ತು. 'ನಾನ್-

ಮೇಲೆ ಜೀವನ ನಿಭಾಯಿಸಬಯಸುವದಿಲ್ಲ! ಅವರ ಆಶ್ರಯದಲ್ಲಿರಬಯಸುವುದಿಲ್ಲ. ಇದು ನಮ್ಮ ದೇಶದ ಈಗಿನ ಸಾಮಾಜಿಕ ಸ್ಥಿತಿಗತಿ. ಇದು ಬದಲಾಗುವವರೆಗೂ ಗಂಡುಮಗುವಿನ ಮಹತ್ವ ಕಡಿಮೆಯಾಗಲಾರದು. 'ಮಗಳ ಮನೆಯಲ್ಲಿ ಎಲ್ಲ ಸುಖ-ಸೌಲಭ್ಯಗಳಿದ್ದರೂ ಎಷ್ಟೇ ಕಷ್ಟಕಾರ್ಪಣ್ಯಗಳುಳ್ಳ ಮಗನ ಮನೆಯೇ ಲೇಸು' ಎಂಬ ಭಾವನೆ ಈ ಎಲ್ಲ ಆಗುಹೋಗುಗಳಿಗೆ ಮೂಲ ಕಾರಣ.

ಹಾಗಾದರೆ ಗಂಡುಮಗು ಬೇಕು - ಹೆಣ್ಣು ಬೇಡ ಎಂಬ ತಾಯಿಯ ಬಯಕೆ - ವಿಚಾರ - ಸಾಧ್ಯವೆ? ಇನ್ನೊಂದು ಹೆಣ್ಣು ಮಗು ಬೇಡವಾದಲ್ಲಿ ಭ್ರೂಣ ಹತ್ಯೆ ಮಾಡುವದು ಸರಿಯೆ? ಗರ್ಭಸ್ಥ ಶಿಶುವಿನ ಲಿಂಗನಿರ್ಧಾರ ಮಾಡಬೇಕೋ ಬೇಡವೋ? ಈ ಎಲ್ಲ ವಿಚಾರಗಳ ಬಗ್ಗೆ ಈಗ ಬಹಳಷ್ಟು ವ್ಯಾಪಕವಾದ ಚರ್ಚೆ ನಡೆಯುತ್ತಿದೆ. ಈಗೀಗ ಲಭ್ಯವಾಗಿರುವ ಹೊಸ ವಿಧಾನಗಳಿಂದ (ಅಲ್ಟ್ರಾ ಸೋನೋಗ್ರಫಿ ಅಮ್ನಿಯೋ ಸೆಂಟೆಸಿಸ್) ಗರ್ಭಸ್ಥ ಶಿಶುವಿನ ಲಿಂಗವನ್ನು ಮೂರು ತಿಂಗಳಲ್ಲಿಯೇ ಗೊತ್ತು ಮಾಡುವದು ಸುಲಭ ಸಾಧ್ಯ. ಒಂದು ವೇಳೆ ಮಗು ಹೆಣ್ಣಾಗಿದ್ದಲ್ಲಿ ತಾಯಿ ಅದನ್ನು ಬೆಳೆಗೊಡಬಯಸುವುದಿಲ್ಲ. ಇದು ಸರಿಯೆ? ಆದ್ದರಿಂದ ಗರ್ಭಸ್ಥ ಶಿಶುವಿನ ಲಿಂಗನಿರ್ಧಾರವನ್ನೆ ಪ್ರತಿಬಂಧಿಸಿದರೆ ಹೇಗೆ? ಈ ನವವಿಧಾನಗಳಾದ ಅಮ್ನಿಯೋಸೆಂಟೆಸಿಸ್, ಅಲ್ಟ್ರಾ ಸೋನೋಗ್ರಫಿ ಮುಂತಾದವುಗಳು ವೈದ್ಯಕೀಯ ಕ್ಷೇತ್ರದಲ್ಲಿ ಬಳಕೆಗೆ ಬಂದದ್ದು ಬೇರೆ ಉದ್ದೇಶಗಳಿಗಾಗಿ. ಗರ್ಭಸ್ಥ ಶಿಶುವಿನಲ್ಲಿ ಏನಾದರೂ ಲೋಪದೋಷಗಳು ಇದ್ದರೆ ಅವನ್ನು ಕಂಡುಹಿಡಿದು ಅದರ

ಫಾಂಗ್ ಡೇಲಿ' ಪತ್ರಿಕೆಯ ವರದಿಯೊಂದು 1982ರಲ್ಲಿ 200 ಸ್ತ್ರೀ ಶಿಶುಗಳು ಹೀಗೆ ಹತ್ಯೆಗೀಡಾದುದನ್ನು ತಿಳಿಸಿದೆ. ಇದು ನಡೆದದ್ದು ಅಲ್ಲಿಯ ದಕ್ಷಿಣ ಗಾಂಗ್ಡಾಂಗ್ ಪ್ರಾಂತದಲ್ಲಿ. ಅಲ್ಲಿಯ ಹಳ್ಳಿಗಾಡಿನಲ್ಲಿರುವ ಸೂಲಗಿತ್ತಿಯರು ಹೆರಿಗೆ ಮಾಡಿಸುವ ಮುನ್ನ ಆ ಕೋಣೆಯಲ್ಲಿ ಬಿಸಿನೀರು ತುಂಬಿದ ಬಾಲದಿ ಇಡುವಂತೆ ಒತ್ತಾಯಿಸುತ್ತಾರಂತೆ. ಹುಟ್ಟಿದ ಶಿಶು ಹೆಣ್ಣಾಗಿದ್ದರೆ ಕೂಡಲೆ ಈ ಬಾಲದಿಯಲ್ಲಿ ಮುಳುಗಿಸಲಾಗುತ್ತದಂತೆ.

ದಕ್ಷಿಣ ಕೋರಿಯದಲ್ಲಿ 1985ರಲ್ಲಿ ನಡೆದ ಖಾನೇಸುಮಾರಿಯಲ್ಲಿ ಕಂಡುಬಂದ ಅಂಶವೆಂದರೆ ಹುಡುಗಿಯರಿಗಿಂತ ಹುಡುಗರ ಸಂಖ್ಯೆ ಹೆಚ್ಚಿಗಿರುವುದು. ಸ್ತ್ರೀಭ್ರೂಣ ಹತ್ಯೆಯ ಪ್ರಕರಣಗಳು ಹೆಚ್ಚುತ್ತಿರುವುದನ್ನು ಗಮನಿಸಿದ ಕೋರಿಯನ್ ಮೆಡಿಕಲ್ ಅಸೋಸಿಯೇಶನ್ 1986ರಲ್ಲಿ ಭ್ರೂಣದ ಲಿಂಗ ಪರೀಕ್ಷೆಯನ್ನು ಸ್ವಯಿಚ್ಛೆಯಿಂದ ಬಹಿಷ್ಕರಿಸಿತು.

ಹಾಂಗ್‌ಕಾಂಗಿನ ಚಿತ್ರವೇ ಬೇರೆ. ಅಲ್ಲಿಯ ಜನಕ್ಕೆ ಒಂದಾದರೂ ಹೆಣ್ಣುಮಗು ಬೇಕೇಬೇಕು: ಒಂದಕ್ಕಿಂತ ಹೆಚ್ಚಿಗೆಯಾಗುವುದಾದರೆ ಬೇಡ. ಹೀಗಾಗಿ ಉಳಿದ ದೇಶಗಳಿಗೆ ಹೋಲಿಸಿದರೆ ಅಲ್ಲಿ ಸ್ತ್ರೀ ಶಿಶು ಭ್ರೂಣ ಹತ್ಯೆಯ ಪ್ರಮಾಣ ಅತಿ ಕಡಿಮೆ.

ಜಪಾನ್ ಮತ್ತು ಸಿಂಗಾಪುರಗಳಲ್ಲಿ ಸಾಕ್ಷರತಾ ಪ್ರಮಾಣ ಮತ್ತು ಜೀವನ ಮಟ್ಟ ಹೆಚ್ಚಿಗಿರುವುದರಿಂದಾಗಿ ಹೆಣ್ಣು ಕೂಸುಗಳ ಬಗೆಗಿನ ಭೇದಭಾವ ಅತ್ಯಪರೂಪ. ದಕ್ಷಿಣ ಕೋರಿಯದಲ್ಲಿತ್ತೀಚೆ 'ಏಕ ಶಿಶು ಕುಟುಂಬ'ದತ್ತ ಒಲವು ಹೆಚ್ಚುತ್ತಿದೆ. ಅಲ್ಲಿಯ ಟಿ.ವಿ.ಗಳಲ್ಲಿ ಬರುವ ಜಾಹೀರಾತು ಚಿತ್ರದಲ್ಲಿ ದಂಪತಿಯೊಂದು ಒಕ್ಕೊರಲಿನಿಂದ "ನಮಗಿರಲಿ ಮಗುವೊಂದೆ" ಎನ್ನುತ್ತದೆ ಕೂಡಲೇ ಕ್ಯಾಮರಾ ಮೆಲ್ಲನೆ ತಿರುಗತೊಡಗಿ ಒಂದೆಡೆ ನಿಂತಾಗ ಮಸುಕಾದ ಆಕೃತಿಯೊಂದು ಸ್ಪಷ್ಟವಾಗುತ್ತಿದ್ದಂತೆಯೇ ಹೆಣ್ಣು ಮಗುವೊಂದು ನಕ್ಕು "ಹೌದು ನನಗೂ ಹಾಗೆಯೇ" ಎಂದು ತನ್ನಂಗಿಯಲ್ಲಿ ಬಚ್ಚಿಟ್ಟ ಬೊಂಬೆಯನ್ನು ತೋರಿಸುತ್ತದೆ. ಅದೊಂದು ಸುಂದರ ಹೆಣ್ಣುಮಗುವಿನ ಬೊಂಬೆ.

ಾರಣೋಪಾಯಕ್ಕಾಗಿ, ಇವುಗಳಿಂದ ಮಗು
ನ ಲಿಂಗನಿರ್ಣಯ ಮಾಡಬಹುದು ಎಂಬುದು
ಂದರ್ಭಿಕವಾಗಿ ಕಂಡುಬಂದ ವಿಷಯ. ಆದರೆ
ಗ ಅದಕ್ಕೇ ಹೆಚ್ಚಿನ ಮಹತ್ವ ನೀಡಲಾಗು
ದೆ. ಎಷ್ಟೋ ಕಡೆಗಳಲ್ಲಿ ಇದರ ದುರುಪ
ೋಗಪಡೆದು ವೈದ್ಯರು ಸಿರಿವಂತರಾಗುತ್ತಿ
ರೆ ಎಂದೂ ದೂಷಿಸಲಾಗುತ್ತಿದೆ.

ಈ ವಿಷಯದ ಬಗ್ಗೆ ಶ್ರೀಮತಿ ಕಿರಣ್
ೇರಿಯಾ ಎಂಬ ವೈದ್ಯೆ (ಆಲ್ ಇಂಡಿಯಾ
ನ್‌ಸ್ಟಿಟ್ಯೂಟ್ ಆಫ್ ಮೆಡಿಕಲ್ ಸೈನ್ಸೆಸ್,
ಹಲಿ) ತಮ್ಮ ವಿಚಾರಗಳನ್ನು ಮಂಡಿಸಿದ್ದಾರೆ.
ನಮ್ಮ ದೇಶದ ಜನಸಂಖ್ಯಾ ನಿಯಂತ್ರಣಕ್ಕೆ
ರ್ಭಸ್ಥ ಶಿಶುವಿನ ಲಿಂಗನಿರ್ಧಾರ ಸಹಾಯಕ
ಗಬಲ್ಲದು. ಏಕೆಂದರೆ ಒಂದು ಗಂಡು ಮಗು
ನಿಸುವವರೆಗೂ ತಾಯಿ ಹೆಣ್ಣು ಹೆರುತ್ತಲೇ
ೋಗುತ್ತಾಳೆ. ಇದರಿಂದ ಅವಳ ಮಕ್ಕಳಸಂಖ್ಯೆ
ಚ್ಚುತ್ತ ಹೋಗುತ್ತದೆ. ಆದರೆ ಲಿಂಗನಿರ್ಧಾರ
ಾಡಿ, ಅದು ಹೆಣ್ಣಾಗಿದ್ದಲ್ಲಿ ಕಾನೂನು ರೀತ್ಯ
ೂಣಹತ್ಯೆ ಅವಕಾಶ ಮಾಡಿ ಕೊಟ್ಟಲ್ಲಿ ಜನ
ಖ್ಯಾ ನಿಯಂತ್ರಣ ಸಾಧ್ಯವಾದೀತು,''
ಬುದು ಆಕೆಯ ವಿಚಾರಶೈಲಿ. ಆದರೆ



ಭ್ರೂಣ ಹತ್ಯೆಯಲ್ಲಿರುವ ಅಮಾನವೀಯತೆ
ಯನ್ನು ಮರೆಯಲಿಕ್ಕಾಗದು ಎಂದು ಚಂಡೀಗಡ
ದಲ್ಲಿರುವ ಸ್ನಾತಕೋತ್ತರ ವೈದ್ಯಕೀಯ ವಿದ್ಯಾ
ಲಯದ ವೈದ್ಯರಾದ ಡಾ.ಜಗದೀಶ್‌ಚಂದ್ರರು
ಹೇಳುತ್ತಾರೆ. ನಮ್ಮ ದೇಶದಲ್ಲಿ ಎಲ್ಲಾ ಕಡೆಗ
ಳಲ್ಲೂ ಈಗ ಭ್ರೂಣಹತ್ಯಾ ಸುಲಭ ಸಾಧ್ಯವಾ
ದಾರೂ ವೈಜ್ಞಾನಿಕವಾಗಿ ಬೇಕಾದ ಸೌಲಭ್ಯ
ಗಳು ಅನೇಕ ಆಸ್ಪತ್ರೆಗಳಲ್ಲಿ ಲಭ್ಯವಿಲ್ಲ. ಇದ
ರಿಂದ ತಾಯಿಯ ಜೀವಕ್ಕೆ ಅಪಾಯ ಉಂಟಾಗು
ಸಂಭವವುಂಟು. ಎಷ್ಟೋ ಮಹಿಳೆಯ ಜೀವ
ಕಳೆದುಕೊಂಡ ಘಟನೆಗಳು ನಮ್ಮ ದೇಶದಲ್ಲಿ
ನಡೆಯುತ್ತಲೇ ಇವೆ. ಯೋಗ್ಯವಲ್ಲದ ಪರಿಸರ
ದಲ್ಲಿ, ತರಬೇತಿಲ್ಲದ ಸಿಬ್ಬಂದಿಯಿಂದ ಅಥವಾ
ವ್ಯಕ್ತಿಗಳಿಂದ ಈ ಭ್ರೂಣಹತ್ಯೆ (abortion) ನಡೆ
ಯುತ್ತಿರುವುದೇ ಇದಕ್ಕೆ ಮುಖ್ಯ ಕಾರಣ.

ಕೆಲವೊಂದು ಸಲ, ಗರ್ಭಸ್ಥಶಿಶುವಿನ ಲಿಂಗ
ನಿರ್ಧಾರ ತಪ್ಪಾಗಲೂಬಹುದು. ಹೀಗಾಗಿ,
ಒಂದು ವೇಳೆ ಗಂಡು ಭ್ರೂಣದ ಹತ್ಯೆಯಾದರೆ?
ತಾಯಿಯ ಮನಸ್ಸಿನ ಮೇಲೆ ಅದು ಎಂಥ
ಗಂಭೀರ ಪರಿಣಾಮ ಬೀರಬಹುದು? ಅವಳು
ಕೊನೆವರೆಗೂ 'ಪಾಪಪ್ರಜ್ಞೆ'ಯಿಂದ ಬಳಲುವಂ
ತಾಗುವುದಿಲ್ಲವೆ? ನಮ್ಮಲ್ಲಿ ಈಗ, 1981ರ
ಜನಗಣತಿಯ ಪ್ರಕಾರ 1000 ಪುರುಷರಿಗೆ
1981ರ ಜನಗಣತಿಯಲ್ಲಿ ಭಾರತದ ಜನಸಂಖ್ಯೆ
68 ಕೋಟಿ ಎಂದು ತಿಳಿದು ಬಂದಿದೆ. ಅದರಲ್ಲಿ
33 ಕೋಟಿ ಮಹಿಳೆಯರು ಹಾಗೂ 35 ಕೋಟಿ
ಪುರುಷರು. 1901ರಲ್ಲಿ ನಮ್ಮಲ್ಲಿದ್ದ ಮಹಿಳಾ
ಜನಸಂಖ್ಯೆ 11 ಕೋಟಿ. ಅಂದರೆ 80 ವರುಷಗ
ಳಲ್ಲಿ ಮಹಿಳಾ ಜನಸಂಖ್ಯೆ 22 ಕೋಟಿ ಹೆಚ್ಚಾ
ಗಿದೆ - ಅಂದರೆ ಪ್ರತಿಶತ 183ರಷ್ಟು ಹೆಚ್ಚಿದೆ
ಎಂದಾಯಿತು. ಆದರೆ ಪುರುಷ ಜನಸಂಖ್ಯೆ
ಹೆಚ್ಚಳ ಪ್ರತಿಶತ 193! ಇದು ಹೀಗೆಯೇ ಸಾಗಿ
ದರೆ? 936 ಮಹಿಳೆಯರಿದ್ದಾರೆ. ಇದು
ಹೀಗೆಯೇ ಬೆಳೆಯುತ್ತಾ ಹೋದಲ್ಲಿ ಪರಿಣಾಮ
ವೇನಾದೀತು? ಎಂದು ದೇವೇಂದ್ರ ಬೀರ್‌ಕೌರ್
''ಟ್ರಿಬ್ಯೂನ್''ನಲ್ಲಿ ಬರೆದಿದ್ದಾರೆ.

ನಮ್ಮ ದೇಶದಲ್ಲಿ ಒಂದು ಸಮೀಕ್ಷೆಯ ಪ್ರಕಾರ, ಕೇರಳ, ಕರ್ನಾಟಕ, ಆಂಧ್ರಪ್ರದೇಶ, ಒಡಿಸಾ ಹಾಗೂ ಕಾಶ್ಮೀರಗಳಲ್ಲಿ ಸ್ತ್ರೀಪುರುಷರ ಸಂಖ್ಯೆ 950-1000ದಷ್ಟಿದೆ. ಉಳಿದ ಪ್ರಾಂತಗಳಲ್ಲಿ ಪುರುಷರ ಸಂಖ್ಯೆ ಸ್ತ್ರೀಯರಿಗಿಂತ 10% ಹೆಚ್ಚಿದೆ. ಮುಂಬಯಿಯಲ್ಲಿ ನಡೆಸಿದ ಒಂದು ಸಮೀಕ್ಷೆಯ ಪ್ರಕಾರ, ಇಂಥ 800 ಗರ್ಭಪಾತಗಳಲ್ಲಿ 799 ಹೆಣ್ಣುಗಳೆಂದು ಕಂಡುಬಂದಿದೆ. ಇದು ಉದ್ದೇಶಪೂರ್ವಕವಾಗಿ ಹೆಣ್ಣು ಭ್ರೂಣಗಳ ಹತ್ಯೆ ಎಂದು ಗೊತ್ತಾಗುವುದಿಲ್ಲವೆ? ಹೆಣ್ಣು ಶಿಶುಗಳ ಬಲಿಕೊಟ್ಟರೆ ಗಂಡುಗಳು ಜನಿಸುತ್ತವೆ ಎಂಬುದೊಂದು ನಂಬಿಕೆಯೂ ಇದೆಯಂತೆ!

ಬರಿಯ ಹೆಣ್ಣು ಮಕ್ಕಳನ್ನೇ ಹೆತ್ತರೆ ತಾಯಿ ದೂಷಿಸಲ್ಪಡುತ್ತಾಳೆ. ಅವಳ ಪತಿ ಕೂಡ ಅವಳನ್ನು ತುಚ್ಛವಾಗಿ ಕಾಣುತ್ತಾನೆ. ಆದರೆ ಬರೀ ಹೆಣ್ಣುಮಕ್ಕಳಾಗಲು ವಾಸ್ತವದಲ್ಲಿ ತಾನೇ ಕಾರಣ ಎಂಬುದನ್ನು ಆತ ಅರಿಯ!

**ಯಾರು ಕಾರಣರು ?**

ಮಗುವಿನ ಲಿಂಗ ನಿರ್ಧಾರಕ್ಕೆ ಕಾರಣರಾರು ತಂದೆಯೋ? ತಾಯಿಯೋ? ನಮ್ಮ ದೇಹದ ಜೀವಕಣಗಳಲ್ಲಿ 'ಕ್ರೊಮೋಸೋಮ್'ಗಳಿರುವ ವಿಷಯ ನಮಗೆಲ್ಲ ಗೊತ್ತು. ಕ್ರೊಮೋಸೋಮುಗಳಲ್ಲಿ ಎರಡು ವಿಧ - 'X' ಹಾಗೂ 'Y' ಸ್ತ್ರೀ ಜೀವಕಣಗಳಲ್ಲಿ 'XX' ಕ್ರೊಮೋಸೋಮುಗಳು, ಹಾಗೂ ಪುರುಷ ಜೀವಕಣದಲ್ಲಿ ತಂದೆಯಿಂದ 'XY' ಕ್ರೊಮೋಸೋಮುಗಳಿರುತ್ತವೆ. ಮಗು ಗಂಡಾಗಬೇಕಾದರೆ ತಂದೆಯಿಂದ 'Y' ಕ್ರೊಮೋಸೋಮು ಬೇಕು. ಒಂದು ವೇಳೆ 'Y' ಕ್ರೊಮೋಸೋಮು ಸಿಗದಿದ್ದಲ್ಲಿ ಮಗು 'XX' ಆಗಿ ಉಳಿಯುತ್ತದೆ. ಅಂದರೆ ಹೆಣ್ಣಾಗುತ್ತದೆ. ಆದ್ದರಿಂದ ಮಗು ಗಂಡು ಅಥವಾ ಹೆಣ್ಣಾಗಲು ತಂದೆ ಕಾರಣ. ತಾಯಿಯಲ್ಲ! ಈ ವಿಷಯ ನಮ್ಮ ಜನರಿಗೆ ಗೊತ್ತಾದರೆ ಹೆಣ್ಣು ಹೆತ್ತ ತಾಯಂದಿರನ್ನು ನಿಂದಿಸುವುದು ಕಡಿಮೆಯಾಗ ತೇನೋ!

ನಮ್ಮ ದೇಶದ ಮಹಿಳಾ ಸಂಘಟನೆ ಈಗ ಈ ವಿಷಯಕ್ಕೆ ಸಾಕಷ್ಟು ಪ್ರಧಾ ಕೊಟ್ಟು ಪ್ರಚಾರ ಮಾಡುತ್ತಿವೆ. ಅವರು ಬರ ಪ್ರಚಾರಪಡಿಸುತ್ತಿರುವ ಒಂದು ಫಲ ನಮೂನೆ ಈ ರೀತಿ ಇದೆ-

- ಮಗು ಗಂಡೋ ಹೆಣ್ಣೋ?
- ಯಾರು ಕಾರಣರು?
- ದೇವರು
- ತಾಯಿ
- ತಂದೆ

*- ಪ್ರಸೂತಿ ಹಾಗೂ ಸ್ತ್ರೀ ರೋಗ ವಿಜ್ಞ ತಜ್ಞರ ಸಂಸ್ಥೆ, ಮುಂಬಯಿ.*

ಈ ಫಲಕಗಳನ್ನು ರೈಲು ನಿಲ್ದಾಣಗಳ ಬಸ್‌ಸ್ಟ್ಯಾಂಡುಗಳಲ್ಲಿ, ಆಸ್ಪತ್ರೆಗಳ ವ್ಯಾಪಾರಿ ತಾಣಗಳಲ್ಲಿ, ಮಾರುಕಟ್ಟೆಗಳ ಹೋಟೆಲ್‌ಗಳಲ್ಲಿ ಪ್ರದರ್ಶಿಸಲು ಪ್ರಾರಂ ದ್ದಾರೆ. ಸಿನಿಮಾಗಳಲ್ಲಿ ಪೋಸ್ಟರುಗಳ ಮೂ ಪ್ರಚುರಪಡಿಸುತ್ತಿದ್ದಾರೆ. ಇದು ಯಾವ ಣಾಮ ಬೀರೀತು ಎಂಬುದನ್ನು ಕಾದು ನೋ ಬೇಕು.



1986ರಲ್ಲಿ ಸೇರಿದ 'ಸಾರ್ಕ್' ಸಮ್ಮೇಳನದಲ್ಲಿ ದಕ್ಷಿಣಏಶಿಯದ ತಾಯಿ-ಮಕ್ಕಳ ಸ್ಥಿತಿ-ಗತಿಗಳ ಬಗ್ಗೆ ವಿಶದವಾಗಿ ಚರ್ಚಿಸಲಾಯಿತು. ಹೆಣ್ಣುಮಗುವನ್ನು ತುಚ್ಛವಾಗಿ ನೋಡುವುದು, ಗಂಡು ಹೆಣ್ಣು ಮಕ್ಕಳಲ್ಲಿ ತಾರತಮ್ಯ ಮಾಡುವದು ಇವೆಲ್ಲ, ಸಮಾಜದಲ್ಲಿ ಬಹಳ ಆಳವಾಗಿ ಬೇರೂರಿವೆ ಎಂಬುದನ್ನು ಎತ್ತಿತೋರಿಸಲಾಯಿತು. ಸುದೀರ್ಘ ಚರ್ಚೆಯ ನಂತರ ತಂದೆತಾಯಂದಿರಿಗೆ ಸಮಾಜದಲ್ಲಿಯ ಎಲ್ಲರಿಗೂ ಈ ವಿಷಯದ ಬಗ್ಗೆ ಚೆನ್ನಾಗಿ ತಿಳಿಹೇಳಿ ಮನವರಿಕೆ ಮಾಡಿಕೊಡಬೇಕೆಂದು ನಿರ್ಣಯಿಸಲಾಯಿತು. ಅಲ್ಲದೆ, ಡಿಸೆಂಬರ್ 27ರಿಂದ 29ರವರೆಗೆ, ಮೂರು ದಿನಗಳ ''ಹೆಣ್ಣುಮಗು'' ಎಂಬ ಕಾರ್ಯಾಗಾರವನ್ನು ನವದೆಹಲಿಯಲ್ಲಿ ಹಮ್ಮಿಕೊಳ್ಳಲಾಯಿತು. ಈ ಸಮ್ಮೇಳನದಲ್ಲಿ 20 ವರುಷಗಳವರೆಗಿನ ಹೆಣ್ಣುಮಕ್ಕಳ ಎಲ್ಲ ವಿಷಯಗಳ ಬಗೆಗೂ ವಿಶದವಾಗಿ ಚರ್ಚಿಸಲಾಯಿತು. ಹೆಣ್ಣು ಮಕ್ಕಳ ಶಿಕ್ಷಣ, ಆರೋಗ್ಯ, ಪಾಲನೆ-ಪೋಷಣೆ, ವೃತ್ತಿ ತರಬೇತಿ, ನೌಕರಿ, ಮುಂತಾದವುಗಳ ಬಗ್ಗೆ ವಿಚಾರವಿನಿಮಯಗಳಾದವು. ಮಹಿಳಾ ಹಾಗೂ ಶಿಶು ಅಭಿವೃದ್ಧಿ ವಿಭಾಗದ ಕಾರ್ಯದರ್ಶಿಯಾದ ಶ್ರೀಮತಿ ಸಿ.ಪಿ.ಸುಜಯಾರವರು ಸಮ್ಮೇಳನವನ್ನು ಉದ್ಘಾಟಿಸಿ. ಶಿಶು ಕಲ್ಯಾಣದ ಯೋಜನೆಗಳ ಬಗ್ಗೆ ತಿಳಿಸಿದರು. ಶಾಲಾವಯಸ್ಸಿನ ಬಹುತೇಕ ಹೆಣ್ಣುಮಕ್ಕಳು ಶಾಲೆಗೆ ಹೋಗದೇ ಮನೆಯಲ್ಲಿಯೇ ಉಳಿದು, ತಾಯಿಗೆ ಅಡಿಗೆ ಕೆಲಸ, ಮನೆಗೆಲಸಗಳಲ್ಲಿ ಸಹಾಯಮಾಡುತ್ತಾರೆ. ಶಿಕ್ಷಣದ ಮಹತ್ವವನ್ನು ಪಾಲಕರಿಗೆ ತಿಳಿಸಿ, ಮಕ್ಕಳು ನಿಯಮಿತವಾಗಿ ಶಾಲೆ ಕಲಿಯಲು ಪ್ರೋತ್ಸಾಹಿಸಬೇಕು ಎಂದು ನಿರ್ಣಯಿಸಲಾಯಿತು. ಈಗಿನ ನಮ್ಮ ಸಿನಿಮಾ, ಟಿ.ವಿ.ಮಾಧ್ಯಮಗಳಲ್ಲಿ ಮಹಿಳೆಯನ್ನು ಕೇವಲ ಅಂಗಾಂಗ ಪ್ರದರ್ಶನಕ್ಕಾಗಿ, ಜಾಹೀರಾತುಗಳಿಗಾಗಿ ಬಳಸಲಾಗುತ್ತಿದೆ. ಹೆಣ್ಣು ಕೆಲವೊಮ್ಮೆ ಸತಿ-ಸಾವಿತ್ರಿಯಾಗಿ ಚಿತ್ರಿಸಲ್ಪಟ್ಟರೆ ಮತ್ತೊಮ್ಮೆ 'ಹಂಟರ್‌ವಾಲಿ'ಯಾಗಿ ಚಿತ್ರಿಸಲ್ಪಡುತ್ತಾಳೆ. ಹೀಗಾಗಿ ಅವಳ ನಿಜವಾದ ರೂಪ ತೋರಿಸಲ್ಪಡುವುದಿಲ್ಲ. ವೃತ್ತ ಪತ್ರಿಕೆಗಳಲ್ಲಿಯ 'ಚೌಕಟ್ಟು ಸುದ್ದಿಗಳು' 'ಮಹಿಳೆಯ ಮಾನಭಂಗ' 'ಮಂಗಳಸೂತ್ರ ಅಪಹರಣ', 'ಮಕ್ಕಳೊಡನೆ ಆತ್ಮಹತ್ಯೆ' ನವವಧುವಿನ ಸಜೀವದಹನ' ಎಂಬವುಗಳೇ ಇರುತ್ತವೆ.! ಇವೆಲ್ಲವುಗಳ ಬಗೆಗೆ, ಹಾಗೂ ತಾಯಿ ಹಾಗೂ ಮಗುವಿನ ಸಧ್ಯದ ಸ್ಥಿತಿಯನ್ನು ಸುಧಾರಿಸುವ ವಿಧಾನಗಳ ಬಗ್ಗೆ ವಿವರವಾಗಿ ಚರ್ಚಿಸಲಾಯಿತು.

**ಈಗ ನಾವು ಮಾಡಬೇಕಾದುದೇನು ?**

ಮೊಟ್ಟ ಮೊದಲು, ನಮಗೆ 'ಹೆಣ್ಣು ಮಗು ಹೊರೆ' ಎಂಬ ಭಾವನೆ ತೊಲಗಬೇಕು. ಹೆಣ್ಣು ಮಗುವಿಗೆ ಸಮಾಜದಲ್ಲಿ ಭದ್ರ ಬುನಾದಿ ಬೇಕು. ಹೆಣ್ಣು ಮಕ್ಕಳ ಶಿಕ್ಷಣದ ಪ್ರಮಾಣ ಸುಧಾರಿಸಿದರೆ ಇದು ಸಾಧ್ಯವಾದೀತು. ಚೆನ್ನಾಗಿ ಕಲಿತು ತಮ್ಮ ಜವಾಬ್ದಾರಿಯನ್ನು ತಂದೆ ತಾಯಿಯರ ಮೇಲೆ ಹೇರದೇ ತಮ್ಮ ಕಾಲುಗಳ ಮೇಲೆ ತಾವು ನಿಂತುಕೊಂಡು, ಪುರುಷರಂತೆ ಕುಟಂಬದ ಭಾರ ನಿಭಾಯಿಸಲು ಮಹಿಳೆಯರು ಸನ್ನದ್ಧರಾದರೆ ಈ ಭಾವನೆ ತಂತಾನೇ ಕಡಿಮೆಯಾದೀತು! ಜನಸಂಖ್ಯಾ ನಿಯಂತ್ರಣಕ್ಕೆ, ಗರ್ಭಸ್ಥಶಿಶುವಿನ ಲಿಂಗ ನಿರ್ಧಾರ ಹಾಗೂ ಹೆಣ್ಣು ಭ್ರೂಣಹತ್ಯೆಗೆ ಕಾಯಿದೆಯ ಅನುಮತಿ ನೀಡಬೇಕು ಎನ್ನುವ ಡಾ.ಶ್ರೀಮತಿ ಕಚೇರಿಯಾರ ವಾದ ಅಷ್ಟು ಸಮಂಜಸವೆನ್ನಿಸುವುದಿಲ್ಲ; ಆದರಿಂದ ಹೆಣ್ಣು ಮಕ್ಕಳ ಸ್ಥಿತಿಗತಿ ಸುಧಾರಿಸುವದಂತೂ ಸಾಧ್ಯವಿಲ್ಲ. ಅದರ ಬದಲು ತಂದೆತಾಯಂದಿರಲ್ಲಿ, ಮಕ್ಕಳು ಗಂಡೇ ಇರಲಿ, ಹೆಣ್ಣೇ ಇರಲಿ, ಎರಡೇ ಇರಲಿ ಎನ್ನುವ ಭಾವನೆ ಮೂಡಿ, ಬೆಳೆಯುವಂತೆ ಪ್ರಯತ್ನಿಸುವುದು ಹೆಚ್ಚು ಸಮಂಜಸವೆನ್ನಿಸುವುದಿಲ್ಲವೆ?

ಹೆಣ್ಣು ಭ್ರೂಣಹತ್ಯೆಯನ್ನು ತಡೆಗಟ್ಟಲು ಡಾ.ಜಗದೀಶ್‌ಚಂದ್ರ ಅವರು ಕೆಲವು ಸಲಹೆಗಳನ್ನು ಮಾಡಿದ್ದಾರೆ -

1. ಭ್ರೂಣ ತಪಾಸಣೆಗೆ ಕೇವಲ ಸರಕಾರಿ ಆಸ್ಪತ್ರೆಗಳಲ್ಲಿಯೇ ಮಾಡಲು ಅನುಮತಿ ಕೊಡ

ಬೇಕು. ಅದು ಕೂಡ ಕೇವಲ ಭ್ರೂಣದಲ್ಲಿಯ ನ್ಯೂನತೆಗಳನ್ನು ಕಂಡು ಹಿಡಿಯಲು ಮಾತ್ರ.

2. ಯಾವದೇ ಪರಿಸ್ಥಿತಿಯಲ್ಲೂ ಭ್ರೂಣದ ಲಿಂಗವನ್ನು ತಂದೆತಾಯಿಯರಿಗೆ ತಿಳಿಸ ಕೂಡದು.
3. ಭ್ರೂಣ ತಪಾಸಣೆ ಮಾಡುವವರಿಗೆ 'ಪ್ರತ್ಯೇಕ ಪರವಾನಿಗೆ' (Special Licence) ಕೊಡಬೇಕು. ಒಂದು ವೇಳೆ ಅದರ ದುರುಪಯೋಗ ಕಂಡುಬಂದಲ್ಲಿ ಅದನ್ನು ಕೂಡಲೇ ರದ್ದು ಮಾಡಬೇಕು.
4. ಭ್ರೂಣಹತ್ಯೆಯ ಎಲ್ಲ ದಾಖಲೆಗಳನ್ನೂ ಸರಿಯಾಗಿ ಇಡಬೇಕು, ಹಾಗೂ ಅವು ನ್ಯಾಯಾಲಯ, ಮಹಿಳಾ ಸಂಘಟನೆಗ[ಳು] ಮುಂತಾದವುಗಳಿಗೆ ಕೇಳಿದಾಗ ಕೂಡ[ಲೇ] ಲಭ್ಯವಾಗುವಂತಿರಬೇಕು.

ಆದರೆ ಇದು ಕೇವಲ ಕಾಯಿದೆ ಮಾಡುವು[ದ]ರಿಂದ ಸಾಧ್ಯವಾದೀತೆ? ಮುಖ್ಯವಾಗಿ ಮಹಿ[ಳಾ] ಸಂಘಟನೆಗಳು, ಹಾಗೂ ಉಳಿದ ಸಂಘಸಂ[ಸ್ಥೆ]ಗಳು ತಂದೆತಾಯಿಯರಿಗೆ ಸರಿಯಾಗಿ ತಿಳಿಹೇ[ಳಿ] ಅವರ ಮನಪರಿವರ್ತಿಸುವ ದಿಶೆಯ[ಲ್ಲಿ] ಪ್ರಯತ್ನಿಸಬೇಕು. ಅಂದರೆ ಇಂದಿಲ್ಲ ನಾ[ಳೆ] ನಮ್ಮ ತಾಯಂದಿರು ''ಮಕ್ಕಳು ಗಂಡಿರಲಿ ಹೆಣ್ಣಿರಲಿ, ಆದರೆ ಎರಡೇ ಇರಲಿ'' ಎಂದ[ು] ಹೇಳಿಯಾರು. ಅಲ್ಲವೇ?

---

## ಅದೇ ಶಿಕ್ಷೆ

**ಗಾಂ**ಧೀಜಿ ಸೇವಾಗ್ರಾಮದಲ್ಲಿದ್ದ ದಿನಗಳು. ಅವರ ಅನೇಕ ಶಿಷ್ಯರಲ್ಲಿ ಅಕ್ಬರ್ ಎನ್ನುವ ಒಬ್ಬನೂ ಇದ್ದ. ಅವನು ಒಂದು ದಿನ ಗಾಂಧೀಜಿಯ ಕೋಣೆಯನ್ನು ಶುಚಿಗೊಳಿಸುತ್ತಿರುವಾಗ ಮೇಜಿನ ಮೇಲಿರಿಸಿದ್ದ ಮೂರು ಮಂಗಗಳ ಗಾಜಿನ ಗೊಂಬೆ ಜಾರಿ ಕೆಳಗೆ ಬಿದ್ದು ಒಡೆದು ಹೋಯಿತು. ಅಕ್ಬರ್‌ನ ಮನಸ್ಸಿನಲ್ಲಿ ಭಯ ಆವರಿಸಿತು.- ''ಆ ಮೂರು ಮಂಗಗಳ ಗೊಂಬೆ ಎಂದರೆ ಬಾಪೂಜಿಗೆ ಬಹಳ ಇಷ್ಟ. ಅದು ಒಡೆದುಹೋಗಿದೆ ಎಂದರೆ ಅವರು ತುಂಬಾ ಕೋಪಿಸಿಕೊಳ್ಳುವರು. ಏನು ಮಾಡಲಿ? ಏನು ಮಾಡಲಿ?'' ಎಂದು ಯೋಚಿಸಿ ಕೊನೆಗೆ ನಿಜವನ್ನೇ ಹೇಳಬೇಕೆಂದು ತೀರ್ಮಾನ ತೆಗೆದುಕೊಂಡ.

ಸರಿ!..... ಬಾಪೂಜಿ ಬಂದರು. ಅಕ್ಬರ್ ನಮ್ರನಾಗಿ ನಡೆದುದನ್ನು ಹೇಳಿ, ''ನೀವು ನನಗೆ ಯಾವ ಶಿಕ್ಷೆ ಕೊಟ್ಟರೂ ಸರಿಯೇ ಅನುಭವಿಸಲು ಸಿದ್ಧ.'' ಎಂದನು.

ಗಾಂಧೀಜಿ ಥಟ್ಟನೇ ಹುಬ್ಬುಗಂಟಿಕ್ಕಿ, '' ನಿನಗೆ ತಕ್ಕ ಶಿಕ್ಷೆಯನ್ನೇ ಕೊಡುತ್ತೇನೆ! ಜೀವನ ಪರ್ಯಂತ ಅನುಭವಿಸುವಂಥ ಶಿಕ್ಷೆ,'' ಎಂದರು.

ಅಕ್ಬರ್ ಥರ ಥರ ನಡುಗಲಾರಂಭಿಸಿದ. ಆಗ ಬಾಪೂಜಿ ಮೆಲ್ಲಗೆ ಹುಸಿನಗೆ ಬೀರುತ್ತ, ''ನಿನಗೆ ಶಿಕ್ಷೆ ಯಾವುದು ಗೊತ್ತೇ? ಇಂದು ನೀನು ನುಡಿದಂತೆ ನಿನ್ನ ಜೀವನ ಪರ್ಯಂತ ನೀನು ಸತ್ಯವನ್ನೇ ನುಡಿಯಬೇಕು. ಅದೇ ನಿನಗೆ ಶಿಕ್ಷೆ!'' ಎಂದಾಗ, ಅಕ್ಬರ್ ಗಾಂಧೀಜಿಯ ಕಾಲಿಗೆ ಬಿದ್ದು ಗಳ ಗಳ ಅತ್ತುಬಿಟ್ಟ.

ಸಂಗ್ರಹ: **ಜಿ.ವಿ.ಪ್ರಭು**

ಸಮಾಜವಾದಿ ರಾಷ್ಟ್ರದಲ್ಲೂ ಕೋಟ್ಯಧೀಶರೆ?

# ರಶಿಯದ ಕೋಟ್ಯಧೀಶರು

ಅರುಣ

ರಶಿಯದ ಹೆಸರಾಂತ ವರ್ಣಚಿತ್ರಕಾರ ಇಲ್ಯಾ ಗ್ಲಾಜುನೊವ್ ಮಾಸ್ಕೋದ ಅರ್ಬಾತ್ ರಸ್ತೆಯಲ್ಲಿರುವ ಭವ್ಯವಾದ ಫ್ಲಾಟ್‌ನಲ್ಲಿ ನೆಲಸಿದ್ದಾನೆ. ಅವನ ನಿವಾಸದೊಳಗೆ ನೀವು ಪ್ರವೇಶಿಸಿದರೆ ಪ್ರಾಚೀನ ಕಲಾವಸ್ತುಗಳ ಮ್ಯೂಸಿಯಂನಲ್ಲಿ ಕಾಲಿರಿಸಿದ ಅನುಭವ ನಿಮಗಾಗುವುದು ಖಂಡಿತ. ನಿವಾಸದ ದಿವಾನಖಾನೆಯಲ್ಲಿ 18-19ನೆ ಶತಮಾನದ ಆಕರ್ಷಕ ಪೀಠೋಪಕರಣಗಳಿವೆ. ಇನ್ನೊಂದು ಕೊಠಡಿಯಲ್ಲಿ ಅಮೃತ ಶಿಲೆಯ ವಿಗ್ರಹಗಳಿವೆ. ಯುರೋಪಿಯನ್ ಕಲಾವಿದರು ರಚಿಸಿದ ವರ್ಣಚಿತ್ರಗಳು ಕಂಚಿನ ಚೌಕಟ್ಟುಗಳಲ್ಲಿ ಗೋಡೆಗಳ ಮೇಲೆ ಕಂಗೊಳಿಸುತ್ತವೆ. ಇನ್ನೊಂದು ಕೊಠಡಿಯಲ್ಲಿ ಅಪರೂಪದ ಪುಸ್ತಕಗಳನ್ನೊಳಗೊಂಡ ಗ್ಲಾಜುನೋವರ್ ಗ್ರಂಥಾಲಯವಿದೆ. ತ್ಸಾರ್ ಚಕ್ರವರ್ತಿಯ ಸಿಂಹಾಸನಾರೋಹಣಕ್ಕೆ ಸಂಬಂಧಿಸಿದ ಪುಸ್ತಕಗಳು, ಕರುವಿನ ಚರ್ಮದ ಹೊದಿಕೆಯಿರುವ ಹದಿನಾಲ್ಕನೇ ಶತಮಾನದ ಬೈಬಲ್ಲಿನ ಹಳೆಯ ಪ್ರತಿಯೂ ಅಲ್ಲಿದೆ. 14ರಿಂದ 17ನೇ ಶತಮಾನದ ಅವಧಿಯಲ್ಲಿ ಕಡೆಯಲಾದ 300 ವಿಗ್ರಹಗಳು ಇನ್ನೊಂದು ಕೊಠಡಿಯಲ್ಲಿವೆ.

60ರ ಅಂಚಿನಲ್ಲಿರುವ ಅವನಿಗೆ ನಿರಂತರ ಸಿಗರೇಟು ಸೇದುವುದೆಂದರೆ ಖುಷಿಯೇ ಖುಷಿ. ಗ್ಲಾಜುನೊವ್ ಹುಟ್ಟಿದ್ದು ಲೆನಿನ್‌ಗ್ರಾಡಿನಲ್ಲಿ. ಎರಡನೆಯ ಮಹಾಯುದ್ಧದಲ್ಲಿ ನಾಜಿ ಸೇನೆ ಲೆನಿನ್‌ಗ್ರಾಡ್‌ಗೆ ಮುತ್ತಿಗೆ ಹಾಕಿದಾಗ ತಂದೆ ತಾಯಿಗಳನ್ನು ಕಳೆದುಕೊಂಡು ಅನಾಥನಾದ. 1958ರಲ್ಲಿ ಆತ ಲೆನಿನ್‌ಗ್ರಾಡ್‌ನ ರೆಪಿನ್ ಆರ್ಟ ಇನ್ಸ್‌ಟಿಟ್ಯೂಟ್‌ನಲ್ಲಿ ವ್ಯಾಸಂಗ ಮುಗಿಸಿ ಪದವೀಧರನಾಗುವವರೆಗೂ ಕಡುಬಡತನ ಆತನ ಬೆನ್ನು ಬಿಟ್ಟಿರಲಿಲ್ಲ. ವಿದ್ಯಾರ್ಥಿಯಾಗಿದ್ದಾಗಲೇ ಗ್ಲಾಜುನೊವ್ ಗ್ರಾಫಿಕ್ ಕಲಾವಿದನೆಂದು, ದಾಸ್ತೊಯವ್‌ಸ್ಕಿಯ ಕೃತಿಗಳಿಗೆ ಚಿತ್ರ ರಚಿಸುವ ಕಲಾವಿದನೆಂದೂ ಹೆಸರಾಗಿದ್ದ. ಆ ದಿನಗಳಲ್ಲಿ ಮಾಸ್ಕೋದ ಚಿತ್ರಕಲಾವಿದರ ಕೇಂದ್ರ ಭವನದಲ್ಲಿ ಗ್ಲಾಜುನೊವ್‌ನ ಚಿತ್ರಗಳ ಪ್ರದರ್ಶನ ನಡೆಯಿತು. 1963ರಲ್ಲಿ ಎರಡನೆಯ ಬಾರಿ ಗ್ಲಾಜುನೊವ್‌ನ ಚಿತ್ರಕಲೆಯ ಪ್ರದರ್ಶನ ಇಟಲಿಯಲ್ಲಿ ಜರುಗಿತು. ಅದು ಕಲಾವಿಮರ್ಶಕರನ್ನೂ ಕಲಾರಸಿಕರನ್ನೂ ಆಕರ್ಷಿಸಿತು. ಅದರ ಮರುವರ್ಷ ಮಾಸ್ಕೋದ ಖ್ಯಾತ ಆರ್ಟ್ ಗ್ಯಾಲರಿಯಲ್ಲಿ ಗ್ಲಾಜುನೊವ್‌ನ 60 ವರ್ಣಚಿತ್ರಗಳ

(ಕೃಪೆ: ಅಬ್ಸರ್ವರ್)

ಪ್ರದರ್ಶನ ಜರುಗಿತು. ಈ ಪ್ರದರ್ಶನ ಇನ್ನಷ್ಟೂ ಕಲಾಭಿಮಾನಿಗಳನ್ನು ಆಕರ್ಷಿಸಿತು.

ಈಗ ಮಾಸ್ಕೋದಲ್ಲಿರುವ ವಿದೇಶಿ ರಾಜತಂತ್ರಜ್ಞರೂ ಅವರ ಪತ್ನಿಯರೂ ತಮ್ಮ ಭಾವಚಿತ್ರಗಳನ್ನು ರಚಿಸಿಕೊಡಲು ಇಲ್ಯಾನಿಗೆ ದುಂಬಾಲು ಬೀಳುವುದು ಸಾಮಾನ್ಯ. ಇಂದಿರಾಗಾಂಧಿ, ಸುಪ್ರಸಿದ್ಧ ನಟಿ ಜಿನಾ ಲೊಲೊ ಬ್ರಿಗೆಡಾ, ವಿಶ್ವಸಂಸ್ಥೆಯ ಮಾಜಿ ಮಹಾಕಾರ್ಯದರ್ಶಿ ಕರ್ಟ್ ವಾಲ್ಡ್‌ಹೀಮ್, ಮುಂತಾದ ಗಣ್ಯರು ಇಲ್ಯಾನ ಸ್ಟುಡಿಯೋಗೆ ಭೇಟಿ ನೀಡಿ ಅವನ ಕಲಾಕೃತಿಗಳನ್ನು ಕಂಡು ಆನಂದಿಸಿದ್ದುಂಟು. ವಿದೇಶಗಳಲ್ಲಿ ತನ್ನ ಚಿತ್ರಗಳನ್ನು ಮಾರಾಟ ಮಾಡಲು ರಶಿಯದ ಸರಕಾರ ಇಲ್ಯಾನಿಗೆ ಅನುಮತಿ ನೀಡಿದೆ. (ಇತರ ಕಲಾವಿದರಿಗೆ ಅಂತಹ ಅವಕಾಶವಿಲ್ಲ.)

ಇಂದು ಇಲ್ಯಾ ಗ್ಲಾಜುನೊವ್ ಕೋಟ್ಯಧೀಶರ ಸಾಲಿಗೆ ಸೇರಿದ್ದಾನೆ ಎಂದು ಬ್ರಿಟನ್ನಿನ 'ಅಬ್ಸರ್ವರ್' ವರದಿ ಮಾಡಿದೆ. ಅವನು ರಚಿಸಿದ ಚಿತ್ರಗಳಿರುವ ಚಿತ್ರ ಸಂಪುಟಕ್ಕೆ ದುಬಾರಿ ಬೆಲೆ. ಒಂದು ಚಿತ್ರಕ್ಕೆ ಆರು ರೂಬಲ್ ಬೆಲೆ (ಒಂದು ರೂಬಲ್ ಸರಿಸುಮಾರು 21 ರೂ.ಗಳಿಗೆ ಸಮ)

ಅವನಿಗೆ ಮಾಸ್ಕೋದಿಂದ 40 ಕಿಲೋಮೀಟರು ದೂರದಲ್ಲಿರುವ ಹಳ್ಳಿಯೊಂದರಲ್ಲಿ ಹಿಂದಿನ ಪ್ರಧಾನಮಂತ್ರಿ ಕೊಸಿಗಿನ್ ಉಡುಗೊರೆಯಾಗಿ ನೀಡಿದ ಇನ್ನೊಂದು ಭವ್ಯ ನಿವಾಸವಿದೆ. ಕೋಟ್ಯಧೀಶನೆನಿಸಿದರೂ ಗ್ಲಾಜುನೊವ್ ಜಿಪುಣನಲ್ಲ. ಈಗಾಗಲೆ ಆತ ಸುಮಾರು ಹದಿನೈದು ಲಕ್ಷ ರೂಬಲ್‌ಗಳನ್ನು ವಿವಿಧ ಸಂಸ್ಥೆಗಳಿಗೆ ದಾನ ನೀಡಿದ್ದಾನೆ. ಹಣದ ಅಗತ್ಯವಿರುವ ನಿಕಟ ಮಿತ್ರರಿಗೆ ಆತ ನೂರರಿಂದ ಸಾವಿರ ರೂಬಲ್ಲುಗಳವರೆಗೂ ಸಹಾಯ ಮಾಡುವುದಿದೆ. ತನ್ನ ಕೈಲಿ ತರಬೇತಾದ ಐವರು ವಿದ್ಯಾರ್ಥಿಗಳಿಗೆ ವಿದೇಶದಲ್ಲಿ ವ್ಯಾಸಂಗ ಮುಂದುವರಿಸಲು ಹಣಕಾಸಿನ ನೆರವನ್ನು ನೀಡಿದ್ದಾನೆ.

> *ಗೊರ್ಬಚೆವ್ ಅಧಿಕಾರ ವಹಿಸಿಕೊಂಡ ಬಳಿಕ ರಶಿಯವು ಬಂಡವಾಳಶಾಹಿ ವ್ಯವಸ್ಥೆಯ ಕೆಲವು ಗುಣಲಕ್ಷಣಗಳನ್ನು ಅಳವಡಿಸಿಕೊಳ್ಳುತ್ತಿದೆಯೋ ಅನಿಸುತ್ತದೆ. ಇಂದು ಅಲ್ಲಿ ಡಾಲರ್ ಕೋಟ್ಯಧೀಶರುಗಳಿದ್ದಾರೆ. ರೂಬಲ್ ಕೋಟ್ಯಧೀಶರುಗಳೂ ಇದ್ದಾರೆ.*

ಮೂರು ವರ್ಷಗಳ ಹಿಂದೆ ಗ್ಲಾಜುನೊವ್‌ನ ಪತ್ನಿ ನಿನಾ ವಿನೊಗ್ರದೊವಾ ಬೆನೊಯ್ಸ್ ಆತ್ಮಹತ್ಯೆ ಮಾಡಿಕೊಂಡಳು. ಈ ಸಾವಿನ ಆಘಾತದಿಂದಾತ ಇನ್ನೂ ಪೂರ್ತಿಯಾಗಿ ಚೇತರಿಸಿಕೊಂಡಿಲ್ಲ.

★

ಇಂದು ಜಗತ್ತಿನಾದ್ಯಂತ ಪ್ರಸಿದ್ಧರಾಗಿರುವ ಖ್ಯಾತ ನೇತ್ರ ವೈದ್ಯ ಸ್ವ್ಯತೊಸ್ಲಾವ್ ಫ್ಯೂದೊರೊವ್ ರಶಿಯದ ಆಧುನಿಕ ಕೋಟ್ಯಧೀಶರ ಸಾಲಿಗೆ ಸೇರಿದ ಇನ್ನೋರ್ವ ವ್ಯಕ್ತಿ. ವೃತ್ತಿಯಿಂದ ಸರ್ಜನ್ನನಾದ ಫ್ಯೂದೊರೊವ್ ಹಲವು ವಿವಿಧ ಬಗೆಯ ಚಾಕುಗಳು, ಖಡ್ಗಗಳು, ಗನ್‌ಗಳನ್ನು ಸಂಗ್ರಹಿಸುವ ಹವ್ಯಾಸಗಳನ್ನು ಬೆಳೆಸಿಕೊಂಡಿದ್ದಾನೆ. ಕುದುರೆಯ ಮೇಲೆ ಕುಳಿತು ಬೇಟೆಯಾಡುವಾಗ ಬಳಸುವ ಫ್ರೆಂಚ್ ಗನ್, ಅರಬ್ ಖಡ್ಗಗಳು, ಯೆಮೆನ್‌ನ ಕಠಾರಿ, ರಶಿಯನ್ ಕಠಾರಿ ಸೋವಿಯೆತ್ ಶಾಟ್‌ಗನ್, ಕ್ರಿಮಿಯಾದಲ್ಲಿ ದೊರೆತ ಇತಿಹಾಸಪೂರ್ವ ಕಾಲದ ಕೊಡಲಿ - ಹೀಗೆ ವೈವಿಧ್ಯಮಯ ಆಯುಧಗಳನ್ನು ಅವನು ಸಂಗ್ರಹಿಸಿದ್ದಾನೆ. ಅವನ ಸಂಗ್ರಹದಲ್ಲಿರುವ ಕೆಲವು ವಸ್ತುಗಳಿಗಂತೂ ಇಂದು ನಾಲ್ಕೂವರೆ ಲಕ್ಷ ರೂಪಾಯಿಗಳಿಗೂ ಮಿಕ್ಕ ಬೆಲೆಯಾಗುತ್ತದೆ.

ಅಲ್ಲಿನ ಪತ್ರಕರ್ತರು ಫ್ಯೂದೊರೊವ್‌ನನ್ನು 'ರಶಿಯದ ರಾಕ್‌ಫೆಲ್ಲರ್' ಎಂದು ಕರೆಯುತ್ತಾರೆ. ಡಾ. ಫ್ಯೂದೊರೊವ್ ಮಾಸ್ಕೋದ ಕೇಂದ್ರ ಸ್ಥಾನದಲ್ಲಿ ನಾಲ್ಕು ವಿಶಾಲಕೊಠಡಿಗಳ ಭವ್ಯ ಫ್ಲಾಟಿನಲ್ಲಿ ನೆಲೆಸಿದ್ದಾನೆ. ಮಾಸ್ಕೋದಿಂದ ಉತ್ತರಕ್ಕೆ 35 ಮೈಲು ದೂರದ ಹಳ್ಳಿಯಲ್ಲಿ

ಹೊಲದ ಮಧ್ಯೆ ಅವನಿಗೆ ಮತ್ತೊಂದು ಮನೆ ಇದೆ. ಅಲ್ಲಿ ಅವನು ನರಿ ಬೇಟೆಗಾಗಿ ಎರಡು ಉತ್ತಮ ಜಾತಿಯ ಕುದುರೆ ಸಾಕಿದ್ದಾನೆ. 62 ವಯಸ್ಸಿನ ಫ್ಯೂದೊರೊವ್‌ಗೆ ನಾಲ್ವರು ಪುತ್ರಿ ಯರಿದ್ದಾರೆ. ಇಬ್ಬರು ಪುತ್ರಿಯರು ತಂದೆಯಂ ತೆಯೇ ನೇತ್ರ ತಜ್ಞೆಯರು. ಫ್ಯೂದೊರೊವ್ ಬಳಿ ಸಹಾಯಕ ವೈದ್ಯರಾಗಿ ಸೇವೆ ಸಲ್ಲಿಸುವ ವರು ವರ್ಷದಲ್ಲಿ 2,20,000 ಕೆರಾಟೊಮಿ ನೇತ್ರ ಶಸ್ತ್ರಚಿಕಿತ್ಸೆ ಕೈಗೊಳ್ಳುತ್ತಾರೆ. ಮಾಸ್ಕೋದಲ್ಲಿ ಅವನು ಸ್ಥಾಪಿಸಿರುವ ಅತಿಸೂಕ್ಷ್ಮ ನೇತ್ರ ಶಸ್ತ್ರ ಚಿಕಿತ್ಸೆ ಸಂಸ್ಥೆ ಅತ್ಯಾಧುನಿಕ ಸಾಧನ ಸಲಕರಣೆ ಗಳಿಂದ ಸುಸಜ್ಜಿತವಾಗಿದೆ. ಇತ್ತೀಚೆ ಸಂಸ್ಥೆ ಯನ್ನು ಆಧುನಿಕಗೊಳಿಸಲು ಫ್ಯೂದೊರೊವ್ ಮೂರುವರೆ ಕೋಟಿ ರೂಪಾಯಿಗಳಷ್ಟು ಹಣ ವೆಚ್ಚ ಮಾಡಿದ. ನೇತ್ರರೋಗಗಳ ಚಿಕಿತ್ಸೆಯಲ್ಲಿ ಹೊಸ ಆವಿಷ್ಕಾರವೆನಿಸಿರುವ "ತೇಲುವ ಕಣ್ಣಾ ಸ್ಪತ್ರೆ"ಯ ನಿರ್ಮಾಣಕ್ಕೆ ನಾಲ್ಕೂವರೆ ಕೋಟಿ ರೂಪಾಯಿಗಳಷ್ಟು ವೆಚ್ಚವಾಯಿತು. ರಶಿಯ ದಲ್ಲಿ ಬಹು ಮಹಡಿಗಳ ಬೃಹತ್ ಹೊಟೇಲೊಂ ದನ್ನು ನಿರ್ಮಿಸಲು ಫ್ರೆಂಚ್ ಕಂಪೆನಿಯೊಂದು ಫ್ಯೂದೊರೊವ್‌ಗೆ 64 ಲಕ್ಷ ಡಾಲರುಗಳಷ್ಟು ನೆರವು ನೀಡಿದೆ. ನಾಲ್ಕು ವರ್ಷಗಳ ಹಿಂದೆ ರಶಿಯನ್ ಸರಕಾರ ವಿಶೇಷ ಕಾನೂನು ರಚಿಸಿ ಫ್ಯೂದೊರೊವ್‌ಗೆ ಸ್ವತಂತ್ರ ವ್ಯಾಪಾರ ಮಾಡುವ ಅವಕಾಶ ಒದಗಿಸಿದೆ.

ಯೌವನದ ದಿನಗಳಲ್ಲಿ ಫ್ಯೂದೊರೊವ್ ವಿಮಾನ ಚಾಲಕನಾಗುವ ಆಸೆ ಇಟ್ಟು ಕೊಂಡಿದ್ದ. ವಿಮಾನ ಚಾಲಕನ ತರಬೇತಿ ಪಡೆ ಯುತ್ತಿದ್ದಾಗಲೊಮ್ಮೆ ಟ್ರಾಮ್‌ನ ಅಡಿಗೆ ಬಿದ್ದು ಬಲಗಾಲಿನ ಸ್ವಲ್ಪ ಭಾಗ ನಜ್ಜುಗುಜ್ಜಾಯಿತು. ಈಗ ಆತ ಕೃತಕ ಕಾಲು ಅಳವಡಿಸಿಕೊಂಡಿ ದ್ದಾನೆ. ಈ ಆಘಾತದ ಬಳಿಕ ವಿಮಾನ ಚಾಲಕ ನಾಗುವ ಆಸೆಯನ್ನಾತ ತ್ಯಜಿಸಿ ವೈದ್ಯನಾದ.

ಫ್ಯೂದೊರೊವ್‌ನ ವಾರ್ಷಿಕ ಆದಾಯ 18,000 ರೂಬಲ್ಲುಗಳಿದ್ದು! ಇದು ಕೇವಲ ಸಂಬ ಳದ ಮೊತ್ತ ಮಾತ್ರ. ಸರಕಾರಿ ಆಸ್ಪತ್ರೆಗಳಲ್ಲಿ ದುಡಿಯುವ ನರ್ಸ್ 40 ರೂಬಲ್ ಸಂಪಾದಿಸಿ ದರೆ ಅವನ ಕೈಕೆಳಗೆ ದುಡಿಯುವ ನರ್ಸ್ ತಿಂಗಳಲ್ಲಿ 250ರಿಂದ 280 ರೂಬಲ್ ಸಂಪಾದಿಸು ತ್ತಾಳೆ. ಫ್ಯೂದೊರೊವ್ ಮೈಕ್ರೊಸರ್ಜರಿ ಇನ್ಸ್ಟಿ ಟ್ಯೂಟಿನ ಹಿರಿಯ ವೈದ್ಯಾಧಿಕಾರಿಗಳು, ತಿಂಗ ಳಿಗೆ ಸಾವಿರ ರೂಬಲ್ ಸಂಪಾದಿಸುತ್ತಾರೆ. ವೇತ ನವಲ್ಲದೆ ಲಾಭಾಂಶದಿಂದ ಲಭಿಸುವ ಡಿವಿ ಡೆಂಟ್ ಸುಮಾರು 3000 ರೂಬಲ್ಲುಗಳಷ್ಟು.

ಅವರು ಸ್ಥಾಪಿಸಿರುವ ತೇಲುವ ಕಣ್ಣಾಸ್ಪತ್ರೆ 'ಒಡೆಸ್ಸಾ' ರೇವಿನಲ್ಲಿ ಬಾಡಿಗೆ ತಳಹದಿಯ ಮೇಲೆ 200 ದಿನ ಕಾರ್ಯ ನಿರ್ವಹಿಸುತ್ತದೆ. ವರ್ಷದುದ್ದಕ್ಕೂ ಅದು ಕಾರ್ಯ ನಿರ್ವಹಿಸು ವಂತಾಗಲು ಫ್ಯೂದೊರೊವ್ ಶ್ರಮಿಸುತ್ತಿದ್ದಾನೆ.

ಕಳೆದ ವರ್ಷ ಫ್ಯೂದೊರೊವ್‌ನ ಸಾಮ್ರಾಜ್ಯ ಹದಿನೆಂಟು ಕೋಟಿ ರೂಪಾಯಿಗಳಷ್ಟು ಗಳಿಸಿ ತೆಂದು ವದಂತಿ ಇದೆ. ಅವರು ವೈಯಕ್ತಿಕವಾಗಿ ಪಡೆಯುವ ಡಿವಿಡೆಂಡಿನ ಮೊತ್ತವೇ ಹತ್ತು ಸಾವಿರ ರೂಬಲ್ಲುಗಳಷ್ಟು.

ಡಾ. ಫ್ಯೂದೊರೊವ್ ಮಾಸ್ಕೋದ ಹೊರ ವಲಯದಲ್ಲಿರುವ ಝುಲೆನೊಗ್ರಾಡಿನಲ್ಲಿ ಬೃಹತ್ ಕೃಷಿಕ್ಷೇತ್ರವೊಂದನ್ನು ಆರಂಭಿಸಿದ್ದಾನೆ. ಈ ಕೃಷಿಕ್ಷೇತ್ರದಲ್ಲಿ ದುಡಿಯುವ ಗೋವಳಗಿತ್ತಿ ಯರು ತಿಂಗಳಿಗೆ ಸಾವಿರ ರೂಬಲ್ ಸಂಪಾದಿಸು



ತ್ತಾರೆ. ಹೀಗಾಗಿ ಫ್ಯೂದೊರೊವ್‌ನ ತಂದೆ 17 ವರ್ಷ ಜೈಲು ಶಿಕ್ಷೆ ಅನುಭವಿಸಬೇಕಾಯಿತು. ಫ್ಯೂದೊರೊವ್‌ನ ಮೂರನೇ ಪತ್ನಿ ಸ್ತ್ರೀರೋಗ ತಜ್ಞೆ. "ಜೀವನದಲ್ಲಿ ಫ್ಯೂದೊರೊವ್ ಹೆದರುವುದು ಜೈಲುವಾಸಕ್ಕೆ ಮಾತ್ರ ಎಂದು ಹೇಳುವುದಿದೆ.

★

ರಶಿಯದ ಜನಪ್ರಿಯ ಪಾಪ್ ಗಾಯಕಿ ಅಲ್ಲಾ ಪುಗಚೇವಾ ಮಾಸ್ಕೋದಲ್ಲಿ ಫ್ರಾನ್ಸಿನಲ್ಲಿ ತಯಾರಾದ ಅತ್ಯಾಕರ್ಷಕ ಪೀಠೋಪಕರಣಗಳು, ಖ್ಯಾತ ರಶಿಯನ್ ಕಲಾವಿದರು ರಚಿಸಿದ ವರ್ಣಚಿತ್ರಗಳಿಂದ ಅಲಂಕೃತವಾದ ಆರು ಅಂತಸ್ತಿನ ಭವ್ಯ ಬಂಗಲೆಯಲ್ಲಿ ನೆಲೆಸಿದ್ದಾಳೆ. ವರ್ಷದಲ್ಲಿ ಬಹಳಷ್ಟು ದಿನ ಗಾಯನ ಕಾರ್ಯಕ್ರಮಗಳನ್ನು ನೀಡಲು ವಿದೇಶಿ ಪ್ರವಾಸದಲ್ಲಿ ತೊಡಗಿರುತ್ತಾಳೆ. ಹೀಗಾಗಿ ಅವಳು ಮನೆಯಲ್ಲಿ ಇರುವುದೇ ಅಪರೂಪ. ಈಚೆಗಷ್ಟೆ ಆಕೆ ಆಸ್ಟ್ರೇಲಿಯಾ, ಉತ್ತರ ಕೊರಿಯಾ, ಸಿಂಗಾಪುರ, ಸೈಬೀರಿಯಾದಲ್ಲಿ ಪಾಪ್ ಸಂಗೀತ ಕಾರ್ಯಕ್ರಮ ನೀಡಿ ಮಾಸ್ಕೋಗೆ ಹಿಂತಿರುಗಿದಳು.



## ರೂಬಲ್ ಕೋಟ್ಯಧೀಶರು

"ಸೋವಿಯತ್ ಕೋಟ್ಯಧೀಶ" ಎಂಬ ಪದದ ನಿರ್ವಚನ ಅಷ್ಟು ಸುಲಭವಲ್ಲ. ಗೊರ್ಬಚೆವ್ ಅಧಿಕಾರಕ್ಕೆ ಬರುವ ಮುನ್ನ ದೇಶದಲ್ಲಿ ಕೆಲವೇ ಕೆಲವು ಜನರ ಬಳಿ ಅಮೂಲ್ಯ ಕಲಾವಸ್ತುಗಳಿದ್ದು ಅವರನ್ನು ಡಾಲರ್ ಕೋಟ್ಯಧೀಶರು ಎಂದು ಕರೆಯುವ ಪರಿಪಾಠವಿತ್ತು. ರೂಬಲ್ ಕೋಟ್ಯಧೀಶರ ಸಂಖ್ಯೆ ಇನ್ನಷ್ಟೂ ಕಡಿಮೆ. ಇಂದು ರಶಿಯದ ಮೂವತ್ತು ಕೋಟಿಯಷ್ಟು ಜನರ ಪೈಕಿ ನೂರಕ್ಕಿಂತ ಸ್ವಲ್ಪ ಕಡಿಮೆ ಡಾಲರ್ ಕೋಟ್ಯಧೀಶರಿದ್ದಾರೆ ಎನ್ನಬಹುದು. ಲೇಖನದಲ್ಲಿ ಉಲ್ಲೇಖಿಸಿದ ನಾಲ್ವರು ಕೋಟ್ಯಧೀಶರಲ್ಲದೆ ಅಪರಾಧ ಕಾದಂಬರಿಗಳನ್ನು ಬರೆದು ಜನಪ್ರಿಯರಾಗಿರುವ ಜೂಲಿಯನ್ ಸೆಮೆನೊವ್ (ಅವರ ಲಕ್ಷಗಟ್ಟಲೆ ಕೃತಿಗಳು ಮಾರಾಟವಾಗಿವೆ,) ಅಂತಾರಾಷ್ಟ್ರೀಯ ಖ್ಯಾತಿಯ ಬ್ಯಾಲೆ ಕಲಾವಿದೆ ಮಾಯಾ ಪ್ಲಿಸೆತ್ಸ್‌ಕಾಯ, ಪಿಯಾನೊವಾದಕ ಸ್ವ್ಯೆತೊಸ್ಲಾವ್ ರಿಚ್ಚರ್, ಚದುರಂಗದ ಗ್ರ್ಯಾಂಡ್ ಮಾಸ್ಟರ್ ಅನಾತೊಲಿ ಕಾರ್ಪೊವ್, ಗಾರಿ ಕಾಸ್ಪರೊವ್ ಮುಂತಾದ ಕೆಲವರನ್ನು ಹೆಸರಿಸಬಹುದು. ಸುಮಾರು ಒಂದು ಲಕ್ಷ ರೂಬಲ್ ಕೋಟ್ಯಧೀಶರು ರಶಿಯದಲ್ಲಿದ್ದಾರೆ. ಮುಖ್ಯವಾಗಿ ಉದ್ಯೋಗದಲ್ಲಿರುವವರು, ಕಲಾವಿದರು ಈ ವರ್ಗಕ್ಕೆ ಸೇರುತ್ತಾರೆ. ಒಪೆರಾ ಗಾಯಕಿ ಎಲೆನಾ ಒಬ್ರಾತ್ಸೊವಾ, ಸಾಹಿತಿ ಅನಾತೊಲಿ ರೈಬಕೊವ್, ಹೃದಯ ಶಸ್ತ್ರಚಿಕಿತ್ಸಾ ತಜ್ಞ ನಿಕೊಲಾಯಿ ಅಮೊಸೊವ್, ಹಸ್ತ ಸ್ಪರ್ಶದಿಂದ ರೋಗಗಳನ್ನು ವಾಸಿಮಾಡುವ ಅಸಾಧಾರಣ ಶಕ್ತಿಯುಳ್ಳ ದ್ಜೂನಾ ದಾವಿತಾಶ್ವಿಲಿ ಮತ್ತು ಕ್ರೆಮ್ಲಿನ್‌ನಲ್ಲಿ ಹಿರಿಯ ನಾಯಕರ ಭಾವಚಿತ್ರ ರಚಿಸಿಕೊಡುವ ದ್ಮಿತ್ರಿ ನಲಬಂದ್ಯಾನ್ ಈ ಸಾಲಿಗೆ ಸೇರುತ್ತಾರೆ.

ರಶಿಯದ ಬಹಳಷ್ಟು ಕೋಟ್ಯಧೀಶರು ತಮ್ಮನ್ನು ಹಾಗೆ ಕರೆದುಕೊಳ್ಳಲು ಇಷ್ಟಪಡುತ್ತಿಲ್ಲ. ಅಲ್ಲಿ ಅಪಹರಣ ಅಥವಾ ದರೋಡೆಯ ಭೀತಿಯಲ್ಲ ನಿಜ. ಆದರೆ ತಮ್ಮ ಜೀವನ ವಿಧಾನ ಅದ್ದೂರಿಯದೆಂದು ಒಮ್ಮೆ ಪ್ರಚಾರವಾದರೆ ತಮ್ಮ ಗೌರವ ಹಾಗೂ ಜನಪ್ರಿಯತೆಗೆ ಹಾನಿಯಾಗಬಹುದು ಎಂದು ಅವರು ಭಾವಿಸುತ್ತಾರೆ. ಆದುದರಿಂದಲೇ ಅವರು ತಮ್ಮ ಭವ್ಯ ನಿವಾಸಗಳನ್ನು ನಗರದಿಂದ ದೂರದಲ್ಲಿರುವ ಗ್ರಾಮಾಂತರ ಪ್ರದೇಶಗಳಲ್ಲಿ ನಿರ್ಮಿಸಲು ಬಯಸುತ್ತಾರೆ.

ಮಾಸ್ಕೋದ ಕ್ರೀಡಾಭವನದಲ್ಲಿ ಜರುಗಿದ ಅವಳ ಸಂಗೀತ ಕಾರ್ಯಕ್ರಮದಲ್ಲಿ 14 ಸಾವಿರ ಶ್ರೋತೃಗಳು ನೆರೆದಿದ್ದರು. ಅಲ್ಲಾಳ ಕಾರ್ಯಕ್ರಮಗಳ ಟಿಕೇಟಿನ ಬೆಲೆ ಮೂರರಿಂದ ಹತ್ತು ರೂಬಲ್‌ಗಳಷ್ಟು ಇರುತ್ತವೆ.

1987ರಿಂದೀಚೆಗೆ ಗಾಯನ ಗೋಷ್ಠಿಗಳನ್ನು ನಡೆಸಲು ಆಕೆ ಸ್ವಂತ ಕಲಾಭವನವನ್ನು ಪಡೆದುಕೊಂಡಿದ್ದಾಳೆ. ಆಕೆಗೆ ವಿದೇಶಿ ನಾಣ್ಯ ವ್ಯವಸ್ಥೆಯಲ್ಲಿ ನಿತ್ಯ ವ್ಯವಹಾರ ಕೈಗೊಳ್ಳುವ ಸ್ವಾತಂತ್ರ್ಯವಿದೆ. ಕಳೆದ 20 ವರ್ಷಗಳಿಂದಲೂ ಅಲ್ಲಾ ಪುಗಚೆವಾ ಪಾಪ್ ಗಾಯನದಲ್ಲಿ ತೊಡಗಿದ್ದಾಳೆ. ಆಕೆ ಹಾಡಿದ ಹಾಡುಗಳ 200 ಧ್ವನಿಮುದ್ರಿಕೆಗಳು ಜಗತ್ತಿನಾದ್ಯಂತ ಮಾರಾಟವಾಗಿವೆ. ಅವುಗಳಿಗೆ ದುಬಾರಿ ಬೆಲೆ. ಅಲ್ಲಾಳ ಎರಡನೇ ಪತಿ ಯೆವ್ಗನಿ ಬೋಲ್ಡಿನ್ ಅವಳ ಪಾಪ್ ಸಂಗೀತ ಕಾರ್ಯಕ್ರಮ ನಿರ್ವಹಣೆ, ಹಣಕಾಸು ವ್ಯವಹಾರಗಳ ಜವಾಬ್ದಾರಿ ವಹಿಸಿದ್ದಾನೆ. ಆತ ಅಮೆರಿಕಾ ಕೆನಡಾ ಮನರಂಜನೆ ಕಂಪನಿಯೊಂ

ದರ ಮ್ಯಾನೆಜರ್ ಆಗಿಯೂ ಕಾರ್ಯ ನಿರ್ವಹಿಸುತ್ತಾನೆ. ಅಲ್ಲಾ ಈ ಕಂಪನಿಯ ಕಲಾ ನಿರ್ದೇಶಕಿ.

42ರ ಹರೆಯದ ಜಾನ್ ಮ್ನುಖಿನ್ ಅಂತಾರಾಷ್ಟ್ರೀಯ ಖ್ಯಾತಿ ಗಳಿಸಿರುವ ಮಾಜಿ ಸೋವಿಯತ್ ಕುಸ್ತಿಪಟು. ಇಲೆಕ್ಟ್ರಿಕಲ್ ಎಂಜನಿಯರಿಂಗಿನಲ್ಲಿ ಪದವೀಧರನಾಗಿರುವ ಆತ ಕೆಲವು ವರ್ಷ ಜಾಹಿರಾತು ಮತ್ತು ಮಾಹಿತಿ ನಿರ್ದೇಶನಾಲಯದಲ್ಲಿ ಸಣ್ಣ ಉದ್ಯೋಗದಲ್ಲಿದ್ದ. ಇಂದು ಆತ ಕೋಟ್ಯಧೀಶ. ಅವನು ನಾಲ್ಕು ಯಂತ್ರೋಪಕರಣ ನಿರ್ಮಿಸುವ ಕಾರ್ಖಾನೆಗಳು ಸ್ಥಿರಾಸ್ತಿಯನ್ನು ಅಭಿವೃದ್ಧಿಸುವ ಕಂಪೆನಿ, ವಿನ್ಯಾಸ ಸಹಕಾರಿ ಸಂಸ್ಥೆ ಹಾಗೂ ಇಲೆಕ್ಟ್ರೋ ಕಂಪ್ಯೂಟರ್ ಕಂಪೆನಿಗಳಲ್ಲಿ ಸಮನ್ವಯಗೊಂಡ ಬೃಹತ್ ಉದ್ದಿಮೆಯೊಂದರ ಮುಖ್ಯಸ್ಥನೂ ಹೌದು. ಸುಮಾರು ಹತ್ತು ಸಾವಿರ ಜನರು ಈ ಸಂಸ್ಥೆಗಳಲ್ಲಿ ಕೆಲಸ ಮಾಡುತ್ತಿದ್ದಾರೆ. ಸುಪ್ರಸಿದ್ಧ ತಗಾಂಕಾ ರಂಗಮಂದಿರದ ಸಮೀಪ ಎರಡು ಮಹಡಿಗಳ ನಿವಾಸದಲ್ಲಿ ಆತ 1600 ಜನರ ಸಹಾಯದಿಂದ ಈ ಸಂಕೀರ್ಣದ ವ್ಯವಹಾರಗಳನ್ನು ನಿರ್ವಹಿಸುತ್ತಾನೆ. ದಿನದಲ್ಲಿ ಆತ ನಿದ್ದೆಗಾಗಿ ನಾಲ್ಕು ತಾಸು ಮಾತ್ರ ಮೀಸಲಿರಿಸಿ ಉಳಿದೆಲ್ಲ ಸಮಯವನ್ನು ಸಂಕೀರ್ಣದ ವ್ಯವಹಾರಗಳಿಗೆ ವಿನಿಯೋಗಿಸುತ್ತಾನೆ.

ಕೆಲವು ವರ್ಷಗಳ ಹಿಂದೆ 2,40,000 ರೂಬಲ್ ಬ್ಯಾಂಕ್ ಸಾಲ ಪಡೆದು ಉದ್ಯಮ ವ್ಯವಹಾರ ಆರಂಭಿಸಿದ ಜಾನ್ ಇಂದು ರಶಿಯದಲ್ಲಿ ಅತ್ಯಂತ ಶ್ರೀಮಂತನಾದ ವಾಣಿಜ್ಯೋದ್ಯಮಿ. ಮಾಸ್ಕೋ ನಗರದಲ್ಲಿ ಹಲವು ಫ್ಲಾಟ್‌ಗಳ ಮಾಲಿಕನಾದ ಅವನಿಗೆ ಹಳ್ಳಿಯಲ್ಲಿ ಒಂದು ಭವ್ಯ ನಿವಾಸವೂ ಇದೆ. 2,50,000 ರೂಬಲ್ ಬೆಲೆಯ ಮರ್ಸಿಡಿಸ್ ಕಾರು ಅಲ್ಲದೆ ಹಲವು ಕಾರುಗಳೂ ಅವನ ಬಳಿ ಇವೆ.

ಅಗ್ನಿ ನಿರೋಧಕವಾದ ಪೀಠೋಪಕರಣಗಳನ್ನು ತಯಾರಿಸುವ ಕಾರಖಾನೆಯೂ ಅವನ ಒಡೆತನದಲ್ಲಿದೆ. ಕಳೆದ ವರ್ಷ ಈ ಕಾರ್ಖಾನೆ



"ನಾನು ಅಧಿಕಾರದಲ್ಲಿದ್ದಾಗ ಹೆಚ್ಚು ವಿಮಾನಗಳು ಅಪಘಾತವಾಗಿ ನಿನಗೆ ಸಹಾಯವಾಗಿದೆ ಯಮರಾಜಾ.. ಆದ್ದರಿಂದ ನನಗೆ ಸ್ವರ್ಗ ಸಿಗಲೇ-ಬೇಕು...ಅಲ್ವಾ?"

7.2 ಕೋಟಿ ರೂಬಲ್ಲುಗಳಷ್ಟು ಲಾಭ ಗಳಿಸಿತು ಈ ಕಾರ್ಖಾನೆಯನ್ನು ಆಧುನಿಕಗೊಳಿಸಲು ಆ 27 ಲಕ್ಷ ರೂಬಲ್ಲುಗಳನ್ನು ವೆಚ್ಚ ಮಾಡಿದ ಸರಕಾರಿ ರಂಗದ ಉದ್ಯಮಗಳಲ್ಲಿ ದುಡಿಯು ಉನ್ನತ ದರ್ಜೆಯ ಎಂಜನಿಯರ್‌ನ ಸಂಬ ತಿಂಗಳಿಗೆ 400 ರೂಬಲ್ಲುಗಳಾದರೆ ಜಾನ್ ಮುಖಿನ್‌ರ ಸಂಸ್ಥೆಯಲ್ಲಿ ದುಡಿಯುವ ಎಂಜಿ ಯರುಗಳ ಕನಿಷ್ಠ ವೇತನ ತಿಂಗಳಿಗೆ 150 ರೂಬಲ್ಲುಗಳಷ್ಟು. ಆತನ ಸಂಸ್ಥೆಯಲ್ಲಿ ದು ಯುವ ಎಲ್ಲ ಎಂಜನಿಯರುಗಳು ವರ್ಷದಲ್ಲಿ ಒಂದು ಲಕ್ಷ ರೂಬಲ್ ಡಿವಿಡೆಂಡ್ ಗಳಿಸ ತ್ತಾರೆ. ಸ್ಟಾಲಿನ್ನರ ಹಳ್ಳಿ ಮನೆಯಿದ ಕುಂತ್ಸೆವೋ ಎಂಬಲ್ಲಿ ಜಾನ್ ಭವ್ಯ ಹೊಟೆ ಲೊಂದನ್ನು ಕಟ್ಟಿಸುತ್ತಿದ್ದಾನೆ. ಕಷ್ಟದಲ್ಲಿರುವ ರಿಗೆ ಹಣಕಾಸಿನ ನೆರವು ನೀಡಲು ಆತ ಸದಾ ಸಿದ್ಧ ಎನ್ನುವುದಕ್ಕೆ ಕಳೆದ ವರ್ಷ ಆತ 15 ಲಕ್ಷ ರೂಬಲ್‌ಗಳನ್ನು ದಾನಧರ್ಮಕ್ಕೆ ವಿನಿಯೋ ಸಿದ್ದೆ ಸಾಕ್ಷಿ.

ಸಮಾಜವಾದಿ ರಾಷ್ಟ್ರವಾದ ರಶಿಯದಲ್ಲೂ ಕೋಟ್ಯಧೀಶರಿದ್ದಾರೆನ್ನುವುದು ನಿಜಕ್ಕೂ ಆಶ ರ್ಯಕರವಲ್ಲವೆ?

# ಅವರು ಸಮುದ್ರಕ್ಕೇ ತಡೆಯೊಡ್ಡಿದರು



ಅಣೆಕಟ್ಟೆ ಕಟ್ಟಲು ಅಪಾರ ಹಣ ಮತ್ತು ಅಸಾಮಾನ್ಯಯಂತ್ರಶಕ್ತಿ ಅವಶ್ಯ ಎಂದು ನೀವು ವಾದಿಸುವಿರಾದರೆ ಬಂಗ್ಲಾದೇಶದ ಜನ ನಿಮ್ಮನ್ನು ಕಂಡು ನಗಬಹುದು. ''ನಾವು ಫೆನಿ ನದಿಯ ಮುಖಜ ಪ್ರದೇಶದ ಒತ್ತನ್ನು ಒತ್ತಿ ಹಿಡಿದೆವು-ಅದಕ್ಕೇನೂ ಪಂಚವಾರ್ಷಿಕ ಯೋಜನೆ ಎಂದು ನಾವು ತಲೆಕೆಡಿಸಿಕೊಳ್ಳಲಿಲ್ಲ. ನಮಗೆ ನಮ್ಮ ಮುಖಂಡನ ಮಾತಿನಲ್ಲಿ ನಂಬಿಕೆಯಿತ್ತು. ಅವರ ಅನುಯಾಯಿಗಳಾಗಿ ಕೈಕೆಸರು ಮಾಡಿಕೊಂಡೆವು. ಏಳು ಗಂಟೆಗಳ ಎಡೆಬಿಡದ ಶ್ರಮದಾನದಿಂದ 1300 ಮೀಟರ್ ಅಗಲದ ಅಣೆಕಟ್ಟೆಯನ್ನು ಕಟ್ಟಿದೆವು. ಇದರಿಂದ ಇಬ್ಬಗೆಯ ಲಾಭವಾಯಿತು ನಮಗೆ - ಢಾಕ್ಕಾ - ಚಿತ್‌ಗಾಂಗ್ ಹೆದ್ದಾರಿ ಸೇರಲು ಇಪ್ಪತ್ತೈದು ಕಿಲೋಮೀಟರುಗಳ ಉಳಿತಾಯ ಮತ್ತು 27000 ಹೆಕ್ಟೇರ್ ಭೂಮಿಗೆ ನೀರಾವರಿ...''

1971ರಲ್ಲಿ ಸ್ವತಂತ್ರವಾದ ಬಂಗ್ಲಾದೇಶ ನಮ್ಮ ದೇಶದ ಬಿಹಾರಕ್ಕಿಂತ ಚಿಕ್ಕವಿಸ್ತಾರದ ರಾಷ್ಟ್ರ. ಸದ್ಯದ ಜನಸಂಖ್ಯೆ ಹತ್ತು ಕೋಟಿಗೂ ಮಿಕ್ಕಿದೆ. ಅಧಿಕ ಜನಸಾಂದ್ರತೆಯುಳ್ಳ ಈ ದೇಶ ಸ್ವಾತಂತ್ರ್ಯಾನಂತರ ತನ್ನ ಅಸ್ತಿತ್ವಕ್ಕಾಗಿ ಅಭಿವೃದ್ಧಿಗಾಗಿ ಸತತ ಶ್ರಮಿಸುತ್ತಲಿದೆ. ಆಹಾರ ಸಮಸ್ಯೆ ಒಂದೆಡೆಯಾದರೆ, ಚಂಡಮಾರುತ - ನೆರೆಹಾವಳಿಗಳಂಥ ಪ್ರಾಕೃತಿಕ ವಿಕೋಪಗಳ ಪೀಡೆ ಇನ್ನೊಂದೆಡೆ. ಮಳೆಗಾಲ ಬಂತೆಂದರೆ ಮೃತ್ಯುವೇ ಎದುರಾದಂತೆ ನಡುಗುತ್ತಾರೆ ಆ ಜನ.

ಹಲವು ನದಿಗಳು ಹರಿಯುವ ಆ ನಾಡಿನಲ್ಲಿ ಮಳೆಗಾಲದಲ್ಲಿ ಉಕ್ಕಿ ಬರುವ ನದಿಗಳಿಂದಾಗಿ ಬೆಳೆದು ನಿಂತ ಬೆಳೆ ಕೈಗೆ ಬಾರದೆ ನೀರು ಪಾಲಾಗುವ ಪ್ರಸಂಗಗಳು ಸಾಮಾನ್ಯ. ಜೀವನಾಧಾರವಾದ ನೀರೇ ಜೀವ ಕಂಟಕವಾಗುವುದನ್ನು ಆಧುನಿಕ ಮಾನವ ಅಸಹಾಯಕನಾಗಿ ನೋಡುತ್ತ



ಗುರುರಾಜ ಜೋಶಿ

ನಿಂತಾನೆಯೆ?

ಫೆನಿ ನದಿಯ ಮುಖಜ ಪ್ರದೇಶದ ಸಮು ದ್ರದ ಒತ್ತು ಹಲವು ಆತಂಕಗಳನ್ನು ಸೃಷ್ಟಿಸಿತ್ತು. ಅಲೆಗಳ ಸತತ ಹೊಡೆತಕ್ಕೆ ಸಿಲುಕಿ ನಲುಗುವ ಈ ಪ್ರದೇಶದಲ್ಲಿ ಕೊರೆತದಿಂದಾಗಿ ನೀರು ಮತ್ತಷ್ಟು ಒಳನುಗ್ಗುತ್ತಿತ್ತು. ಈ ಕೊರೆತವನ್ನು ಶಾಶ್ವತ ವಾಗಿ ತಡೆಗಟ್ಟಲು ಯೋಚಿಸಿದವರು ನೆದ ರ್ಲ್ಯಾಂಡಿನಿಂದ ಬಂದ ಹ್ಯಾನ್ಸ್ ವಾನ್ ಡ್ಯುವೆಂ ಡಿಕ್. ತನ್ನ ತಾಯ್ನಾಡಿನಲ್ಲಿ ಹತ್ತಾರು ವರ್ಷಗಳ ಕಾಲ ಇಂಥ ಯೋಜನೆಗಳ ಅಧ್ಯಯನ, ಅನು ಷ್ಠಾನಗಳಲ್ಲಿ ತೊಡಗಿದ್ದವರು ಡ್ಯುವೆಂಡಿಕ್. ಮೂವತ್ತೆರಡು ವರ್ಷಗಳ ಹಿಂದೆ (1953) ನೆದ ರ್ಲ್ಯಾಂಡಿನಲ್ಲಿ ಯಶಸ್ವಿಯಾಗಿದ್ದ ಯೋಜನೆ ಯನ್ನೇ ಇಲ್ಲಿ ಪುನರಾವರ್ತಿಸಲು ಯೋಚಿಸಿ ದರು ಅವರು.

ನದಿಯ ಒಡಲನ್ನು ಕಲ್ಲುಗಳಿಂದ ತುಂಬು ವುದು, ಬಾಯ್ತೆರೆದು ನಿಂತ ಕೊರಕಲನ್ನು ಮಣ್ಣು ತುಂಬಿದ ಚೀಲಗಳಿಂದ ಮುಚ್ಚುವುದು, ಮತ್ತು ಈ ಮಣ್ಣು - ಕಲ್ಲುಗಳಿಂದಲೇ ಒಡ್ಡನ್ನು ಎತ್ತರಿಸಿ ಮೇಲೆ ಕಾಂಕ್ರೀಟ್ ಹಾಕುವುದು - ಇದು ಡ್ಯುವೆಂಡಿಕ್ಕರ ಯೋಜನೆ.

ಆದರೆ ಇದೇನು ಸುಲಭಸಾಧ್ಯವಾಗಿರಲಿಲ್ಲ. ಪ್ರತಿಯೊಂದಕ್ಕೂ ಪರದಾಡಬೇಕಿತ್ತು. ಅವಶ್ಯಕ ವಸ್ತುಗಳ ಪೂರೈಕೆಯ ಸಮಸ್ಯೆ ಒಂದು ಕಡೆ; ಪ್ರಕೃತಿಯ ವಿರೋಧ ಇನ್ನೊಂದು ಕಡೆ. ಇಚ್ಛಾ ಶಕ್ತಿ-ಕ್ರಿಯಾಶಕ್ತಿ-ಅನುಭವಗಳು ಒಟ್ಟಾದರೆ

**ಜನಶಕ್ತಿಯ ಸಾಮರ್ಥ್ಯ ಬಲು ದೊಡ್ಡದು. ಅದು ಒಂದಾದರೆ, ಒಟ್ಟಾಗಿ ನಿಂತರೆ ಎಂಥ ಅಸಾಧ್ಯವೂ ಸಾಧ್ಯವಾಗಿಬಿಡುತ್ತದೆ. ಜನ ಶಕ್ತಿಯೆದುರು ಜಲಶಕ್ತಿಯೂ ಮಣಿಯಬೇಕಾಗುತ್ತದೆಂಬುದನ್ನು 1985ರ ಫೆಬ್ರುವರಿಯ ಕೊನೆಯ ದಿನ ನಮ್ಮ ನೆರೆಯ ಬಂಗ್ಲಾದೇಶದ ಹದಿನೈದು ಸಾವಿರ ಜನ ನಿಜವಾಗಿಸಿ ತೋರಿಸಿದರು. ಹೌದು, ಅವರೆಲ್ಲ ಸಮುದ್ರಕ್ಕೇ ತಡೆಯೊಡ್ಡಿದರು.**

ಯಾವುದೂ ಕಷ್ಟವಾಗುವುದಿಲ್ಲವಲ್ಲ. ಬಂಗ್ಲಾ ಬಂಧುಗಳ ಇಚ್ಛಾಶಕ್ತಿ-ಕ್ರಿಯಾಶಕ್ತಿಗಳಿಗೆ ಕೈ ಕೂಡಿಸಿದ್ದು ಡ್ಯುವೆಂಡಿಕ್ಕರ ಅನುಭವ.

"ಕೊರಕಲಿಗೆ ಮಣ್ಣು ತುಂಬುವುದೆ? ಮರಳನ್ನು ಚೀಲಗಳಲ್ಲಿ ತುಂಬಿಸಿ ಹಾಕಬಹುದಾಗಿತ್ತಲ್ಲವೆ?'' ಎಂದು ಡ್ಯುವೆಂಡಿಕ್ಕರನ್ನು ಕೇಳಿದವರು ಬಹಳ ಜನ. "ಆದರೆ ಆ ಉಸುಕು ಅದೆಷ್ಟು ನಯವಾಗಿತ್ತೆಂದರೆ ಇಲ್ಲಿ ಬಳಸಿದ ಗೋಣಿ ಚೀಲಗಳಲ್ಲಿ ಅದನ್ನು ತುಂಬಿ ಬಾಯಿ ಹೊಲೆದು ಚೀಲವನ್ನು ಮೇಲೆತ್ತಿದರೆ ನಿಮ್ಮ ಕೈಯಲ್ಲಿ ಖಾಲಿ ಚೀಲವೆ ಉಳಿಯುತ್ತಿತ್ತು - ಮರಳೆಲ್ಲ ಚೀಲದ ರಂಧ್ರಗಳಿಂದ ಸುರಿದು ಹೋಗಿರುತ್ತಿತ್ತು,'' ಎನ್ನುತ್ತಾರೆ ಡ್ಯುವೆಂಡಿಕ್.

ಇಲ್ಲಿ ಬಳಸಿದ ಮಣ್ಣನ್ನು ಚಿತ್‌ಗಾಂಗಿನ ಪರ್ವತ ಪ್ರದೇಶದಿಂದ ಅಗೆದು ಟ್ರಕ್ಕುಗಳಲ್ಲಿ ತುಂಬಿ ತರಲಾಗಿತ್ತು. ಈ ಮಣ್ಣನ್ನು ಆರು ಲಕ್ಷ ಚೀಲಗಳಲ್ಲಿ ತುಂಬಲಾಯಿತು. ಪ್ರತಿ ಚೀಲದಲ್ಲಿ ತುಂಬಿದ್ದ ಮಣ್ಣು 45 ಕಿಲೋಗಳು. ಯೋಜನೆಯ ಸ್ಥಳದಲ್ಲೇ ಭಟ್ಟಿ ಹಾಕಿ ಒಂದೂ ಕಾಲು ಕೋಟಿಗೂ ಮಿಕ್ಕ ಇಟ್ಟಿಗೆಗಳನ್ನು ತಯಾರಿಸಿ ಸುಡಲಾಯಿತು. ಈ ಇಟ್ಟಿಗೆಗಳನ್ನು ಜನ ಕುಟ್ಟಿ ಕುಟ್ಟಿ ಪುಡಿ ಮಾಡಿ ಚೀಲಗಳಲ್ಲಿ ತುಂಬಿದರು. ಒಡ್ಡು ನಿರ್ಮಾಣದ ನಂತರ ಬೇಕಾಗುವ ಇಟ್ಟಿಗೆಗಳನ್ನೂ ಇಲ್ಲಿಂದಲೇ ಪಡೆಯಲಾಯಿತು. ಹಾಗೆಯೆ ಬಂಗ್ಲಾದೇಶದ ಉತ್ತರ ಭಾಗದಿಂದ 2.5 ಲಕ್ಷ ಮೆಟ್ರಿಕ್ ಟನ್ನಿನಷ್ಟು ಬಂಡೆಗಲ್ಲುಗಳನ್ನು ತರಿಸಲಾಯಿತು. ಯಾಕೆಂದರೆ ಈ ಪ್ರದೇಶದಲ್ಲಿ ಕಲ್ಲುಗಳು ವಿರಳ. ಸರತಿಯಂತೆ ಈ ಕಲ್ಲುಗಳನ್ನು ಲಾರಿಗಳಿಂದ ಇಳಿಸಿ ಸಾಗಿಸಿದರು ಜನ.

ಜಪಾನಿನ ಶಿಮಿಜು ಕನ್‌ಸ್ಟ್ರಕ್ಷನ್ ಕಂಪನಿಯ ಗುತ್ತೆದಾರನೊಬ್ಬ ಈ ಯೋಜನೆಯ ಉಸ್ತುವಾರಿ ನೋಡಿಕೊಂಡ. ಆತ ಈ ಕೆಲಸವನ್ನು, ಕೆಲಸಗಾರರನ್ನು ಅದೆಷ್ಟು ಪ್ರೀತಿಸುತ್ತಿದ್ದನೆಂದರೆ ಅವರನ್ನೆಲ್ಲ ಬೆಳಿಗ್ಗೆ ಒಂದೆಡೆ ನಿಲ್ಲಿಸಿ ವ್ಯಾಯಾಮ ಮಾಡಿಸುತ್ತಿದ್ದ, ಓಡಿಸುತ್ತಿದ್ದ, ನಿರ್ಮಾಣ ಹಂತದಲ್ಲಿ ಅವರೆಲ್ಲ ಚಕಚಕನೆ ಕೆಲಸ ಮಾಡಲು ಹುರಿದುಂಬಿಸುತ್ತಿದ್ದ.

ಇಲ್ಲಿ ಕೆಲಸಕ್ಕೆ ಬಂದವರೆಲ್ಲ ಬಹುತೇಕ ತರುಣರು.

ಫೆನಿ ನದಿಗೆ ಸೇತುವೆ ನಿರ್ಮಾಣಕಾರ್ಯದ ಪ್ರಾರಂಭದಲ್ಲಿ ಕೊರೆತ ತಪ್ಪಿಸಲು ನದಿಯ ಒಡಲಿಗೆ ಉಕ್ಕಿನ ಸರಳುಗಳ ಮತ್ತೆ ಹಾಕಲಾಯಿತು. ದೊಡ್ಡ ದೊಡ್ಡ ಉರುಟುಗಲ್ಲುಗಳನ್ನು ಪೇರಿಸಿ, ಅವುಗಳ ಮೇಲೆ ಮಣ್ಣು ತುಂಬಿದ ಗೋಣಿ ಚೀಲಗಳನ್ನು ಜೋಡಿಸಿದರು. ಸೇತುವೆಯನ್ನು ಮಣ್ಣಿನಿಂದ ಎತ್ತರಿಸಿ, ಇಟ್ಟಿಗೆ ಹಾಗೂ ಕಾಂಕ್ರೀಟ ಬಳಸಿ ಸಜ್ಜುಗೊಳಿಸಲಾಯಿತು.

ಕೊನೆಯ ದಿನದ ಕಾರ್ಯಕ್ಕಾಗಿ ರಂಗ ಸಜ್ಜಿತ ಸಿದ್ಧವಾಗಿತ್ತು. ಆರು ತಿಂಗಳ ಸತತ ಪರಿಶ್ರಮ ಫಲ ನೀಡಲಿತ್ತು. ಒಂದೊಂದು ನಿಟ್ಟಿನಲ್ಲಿ ಒಂದೊಂದು ಲಕ್ಷ ಗೋಣಿಚೀಲಗಳು ಸಜ್ಜುಗೊಂಡು ನಿಂತಿದ್ದವು. ಸಮುದ್ರ ಪ್ರಕ್ಷುಬ್ಧಗೊಂಡಿತ್ತು. ಕೇವಲ ಅರ್ಧಗಂಟೆಯಲ್ಲಿ ಎರಡು ಮೀಟರಿನಷ್ಟು (6.6 ಅಡಿ) ಉಕ್ಕಿ ಬಂದಿತ್ತು. ಪೇರಿಸಿಟ್ಟಿದ್ದ ಗೋಣಿಚೀಲಗಳು ಪ್ರವಾಹದ ರಭಸಕ್ಕೆ ಕೊಚ್ಚಿ ಹೋಗುವ ಹೆದರಿಕೆಯೂ ಇತ್ತು. ಹಾಗಾಗಿದ್ದರೆ ಇಷ್ಟು ದಿನಗಳ ಕೆಲಸವೆಲ್ಲ ವ್ಯರ್ಥವಾಗುವ ಅಪಾಯವಿತ್ತು. ಸುದೈವ ಹಾಗಾಗಲಿಲ್ಲ. ನಿರ್ಮಿಸಿದ ಕೃತಕ ದ್ವೀಪಗಳು ಅಲೆಗಳ ಹೊಡೆತಕ್ಕೆ ಅಲುಗಾಡಲಿಲ್ಲ.

ಅಂತಿಮ ಕಾರ್ಯಕ್ಕಾಗಿ ಫೆಬ್ರುವರಿ 28ನ್ನೇ ಆಯ್ದುಕೊಳ್ಳಲು ವೈಜ್ಞಾನಿಕ ಕಾರಣವಿತ್ತು. ಅಂದು ಸಮುದ್ರದ ಆರ್ಭಟ ಕಡಿಮೆಯಾಗಿ, ಇಳಿತ ಪ್ರಾರಂಭವಾಗುವದೆಂಬುದನ್ನು ಅಧ್ಯಯನದಿಂದ ದೃಢ ಪಡಿಸಿಕೊಳ್ಳಲಾಗಿತ್ತು.

ಬಂಗ್ಲಾ ದೇಶ ಆರ್ಥಿಕವಾಗಿ ಬಡರಾಷ್ಟ್ರವಾಗಿರಬಹುದು. ಆದರೆ ಅದರ ಅಪಾರ ಜನಸಂಪತ್ತು ಇಲ್ಲಿ ಕಾರ್ಯ ಪೂರೈಸಲು ಕಟಿಬದ್ಧವಾಗಿ ನಿಂತಿತ್ತು. ಸಾವಿರ ಜನರ ಗುಂಪಿಗೆ ಒಬ್ಬ ನಾಯಕನಿದ್ದ. ವಿವಿಧೆಡೆ ಸೇರಿಸಿಟ್ಟಿದ್ದ ಮಣ್ಣು ಚೀಲಗಳನ್ನು, ಭಾರದ ಕಲ್ಲು ತುಂಡುಗಳನ್ನು

ಕ್ಲುಪ್ತ ಅವಧಿಯಲ್ಲಿ ಕೊರಕಲಿನಲ್ಲಿ ಹಾಕಲು ಸಜ್ಜಾದರು. ಸಾಗರ ಮತ್ತೊಮ್ಮೆ ಆರ್ಭಟಿಸುವುದರೊಳಗೆ ಕಾರ್ಯ ಪೂರೈಸಬೇಕಾಗಿತ್ತು. ಆ ಆತುರದೊಂದಿಗೆ ಕಾರ್ಯ ಸಾಧನೆಗೆ ಬೇಕಾದ ಮನೋಬಲ, ಹುರುಪು ಎಲ್ಲ ಅವರಲ್ಲಿತ್ತು.

ಸುಮಾರು ಆರು ಲಕ್ಷ ಗೋಣಿಚೀಲಗಳನ್ನು ಎರಡೂವರೆ ಲಕ್ಷ ಮೆಟ್ರಿಕ್ ಟನ್ನಿನಷ್ಟು ಕಲ್ಲುಗಳನ್ನು ಹದಿನೈದು ಸಾವಿರ ಜನರು ಸಾಲಾಗಿ ನಿಂತು, ಕೈಯಿಂದ ಕೈಗೆ ದಾಟಿಸಿ ಕೊರಕಲನ್ನು ಮುಚ್ಚಿದರು. ಏಳು ತಾಸುಗಳವರೆಗೆ ನಡೆದ ಈ ಕೆಲಸದಲ್ಲಿ ಅವರೆಲ್ಲ ಉತ್ಸಾಹದಿಂದ ಪಾಲ್ಗೊಂಡರು. ಜನಶಕ್ತಿಯ ಆರ್ಭಟದೆದುರು ಸಾಗರದ ಆರ್ಭಟ ತಣ್ಣಗಾಯಿತು. ಆತಂಕವೊಡ್ಡಿದ್ದ ಐದು ಟಾಕಾ). ಆದರೆ ಆ ಸಮಯದಲ್ಲಿ ಅವರು ಕೇವಲ ಕೂಲಿಗಾಗಿ ದುಡಿಯಲಿಲ್ಲ. ಆಗ ಅವರಲ್ಲಿ ಮೂಡಿದ್ದ ಉತ್ಸಾಹ, ಚಿಮ್ಮಿದ್ದ ಹುರುಪು ಅವರ್ಣನೀಯ. ಶಿಸ್ತಿನ ಸೈನಿಕರಂತೆ ಕಾರ್ಯ ನಿರ್ವಹಿಸಿದ ಈ ಜನರು ನಿಗದಿತ ಅವಧಿಯಲ್ಲಿ ಯಶಸ್ವಿಯಾಗಿ ಕೆಲಸ ಮುಗಿಸಿದ ನಂತರ ಸಂತಸದಿಂದ ಕುಣಿದು ಕುಪ್ಪಳಿಸಿದರು. ತಮ್ಮ ತಮ್ಮ ತಂಡದ ನಾಯಕನನ್ನು ಹೊತ್ತು ಕುಣಿದಾಡಿದರು. ಅಲ್ಲಿ ಆಗ ವ್ಯಕ್ತವಾದುದು ಸಂತೃಪ್ತಿಯ ಭಾವ! ಅಸಾಧ್ಯವಾದುದನ್ನು ಒಗ್ಗಟ್ಟಿನಿಂದ ಸಾಧಿಸಿದ ಧನ್ಯತೆಯ ಅಭಿವ್ಯಕ್ತಿ!

ಮುಂದಿನ ವಾರಗಳಲ್ಲಿ, ಸಾಗರದ ಉಬ್ಬರದಲೆಗಳ ಎತ್ತರಕ್ಕೂ ನಿಲುಕದಂತೆ ಒಡ್ಡನ್ನು ಎತ್ತರಿಸಲಾಯಿತು. ಜನರ ಪರಿಶ್ರಮ ಹಾಗೂ ಇಂಜಿನಿಯರರ ತಾಂತ್ರಿಕ ಕೌಶಲ್ಯದ ಫಲವಾಗಿ ರೂಪುಗೊಂಡ ಈ ಅಣೆಕಟ್ಟು, ನಿರ್ಮಾಣಗೊಂಡ ಮೂರೇ ತಿಂಗಳಿನಲ್ಲಿ ಚಂಡಮಾರುತದ ಅಗ್ನಿ ಪರೀಕ್ಷೆಗೆ ಒಳಗಾಯಿತು. ಒಂದಿನಿತೂ ಅಳುಕದೇ ಎದೆಯೊಡ್ಡಿ ನಿಂತಿತು. ಉಕ್ಕಿ ಬಂದ ಸಾಗರದ ಅಲೆಗಳು ಈ ಅಡೆತಡೆಗೆ ತಲೆಬಾಗಿದವು. ಹಿಂದೆ ಸರಿದವು. ಕಾಲನ ಪರೀಕ್ಷೆಯಲ್ಲಿ ಈ ಕಾಯಕ ಸಾಧನೆ ಗೆದ್ದಿತು. ಜನ ಸಮುದಾಯದ ಸಾಮೂಹಿಕ ಪರಿಶ್ರಮ ಅಪೂರ್ವವಾದ ಸಾಧನೆ ಮಾಡಿತ್ತು. ಮತ್ತೆ ಇಂಥ ಯೋಜನೆಗಳಿಗೆ ಪ್ರೋತ್ಸಾಹ ನೀಡಿತು.

---

ನಮ್ಮ ವಿಜಾಪುರ ಜಿಲ್ಲೆಯ ಪ್ರಖ್ಯಾತ ಚಿಕ್ಕಪಡಸಲಗಿ ಬ್ಯಾರೇಜ್ ನಿರ್ಮಾಣದ ಅವಿಸ್ಮರಣೀಯ ಸಾಹಸದಂತೆ ಬಂಗ್ಲಾಬಂಧುಗಳ ಈ ಅವಿರತ ಪರಿಶ್ರಮ ಪ್ರಶಂಶನೀಯ. ಫೆನಿಯ ಪ್ರಧಾನ ಉಪನದಿ ಮುಹುರಿಯ ಹೆಸರಿನ ಈ 'ಮುಹುರಿ ನೀರಾವರಿ ಯೋಜನೆ'ಗೆ ವಿಶ್ವಬ್ಯಾಂಕ್, ಯುರೋಪಿಯನ್ ಆರ್ಥಿಕ ಸಮುದಾಯ, ಕೆನಡಾ ಹಾಗೂ ಬಂಗ್ಲಾದೇಶಗಳ ಸಂಯುಕ್ತ ನೆರವು. ಯೋಜನೆಯ ತಾಂತ್ರಿಕ ವ್ಯವಸ್ಥೆಯನ್ನು ರೂಪಿಸಿ, ನಿರ್ಮಾಣ ಕಾರ್ಯದ ಉಸ್ತುವಾರಿ ಮಾಡಿದವರು ನೆದರ್ಲ್ಯಾಂಡಿನ ಹಾಸ್ಕೊನಿಂಗ ಫರ್ಮಿನವರು. ಈ ಯೋಜನೆಗೆ ಸಲಹೆಗಾರರಾಗಿ ಜೀವ ತುಂಬಿ ಯಶಸ್ವಿಗೊಳಿಸಿದವರು ಹ್ಯಾನ್ಸ ವಾನ್ ಡ್ಯುವೆಂಡಿಕ್. ಹ್ಯಾನ್ಸರ್ ಈ ಅಸಾಧಾರಣ ಸಾಧನೆಗೆ ನೆದರ್ಲ್ಯಾಂಡಿನ ಸಲಹಾ ಇಂಜಿನಿಯರ್‌ರ ಒಕ್ಕೂಟದ ಅತ್ಯುಚ್ಚ ಪ್ರಶಸ್ತಿ ಲಭಿಸಿದೆ.

---

ಒತ್ತು ಅನುಕೂಲತೆಗೆ ಎಡೆ ಮಾಡಿಕೊಟ್ಟಿತು. ಮಣ್ಣಿನಿಂದ ನಿರ್ಮಾಣದ ಒಡ್ಡಿನ ಮೇಲೆ ಇಟ್ಟಿಗೆ ಕಾಂಕ್ರೀಟಗಳ ಲೇಪ ಬಳಿಯಲಾಯಿತು. ಅಸ್ಫಾಲ್ಟ ಹಾಕಿ ಮಾಡಿದ ದಾರಿ ಢಾಕ್ಕಾ - ಚಿತಗಾಂಗ ಹೆದ್ದಾರಿಯನ್ನು ಸೇರಲು ಅನುವು ಮಾಡಿ ಕೊಟ್ಟಿತು. ಒಡ್ಡಿಗೆ ಬಡಿದು ಸರಿದು ನಿರ್ಮಾಣಗೊಂಡ ಜಲಾಶಯ ಸುಮಾರು ಇಪ್ಪತ್ತೇಳು ಸಾವಿರ ಹೆಕ್ಟೇರ್ ಭೂಮಿಗೆ ನೀರುಣಿಸುವ ಸಾಮರ್ಥ್ಯ ಹೊಂದಿತು. ಇದರಿಂದಾಗಿ ಈ ಭಾಗದ ರೈತರು ಈಗ ವರ್ಷಕ್ಕೆ ಎರಡು ಬೆಳೆ ತೆಗೆಯುತ್ತಿದ್ದಾರೆ.

ಗೋಣಿಚೀಲ ಹೊತ್ತು ಸಾಗಿಸಿದ ಜನರು ಅದಕ್ಕೆ ಕೂಲಿ ಪಡೆದಿರಬಹುದು. (ಪ್ರತಿ ಚೀಲಕ್ಕೆ

ಈ ಯಶಸ್ವೀ ಯೋಜನೆಯಿಂದ ಉತ್ತೇಜಿತ

ಗೊಂಡ ಡಚ್ ಸರಕಾರ ಈಗ ಬಂಗ್ಲಾದೇಶದ ಸಂದ್ವಿಪ್ ನಡುಗಡ್ಡೆಯಲ್ಲಿ ಇಪ್ಪತ್ತೈದು ಕಿಲೋ ಮೀಟರ್ ಉದ್ದದ ಅಣೆಕಟ್ಟನ್ನೂ ಇಡೀ ಪದ್ಧತಿ ಗನುಗುಣವಾಗಿ ಕಟ್ಟಲು ಅಧ್ಯಯನ ನಡೆಸಿದೆ. ನಮ್ಮ ಪಶ್ಚಿಮ ಬಂಗಾಲ ಸರಕಾರ ಕೂಡ ಸುಂದರ ಬನದ ಕೆಲ ಪ್ರದೇಶಗಳಲ್ಲಿ ಗಂಗಾ ನದಿಗೆ ಅಣೆಕಟ್ಟು ಕಟ್ಟಲು ಇದೇ ತಾಂತ್ರಿಕ ಕೌಶಲ್ಯ ಉಪಯೋಗಿಸಲು ಯೋಚಿಸಿತು.

ಸ್ಥಳೀಯ ಸಂಪನ್ಮೂಲ ಹಾಗೂ ಕೆಲಸಗಾರ ರನ್ನೂ ಬಳಸಿ ಪೂರ್ತಿಗೊಳಿಸಿದ ಈ ಯೋಜ ನೆಗೆ ಒಟ್ಟು ಎರಡು ಕೋಟಿ ಡಾಲರ್ ವೆಚ್ಚ ತಗುಲಿತು. ಪ್ರತಿಯೊಬ್ಬ ಕೆಲಸಗಾರರಿಗೆ ಅಂದು ನೂರು ಟಾಕಾ ಸಂಬಳ ಕೊಡಲಾಯಿತು. ಕೆಲಸ ಮುಂಚೆ ಮುಗಿಸಿದ ಗುಂಪಿನ ಪ್ರತಿ ಸದಸ್ಯರಿಗೆ ಹತ್ತು ಟಾಕಾ ಬೋನಸ್ ಘೋಷಿಸಲಾಗಿತ್ತು. ಹತ್ತು ಮೀಟರ್ ಎತ್ತರದ ಹದಿಮೂರು ನೂರು ಮೀಟರ್ ಉದ್ದದ ಈ ಅಣೆಕಟ್ಟು ಏಶಿಯದಲ್ಲೇ ವಿಶಿಷ್ಟವಾದುದು, ಅದ್ವಿತೀಯವಾದುದು.

ನೆರೆಯ ಬಂಗ್ಲಾದೇಶದ ಬಂಧುಗಳ ಈ ಸಾಹಸ ನಮ್ಮಲ್ಲೂ ಸ್ಫೂರ್ತಿ ಉಕ್ಕಿಸಲಿ. ಮಹಾತ್ಮಾ ಗಾಂಧೀಜಿ ಹೇಳಿದ್ದರು. "ಭಾರತ ದಲ್ಲಿ ಇತರೆಲ್ಲ ಸಂಪತ್ತಿಗಿಂತ ಹಿರಿದಾಗಿರುವ ಜನಸಂಪತ್ತಿ ಸದುಪಯೋಗವಾಗಬೇಕು." ಇದನ್ನು ಪಾಲಿಸಿ ಸಾಧಿಸಿ ತೋರಿಸುವುದು ವಂಗ ಬಂಧುಗಳಿಗೆ ಸಾಧ್ಯವಿದ್ದರೆ, ನಮಗೂ ಖಂಡಿತ ವಾಗಿಯೂ ಸಾಧ್ಯ. ಮನಸ್ಸು ಮಾಡಬೇಕು ಅಷ್ಟೆ. ಮನಸ್ಸಿದ್ದಲ್ಲಿ ಮಾರ್ಗವಿದ್ದೇ ಇದೆ.

ಹಣಕಾಸು ಹಾಗೂ 'ಇನ್ನಿತರ' ಅಡೆತಡೆ ಗಳಿಂದ ದಶಕಗಳ ಕಾಲ ಅಪೂರ್ಣವಾಗಿ ನಿಂತ ಹಲವು ಯೋಜನೆಗಳು ನಮ್ಮ ಆಲಸ್ಯವನ್ನೂ ಎತ್ತಿ ತೋರುತ್ತಿವೆ. ಮುಹರಾ ಯೋಜನೆ ಹಾಗೂ ಚಿಕ್ಕ ಪಡಸಲಗಿಯ ಮಹಾನ್ ಕಾರ್ಯ ಗಳ ಪ್ರೇರಣೆಯಿಂದಲಾದರೂ ಈ ಅಪೂರ್ಣ ಯೋಜನೆಗಳಿಗೆ ಜೀವ ಬರಲಿ. ಭಾರತೀಯರ ಮನಸ್ಸುಗಳಿಗೆ ಕಾಯಕಲ್ಪವಾಗಲಿ.

●



"ಜೀವನದಲ್ಲಿ ಬೇರೆಯವರಿಗೆ ದಾರಿದೀಪವಾಗಿರಬೇಕು ಅಂತ ಬುದ್ಧಿ ಹೇಳಿದ್ದೆ...."

# ಪಿಕಾಸೋವಿನ ಪ್ರಣಯ ಜೀವನ

ಕೆ.ಶಾಂತಾಮಣಿ

ವಿಶ್ವವಿಖ್ಯಾತ ಚಿತ್ರ ಕಲಾಕಾರ ಪಿಕಾಸೋ ಅವರ ಪ್ರೇಮಜೀವನ ಅವರ 91ನೇಯ ವರ್ಷ ದವರೆಗೂ ಮುಂದುವರಿದಿತ್ತೆಂದರೆ ನಂಬು ತ್ತೀರಾ? ನಂಬಿದರೆ ನಂಬಿ, ಬಿಟ್ಟರೆ ಬಿಡಿ. ಈ ಮಾತಂತೂ ಅಪ್ಪಟ ಸತ್ಯ. ಅನೇಕ ಸುಂದರಿ ಯರು ಇವರ ಪ್ರೇಯಸಿಯರಾಗಿದ್ದರೂ ಪ್ರಪಂಚದಲ್ಲಿ ಎಷ್ಟೋ ಜನರಿಗೆ ಪಿಕಾಸೋ ಅವರ ಅರ್ಧದಷ್ಟೂ ವಯಸ್ಸಾಗಿರಲಿಲ್ಲ. ಒಮ್ಮೆ ಇವರು ಪ್ರಖ್ಯಾತ ಕಲಾಕಾರ ಲುಯಿ ಅರಾಗೋನೊಂದಿಗೆ ಮಾತನಾಡುತ್ತಾ, "ಒಬ್ಬ ಆಕರ್ಷಕ, ಮೋಹಕ ಮಹಿಳೆಯೆಂದರೆ ನನ್ನ ಮಟ್ಟಿಗೆ ಅವಳು ಒಂದು ಕಪ್ಪೆಯಂತೆ ಮಾತ್ರ," ಎಂದು ಅನೇಕ ಪ್ರೇಯಸಿಯರನ್ನು ಎದುರು ಹಾಕಿಕೊಂಡಿದ್ದನಂತೆ. ಅವರ ಪ್ರೇಯಸಿ ಸಿನೇಟ ಫೆರಿಯರ್ ಹೀಗೆ ಹೇಳಿದ್ದುಟು: "ಪಿಕಾಸೋ ಎಷ್ಟು ಮುದುಕರಾಗಿದ್ದರೋ ಅಷ್ಟೇ ಕಾಮುಕ ರೂ ಆಗಿದ್ದರು. ಅಂಥ ಪ್ರತಿಭಾವಂತ ವ್ಯಕ್ತಿ ಯೊಡನೆ ಯಾವುದಾದರೂ ವಿಷಯವನ್ನು ಕುರಿತು ಚರ್ಚಿಸುವುದು ನನ್ನ ಪಾಲಿಗೆ ಅಸಾಧ್ಯ ವಾಗಿತ್ತು. ಮೊದಲು ಅವರು ನನ್ನ ಚಿತ್ರ ತಯಾರಿಸಿದರು. ಅನಂತರ ಪ್ರೇಮ ಪ್ರಸ್ತಾಪ ಮುಂದಿಟ್ಟರು," ಹೀಗೆ ಅನೇಕ ಪ್ರೇಯಸಿಯರ ಅನುಭವ ಅನೇಕ ವಿಧವಾಗಿತ್ತು.

ವಿಶ್ವವಿಖ್ಯಾತ ಅಭಿನೇತ್ರಿ ಗರಟ್ರ್ಯೂಡ್ ಸ್ಟೀನ್ ಮತ್ತು ಅತ್ಯಂತ ಸುಂದರಿ ಫರ್ನಾಂಡೇ ಓಲಿ ವಿಯರ್‌ನಿಂದ ಪ್ರಾರಂಭವಾದ ಪಿಕಾಸೋವಿನ ಪ್ರಣಯ ಜೀವನ ತಮ್ಮ 79ನೇ ವಯಸ್ಸಿನ ಮದುವೆಯಾದ ಜಾಕ್ವಿಲಿನ್ ರಾಕ್‌ವರೆ ಮುಂದುವರಿಯಿತು. ಅವರು ಯಾರನ್ನು ಪ್ರೀ ಸಿದರೂ ಪ್ರಾಮಾಣಿಕರಾಗಿರುತ್ತಿದ್ದರೆಂದು ಹ ಲಾಗುವುದಿಲ್ಲ. ಎಷ್ಟು ಬೇಗ ಪ್ರೀತಿಸ ದ್ದರೋ ಅಷ್ಟೇ ಬೇಗ ಅವರನ್ನು ಮರೆಯು ದ್ದರು. 'ಮಜ ಮಾಡಿದೆ, ಬಿಟ್ಟೆ' ಎಂಬು ಅವರ ಪ್ರೇಮಜೀವನದ ಸಿದ್ಧಾಂತವಾಗಿ ಹತ್ತು ವರ್ಷ ಅವರೊಡನೆ ವಾಸಿಸಿದ ಪಿಕಾಸ ಅವರ ಮೂರನೆ ಪತ್ನಿ ಫೇಂಕೋ 'ಲೈಫ್ ವಿ ಪಿಕಾಸೋ ಎಂಬ ತನ್ನ ಪುಸ್ತಕದಲ್ಲಿ "ಅ ಏಕಾಕಿತನ ಮತ್ತು ಅಶಾಂತ ಆತ್ಮ-ಆತ್ಮಾಭಿ ಗಾಗಿ ಮಾಧ್ಯಮವನ್ನು ಹುಡುಕುತ್ತಲೇ ಇತ ಸುಂದರಿಯರನ್ನು ಪ್ರೇಮಿಸುವುದೂ ಕ ಆತ್ಮಾಭಿವ್ಯಕ್ತಿಯ ಒಂದು ಪ್ರಭಾವಶಾ ಮಾಧ್ಯಮವೇ ಆಗಿತ್ತು. ಎಂದು ಹೇಳಬಹು ಗಿದೆ," ಎಂದಿದ್ದಾಳೆ. 1906ರಲ್ಲಿ ಪಿಕಾಸ ಸ್ಟೀನ್‌ಳ ಚಿತ್ರವನ್ನು ಅವಳು ಇದಕ್ಕಾಗಿ 90 ಸ ಕುಳಿತ ನಂತರವೇ ಪೂರ್ತಿಗೊಳಿಸಿದನೆಂ ಹೇಳಲಾಗುತ್ತಿದೆ. ಪಿಕಾಸೋ ಅವರ ಅನೇ ಕಲಾವಿದ ಮಿತ್ರರು 'ಸ್ಟೀನಳ ಚಿತ್ರ, ಅವಳಿಗಿ ತುಂಬ ಭಿನ್ನವಾಗಿದೆ," ಎಂದಾಗ ಪಿಕಾಸೋ "ಚಿಂತಿಸಬೇಡಿ, ಮುಂದೆ ಅವಳು ಹೀಗೆಯೆ ಆಗುತ್ತಾಳೆ," ಎಂದನಂತೆ. 'ಆದರೆ ಸ್ಟೀನ್ ಮಾತ್ರ ತುಂಬ ಸಂತೋಷದಿಂದ ಆ ಚಿತ್ರವನ ತನ್ನ ಮಿತ್ರರಿಗೆ ತೋರಿಸುತ್ತಿದ್ದಳು.

1920ರಿಂದ 1930ರ ಸಾಲಿಗೆ ಉಚ್ಛ್ರಾಯದ
ು. ಆಗ ಅನೇಕ ಓಲ್ಗಾ ಖೋಖಲೋವ
ರಿ ವಾಲ್ಟರ್, ಸಿಲ್ವೆಟ್, ಮದಾಂ ದ ಲೆಜ
ು ಮತ್ತು ಡೋರಾಮಾರ್‌ರಂತಹ ಉಚ್ಚವ
ದ ಸುಂದರಿಯರು ಅವರ ಪ್ರೇಯಸಿಯರಾ
ು. ಇವರಲ್ಲಿ ಫೋಲ್ಗಾ ಖೋಖಲಾವಳನ್ನು
ಥಮ ಪತ್ನಿ ಎನ್ನಬಹುದು, ಇವಳಿಗೆ
ಬ್ಲೋ ಎಂಬ ಪುತ್ರ ಹುಟ್ಟಿದ. ಅವಿವಾಹಿತ
ಯಾದ ಮೇರೀ ವಾಲ್ಟರ್‌ನಿಂದ ಮಾಯಾ
ಬ ಪುತ್ರಿ ಜನಿಸಿದಳು.

1927ರಲ್ಲಿ ಅವರು ಮೇರಿಯೆಂಬ ಸುಂದರಿ
ನ್ನು ಮದುವೆಯಾದರೂ ಮರುವರ್ಷವೇ
ಳಿಂದ ವಿಚ್ಛೇದನ ಪಡೆದುಕೊಂಡರು.
7ರಲ್ಲಿ ಪಿಕಾಸೋ ತನ್ನ ಪ್ರಸಿದ್ಧ ಐತಿಹಾಸಕ
ುರನಿಕಾ ಭಿತ್ತಿಚಿತ್ರವನ್ನು ಪೂರ್ತಿಗೊಳಿಸಿ
ು. ಇದರಲ್ಲಿ ಅವರು ತಮ್ಮ ಪ್ರೇಯಸಿರಾದ
ೀರಾಮಾರ್ ಮತ್ತು ಮೇರಿಯ ಪ್ರತಿಕೃತಿ
ನ್ನು ವಿಶೇಷರೀತಿಯಲ್ಲಿ ಚಿತ್ರಿಸಿದರೆಂದು
ೀಷತಜ್ಞರು ಹೇಳುತ್ತಾರೆ. ಅವರಿಬ್ಬರ
ುದ್ಧ ಸ್ವಭಾವದ ಬೆಳಕು-ಕತ್ತಲೆಯ ಚಿತ್ರ
ನ ಮೂಲಕ ತೋರಿಸಿದ್ದಾರೆ. ಅವರಿಬ್ಬರ
ಾವದಲ್ಲಿ ಬಹಳ ಅಂತರವಿತ್ತು. ಮೇರಿ
ರ್ಷಚಿತ್ತಳಾದರೆ ಡೋರಾ ಖಿನ್ನ ಸ್ವಭಾವ
ಳು.

63ನೆಯ ವಯಸ್ಸು ನಡೆಯುತ್ತಿದ್ದಾಗ
ಾಸೋ 23 ವರ್ಷದ ಫ್ರಿಂಕೋ ಜಿಲೋಳಲ್ಲಿ
ುರಕ್ತರಾದರು. ಹತ್ತು ವರ್ಷದವರೆಗೂ
ಳು ಅವನ ಪ್ರೇಯಸಿಯಾಗಿದ್ದಳು. ಅವ
ದ ಪಿಕಾಸೋ ಅವರಿಗೆ ಕ್ಲಾಡನೆಂಬ
ತ್ರನೂ ಪೆಲ್ಮಾ ಎಂಬ ಪುತ್ರಿಯೂ ಜನಿಸಿ
ರು. 'ಪಿಕಾಸೋವಿನೊಂದಿಗೆ ಜೀವನ' ಎಂಬ
ಸ್ತಕದಲ್ಲಿ ಫ್ರಾಂಕೋ ಪಿಕಾಸೋವಿನ ಪ್ರೀತಿ
ವ ಮತ್ತು ಚಿತ್ರಿಸುವ ವಿಚಿತ್ರ ಶೈಲಿಯ ಬಗ್ಗೆ
ರೆದಿದ್ದಾಳೆ.

ಒಮ್ಮೆ ತಮ್ಮ 20ನೆಯ ವಯಸ್ಸಿನಲ್ಲಿ
ಲ್ಬರ್ಟ ಐನ್‌ಸ್ಟೈನ್‌ನ ಪ್ರೇಯಸಿಯಾಗಿದ್ದ
ಹಾಲೆಂಡ್ ಸುಂದರಿ ಸಿನೇಟ ಫೆರಿಯರ್ 'ಪಿಕಾಸೋವಿನ ಪ್ರೀತಿ ಎಂದೆಂದೂ ಆರದಂತಹದು,' ಎಂದು ಹೇಳುತ್ತಾ ತನ್ನ ಅನುಭವವನ್ನು ಬರೆಯುತ್ತಾಳೆ: "ಫ್ರಾನ್ಸಿನ ದಕ್ಷಿಣ ಭಾಗ ಒಂದು ಸುಂದರ ಹಳ್ಳಿಗೆ ಅನೇಕ ಜನ ಶ್ರೀಮಂತರು ರಜಾ ದಿನಗಳನ್ನು ಕಳೆಯಲು ಬರುತ್ತಾರೆ, ಒಮ್ಮೆ ನಾನು ಅಲ್ಲಿಗೆ ಹೋದಾಗ ನನ್ನ ಕೆಲವು ಮಿತ್ರರು ಅಲ್ಲಿ ರಜೆ ಕಳೆಯಲು ಬಂದಿದ್ದ ಪಿಕಾಸೋವಿನೊಡನೆ ನನ್ನನ್ನು ಪರಿಚಯಿಸಿದರು. ಆಗ ನನ್ನನ್ನು ನೋಡಿದ ಕೂಡಲೇ ಅವರು ಪ್ರೇಮ ಪ್ರಸ್ತಾಪವನ್ನು ನನ್ನ ಮುಂದಿಟ್ಟುಬಿಟ್ಟರು. ಆಗಲೇ ನಾನು ಅವರು ಎಷ್ಟು ಮುದುಕರೋ ಅಷ್ಟು ಕಾಮುಕರು ಎಂಬುದನ್ನು ತಿಳಿದುಕೊಂಡೆ. ನಾವು ಸಂಧಿಸಿದಾಗಲೆಲ್ಲ ಮೊದಲು ಅವರು ನನ್ನ ಚಿತ್ರ ತಯಾರಿಸಿ ಅನಂತ ಪ್ರೀತಿಸುತ್ತಿದ್ದರು. ಬಹಳ ಹೊತ್ತಿನವರೆಗೂ ಪ್ರೀತಿಸದಿದ್ದರೆ ತಮ್ಮ ಸೃಜನಶಕ್ತಿ ಮುಗಿದು ಹೋಗುವುದೆಂದು ಅವರು ಹೇಳುತ್ತಿದ್ದರು. ಆದ್ದರಿಂದ ಅಂಥ ಪ್ರತಿಭಾವಂತರ ಸೃಜನಶಕ್ತಿ ನನ್ನಿಂದ ಹಾಳಾಗಿ ಆ ಪಾಪವನ್ನು ನನ್ನ ಮೇಲೆ ಹೊತ್ತುಕೊಳ್ಳಬಾರದೆಂದು ಅವರು ಹೇಳಿದ ಕೂಡಲೇ ನಾನು ಒಪ್ಪಿಕೊಂಡು ಬಿಡುತ್ತಿದ್ದೆ."

ಪಿಕಾಸೋ ಆ ಶತಮಾನದ ಅತ್ಯಂತ ಪ್ರತಿಭಾಶಾಲಿ ಕಲಾವಿದರಾಗಿದ್ದರೆನ್ನುವುದರಲ್ಲಿ ಸಂಶಯವಿಲ್ಲ. ಅವರ ಪ್ರೇಮಜೀವನ ಅವರ ಕಲೆಯ ವಿಕಾಸಕ್ಕೆ ಪುಟ ಕೊಟ್ಟಿತು. ಪ್ಯಾರಿಸಿನಲ್ಲಿ ಕಲಾಜೀವನವನ್ನು ಪ್ರಾರಂಭಿಸಿದ ತರುಣದಲ್ಲಿ ಅವರು ಬಹಳ ಖಿನ್ನರಾಗಿ ಕಾಣಸುತ್ತಿದ್ದರು. ಆದರೆ ಅವರ ಜೀವನದಲ್ಲಿ ಸುಂದರಿಯರು ಪ್ರವೇಶಿಸಿದಂತೆಲ್ಲ ಅವರ ಉತ್ಸಾಹ ವೃದ್ಧಿಸಿ ತತ್ಪರಿಣಾಮವಾಗಿ ಕಲಾ ಕೃತಿಗಳಲ್ಲಿ ಜೀವ ತುಂಬತೊಡಗಿತು.

ಇವರಿಲ್ಲದಿದ್ದರೆ ಪಿಕಾಸೋ ಮಾತ್ರ ಚಿತ್ರಕಲೆಯಲ್ಲಿ ಪ್ರೌಢಿಮೆಯನ್ನು ಮೆರೆಯುತ್ತಿದ್ದರೋ ಎನ್ನುವುದು ಸಂಶಯ. **(ಸಂಗ್ರಹ)**



# ಚೈನ್ ಲೆಟರ್

ಶಾಂತಾರಾಮ ಸೋಮಯಾಜಿ

ಮನೆಯ ಬಾಗಿಲ ಚಿಲುಕದ ಮೇಲೆ ಇಟ್ಟು ಹೋಗಿದ್ದ, ಪೋಸ್ಟ್‌ಮನ್. ಇದ್ದುದು ಒಂದೇ ಕವರ್. ಅಪರಿಚಿತ ಕೈಬರಹದಲ್ಲಿತ್ತು ನನ್ನ ವಿಳಾಸ. ಬರೆದವರ ವಿಳಾಸ ಇರಲಿಲ್ಲ.

ಲಕೋಟೆ ಒಡೆದೆ. ಮಡಚಿಟ್ಟ ಕಾಗದ ಬಿಡಿಸಿದೆ. ಅವಸರ ಅವಸರವಾಗಿ ಬರೆದಂತಿತ್ತು-

“ಗುರಿಕಾಡಿನ ಆಂಜನೇಯ ಸ್ವಾಮಿ ದೇವಸ್ಥಾನವು ಚಾಲುಕ್ಯರ ಕಾಲದಿಂದಲೂ ಪ್ರಸಿದ್ಧಿಯಲ್ಲಿದೆ. ಆಂಜನೇಯನ ಪರಮ ಭಕ್ತನಾದ ಚಾಲುಕ್ಯವಂಶದ ಅರಸನೊಬ್ಬನಿಗೆ ಆಂಜನೇಯನು ಸ್ವತಃ ಪ್ರತ್ಯಕ್ಷಗೊಂಡು ವೈರಿ ಸೈನ್ಯದ ಚಲನವಲನವನ್ನು ನೇರವಾಗಿ ತಿಳಿಸಿದ್ದಲ್ಲದೆ, ಆ ಯುದ್ಧದಲ್ಲಿ ರಾಜನು ವಿಜಯಿಯಾಗುವಂತೆ ನೋಡಿಕೊಂಡನು. ಈ ಸಾವಿರದಿನ್ನೂರು ವರುಷಗಳೂ ಆಂಜನೇಯ ದೇವರು ತನ್ನ ಭಕ್ತವೃಂದಕ್ಕೆ ಸಾವಿರಾರು ಪವಾಡಗಳನ್ನು ಪ್ರದರ್ಶಿಸಿ ಅಪಾರ ಪ್ರೀತಿಗೆ ಕಾರಣವಾಗಿದ್ದಾರೆ. ಈ ದೇವರ ಪೂಜೆ ನಡೆಸದವರು ಮತ್ತು ಈ ದೇವರನ್ನು ಕೀಳಾಗಿ ಕಂಡವರು ಅಪಾರ ಹಾನಿ, ದುರ್ದಶೆ ಮತ್ತು ತೊಂದರೆಗೊಳಗಾಗಿ ತಮ್ಮ ಕುಟುಂಬವನ್ನೂ ಹಣವನ್ನೂ ಕಳಕೊಂಡಿದ್ದಾರೆ. ಮರಿ ಮನೆ ಹಳ್ಳಿಯ ಜಮೀನ್ದಾರನೊಬ್ಬನು ಈ ದೇವರ ಪವಾಡವನ್ನು ಪ್ರಶ್ನಿಸಿದ್ದುದರಿಂದಾಗಿ ಭಯಂಕರ ಬರಗಾಲಕ್ಕೊಳಗಾಗಿ ಬೆಳೆಗಳೆಲ್ಲಾ ಸರ್ವನಾಶವಾದುದಲ್ಲದೆ, ಆತನ ಮುದ್ದಿನ ಮಗನೊಬ್ಬನು ಸಿಡಿಲು ತಾಗಿ ಸತ್ತುಹೋದನು. ಪ್ರತಿ ದಿನ ಬೆಳಿಗ್ಗೆ ಗುರಿಕಾಡಿನ ಆಂಜನೇಯ ಸ್ವಾಮಿ ನಮೋನಮಃ, ಎಂದು ಮೂವತ್ತೆರಡು ಸರ್ತಿ ಉಚ್ಚರಿಸುವುದರಿಂದ ಆಂಜನೇಯ ದೇವರು ಸಂತೃಪ್ತಿ ಪಡೆದು ನಿಮ್ಮ ಸಕಲ ದೋಷಗಳೂ ನಿವಾರಣೆಯಾಗಿ ಹಣವಂತರಾಗುತ್ತೀರಿ.

ಈ ಕಾಗದವನ್ನು ಓದಿದೊಡನೆಯೇ ಕಾಲವಿಳಂಬ ಮಾಡದೆ ಮೇಲೆ ಹೇಳಿದುದನ್ನು ಕಾಪಿ ಮಾಡಿ, ‘ಓಂ ಆಂಜನೇಯ ಸ್ವಾಮಿ ನಮೋ ನಮಃ’ ಎಂದು ಮೂರು ಸಲ ಬರೆದು ಮೂರು ಜನರಿಗೆ ಕಳುಹಿಸತಕ್ಕದ್ದು. ಇದನ್ನು ನಿರ್ಲಕ್ಷ್ಯ ಮಾಡಿದಲ್ಲಿ ಅಥವಾ ಅಸಡ್ಡೆಯಿಂದ ಮುಂದೂಡಿದಲ್ಲಿ ದುರ್ವಿಘ್ನಗಳು ನಿಮ್ಮನ್ನು ಶನಿಯಂತೆ ಹಿಂಬಾಲಿಸುವುವು. ಕೈಗೆ ಸಿಕ್ಕಿದ ಕಾಗದ

ವನ್ನು ಓದಿದ ನಂತರ ಹರಿದು ಬಿಸಾಕಿದ ಬಾಗಲಕೋಟೆಯ ಚಿನ್ನದ ವ್ಯಾಪಾರಿಯೊಬ್ಬ ಸ್ಥಳದಲ್ಲೇ ರಕ್ತಕಾರಿಕೊಂಡು ಸತ್ತುಹೋದನು. ಮದರಾಸಿನ ವಿದೇಶೀ ಕಂಪೆನಿಯ ಇಂಜಿನಿಯರನೊಬ್ಬನು ಕಾಗದವನ್ನು ಕಾಪಿ ಮಾಡುವುದನ್ನು ಮುಂದಕ್ಕೆ ಹಾಕಿದುದರಿಂದ ಆಕ್ಸಿಡೆಂಟ್‌ನಲ್ಲಿ ತನ್ನ ಎಡಗಾಲನ್ನು ಕಳೆದುಕೊಂಡನು. ಇಂತಹ ನೂರಾರು ಘಟನೆಗಳಿಂದಾಗಿ, ನೀವೀಗಲೇ ಇದನ್ನು ಮೂರು ಜನಕ್ಕೆ ಕಳುಹಿಸತಕ್ಕದ್ದು.''

ಕಾಗದದ ಕೆಳಗೆ ಮೂರು ಸರ್ತಿ 'ಆಂಜನೇಯ ಸ್ವಾಮಿ ನಮೋನಮಃ' ಎಂದು ಬರೆದಿತ್ತು.

ಆ ಕೂಡಲೇ ನಾನು ಪೇಟೆಗೆ ಹೋದೆ ಕಾಗದದ ಮೂರು ಜೆರಾಕ್ಸ್ ಕಾಪಿ ಮಾಡಿಸಿಕೊಂಡು ಬಂದೆ

ಒಂದು ಕಾಪಿಯನ್ನು ಹೈದರಾಬಾದಿನ ನನ್ನ ಭಾವನಿಗೆ ಕಳುಹಿಸಿದೆ. ಇನ್ನೊಂದನ್ನು ಹುಬ್ಬಳ್ಳಿಯಲ್ಲಿ ಹೋಟೇಲು ನಡೆಸುತ್ತಿರುವ ದೂರದ ಸಂಬಂಧಿಕನಿಗೆ. ಮೂರನೆಯದು? ಬಹು ಹೊತ್ತು ಯೋಚನೆ ಮಾಡಿದೆ. ಕೊನೆಗೆ ನಮ್ಮ ಬ್ಯಾಂಕಿನ ಹಿರಿಯ ಅಧಿಕಾರಿ ರಾಮನಾಥ ಅಯ್ಯರ್‌ಗೆ ಕಳುಹಿಸಿದೆ. ಆ ದಿನವೇ ಎಲ್ಲವನ್ನೂ ಪೋಸ್ಟ್ ಮಾಡಿ ಬಂದೆ.

ಎರಡು ದಿನ ಕಳೆದ ನಂತರ ಬ್ಯಾಂಕಿನ ಪೇದೆ ಟಪಾಲು ತಂದು ನನ್ನ ಮೇಜಿನ ಮೇಲಿಟ್ಟ. ನಾನು ಕಳುಹಿಸಿದ ಲಕೋಟೆಯೂ ಇತ್ತು. ನನ್ನ ಇನಿಶಿಯಲ್ಸ್ ಹಾಕಿ ಎಲ್ಲಾ ಟಪಾಲನ್ನು ಅಯ್ಯರ್‌ರ ಆಫೀಸಿಗೆ ಕಳುಹಿಸಿದೆ, ಪೇದೆಯೊಂದಿಗೆ.

ಆತ ಹೊರ ಬಂದಾಗ ಕೇಳಿದೆ, ''ಏನು ಮಾಡ್ತಿದಾರೆ?''

''ಥರ್ಮಾಸ್‌ನಿಂದ ಟೀ ಹಾಕ್ಕೊಂಡು ಕುಡಿಯುತ್ತಿದ್ದಾರೆ'' ಎಂದ.

ಹತ್ತು ನಿಮಿಷ ತಡೆದು ಒಳಹೋದೆ. ಟೀ ಕುಡಿದಾಗಿತ್ತು. ಟಪಾಲನ್ನು ಒಂದೊಂದಾಗಿ ನೋಡತೊಡಗಿದ್ದರು. ನನ್ನನ್ನು ಕೂಡಲು ಹೇಳಿದರು.

ಕೈಯಲ್ಲಿದ್ದ ಫೈಲನ್ನು ತೊಡೆಯ ಮೇಲಿಟ್ಟು ಕುಳಿತುಕೊಂಡೆ. ಕಡೆಗಣ್ಣಿನಿಂದ ನೋಡಿದೆ. ನನ್ನ ಕವರನ್ನು ಈಗ ಎತ್ತಿಕೊಂಡರು. ಅದರ ವಿಳಾಸವನ್ನು ಅಳೆಯುವಂತೆ ನೋಡಿದರು. ಅಚ್ಚರಿ ಸ್ಪಷ್ಟವಾಗಿ ಮೂಡಿತ್ತು. ಕವರ್ ಒಡೆದರು. ಕಾಗದ ಬಿಡಿಸಿ ಕಣ್ಣೋಡಿಸಿದರು. ಒಂದೇ ನಿಮಿಷ.

ಮರು ನಿಮಿಷದಲ್ಲಿ ಕಾಗದ ಎರಡು ಚೂರಾಗಿ ಕಸದ ಬುಟ್ಟಿಯಲ್ಲಿ ಬಿದ್ದಿತ್ತು.

ನಾನು ಬಂದ ನೆಪಕ್ಕೆ ಏನೋ ವಿಚಾರಿಸಿದಂತೆ ಮಾಡಿ ಹೊರ ಬಂದೆ. ನನ್ನ ಕೈ ನಿಧಾನವಾಗಿ ನಡುಗತೊಡಗಿತ್ತು.

ಆ ರಾತ್ರಿ ನಿದ್ರೆ ಬರಲಿಲ್ಲ. ಹೀಗೂ ಉಂಟಾ? ದೇವರ ಬಗ್ಗೆ ಭಕ್ತಿ ಕೋರಿ ಬಂದ ಕಾಗದವನ್ನು ಹರಿದು ಹಾಕುವುದೆಂದರೆ! ಈ ಅಯ್ಯರ್‌ಗೆ ಖಂಡಿತಾ ಏನೋ ಭೀಕರ ಆಪತ್ತು ಕಾದಿರುವುದು ನಿಜ.

ಮರುದಿನ ಬಂತು. ಆದರೆ ವಿಶೇಷವಾದದ್ದೇನೂ ನಡೆಯಲಿಲ್ಲ, ಅಯ್ಯರ್‌ರ ನಡವಳಿಕೆಯಲ್ಲಿ. ಹಾಗಾದರೆ, ಮುಂದಿನ ದಿನದಲ್ಲೇನಾದ್ರೂ?

ಮುಂದಿನ ದಿನ ಆಫೀಸಿಗೆ ಹೋದ ನಂತರ ಸುದ್ದಿ ತಿಳಿಯಿತು. ಅಯ್ಯರ್ ಒಂದು ದಿನ ರಜೆ ಹಾಕಿದ್ದಾರೆ ಎಂದು. ಹಾಗಾದ್ರೆ, ಸರಿ, ಏನೋ ಆಗಿರಬೇಕು. ಸ್ಕೂಟರ್ ಆಕ್ಸಿಡೆಂಟೋ ಮೆಟ್ಟಿಲಿಂದ ಜಾರಿ ಬಿದ್ದದ್ದೋ ಹೆಂಡತಿಗೆ ಹೃದಯಾಘಾತ...... ಆಫೀಸಿನ ಗೆಳೆಯರಲ್ಲಿ ವಿಚಾರಿಸಿದೆ. ಆದರೆ ಅವರಿಗ್ಯಾರಿಗೂ, ಅಯ್ಯರ್ ರಜೆ ಹಾಕಿದ ಕಾರಣ ತಿಳಿದಿರಲಿಲ್ಲ. ಮರುದಿನಕ್ಕೆ ಕಾಯುತ್ತಾ ನಿದ್ದೆ ಹೋದೆ.

ಮರುದಿನ ಬಂತು. ಏನೋ ಭೀಕರವಾದುದನ್ನು ಎಣಿಸಿಕೊಂಡೇ ಆಫೀಸಿಗೆ ಹೋದಾಗ ಅಯ್ಯರ್ ಬಂದಾಗಿತ್ತು. ಕಾತರ ಪಡುತ್ತಾ ಅವರ ಆಫೀಸಿನೊಳಕ್ಕೆ ಕಾಲಿಟ್ಟೆ. ''ಏನ್ಸಾರ್, ಎಲ್ಲಾ ಆರೋಗ್ಯ ತಾನೇ?'' ಎಂದು ವಿಚಾರಿ

ಸಿದೆ. "ಓ, ಯಸ್" ಎಂದರು. "ಮತ್ತೆ, ರಜೆ?" ಎಂದು ಕೇಳಿದೆ. "ಮಗಳಿಗೆ ಇಂಜಿನಿಯರಿಂಗ್ ಕಾಲೇಜು ಆಡ್ಮಿಶನ್‌ಗೆ ಇಂಟರ್ವ್ಯೂ ಇತ್ತು. ಅವಳೊಂದಿಗೆ ಹೋಗಬೇಕಿತ್ತಲ್ಲ. ಅದಕ್ಕೇ ರಜೆ ಹಾಕಿದೆ."

ಒಂದು ವೇಳೆ, ಶನಿಕಾಟ ಇವರ ಆ ಮಗಳಿಗೆ ಅಂಟಿಬಿದ್ರೆ?

ಸಂಜೆ ಮನೆಗೆ ಬಂದವನೇ, ಬಂದ ಕಾಗದದ ಇನ್ನೊಂದು ಕಾಪಿ ಮಾಡಿದೆ. ಕವರಿನೊಳಗಿಟ್ಟು ಅಯ್ಯರ್‌ರ ವಿಳಾಸ ಬರೆದು ಪೋಸ್ಟ್ ಮಾಡಿದೆ.

ಎರಡು ದಿನದ ನಂತರ ಪೇದೆ ತಂದ ಟಪಾಲಿನಲ್ಲಿತ್ತು ಆ ಲಕೋಟೆ. ಇನಿಶಿಯಲ್ಸ್ ಹಾಕಿ ಎಲ್ಲವನ್ನು ಒಳ ಕಳುಹಿಸಿದೆ.

ಹತ್ತು ನಿಮಿಷ ತಡೆದು ಸಾಲ ಕೇಳಿ ಬಂದವರ ಫೈಲೊಂದನ್ನು ನೆಪಕ್ಕೆ ಹಿಡಿದುಕೊಂಡು ಒಳ ಹೋದೆ. ಏನೋ ಬರೆಯುತ್ತಿದ್ದವರು ತಲೆಯೆತ್ತಿ ಕುಳಿತುಕೊಳ್ಳ ಹೇಳಿದರು.

ಪೇದೆ ತಂದ ಟಪಾಲುಗಳೆಲ್ಲಾ ನಾಜೂಕಾಗಿ ಮೇಜಿನ ಮೇಲೆ ಹರಡಿಕೊಂಡಿವೆ. ಆದರೆ ಅವುಗಳೆಡೆಯಲ್ಲಿ ನಾನು ಕಳುಹಿಸಿದ ಕವರಿರಲಿಲ್ಲ.

ಎದೆ ನಡುಗತೊಡಗಿತು, ಚೇತರಿಸಿಕೊಳ್ಳುತ್ತಾ ಮೇಜಿನ ಮೇಲೆ ಸ್ವಲ್ಪ ಬಾಗಿ ಓರೆಗಣ್ಣಿನಿಂದ ಪುನಃ ಎಲ್ಲಾ ನೋಡಿದೆ. ಸರಿ; ಆ ಕವರ್ ಇಲ್ಲ. ಹಾಗಾದ್ರೆ, ಏನಾಯ್ತು ಕವರ್? ಪೇದೆ ಒಳಕೊಂಡು ಹೋದದ್ದನ್ನು ನಾನೇ ಕಣ್ಣಾರೆ ನೋಡಿದ್ದೆ.

ಅಲ್ಲಿಂದ ಹೊರಬಂದು ಅವರು ಹೊರ ಹೋಗುವುದನ್ನೇ ಕಾಯುತ್ತ ಕುಳಿತೆ. ಎರಡು ಗಂಟೆ ನಂತರ ಅವರಿಗೊಂದು ಕಾಲ್ ಬಂತು. ಎರಡು ನಿಮಿಷ ಮಾತನಾಡಿ ಹೊರಬಂದು ನನ್ನ ಮೇಜಿನೆದುರು ನಿಂತು ಹೇಳಿದರು- "ರಾಮ್ಸ್ವಾಮಿ, ಕಂಟೋನ್ಮೆಂಟಿನಲ್ಲಿ ಒಂದು ಮೀಟಿಂಗಿದೆ. ಬರುವಾಗ ಮಧ್ಯಾಹ್ನ ಆದೀತು."

"ಸರಿ," ಎಂದೆ.

ಅವರು ಕಾರಿಡಾರ್‌ಗೆ ಕಾಲಿಟ್ಟಿದ್ದೇ ತಡ ರೂಮಿನೊಳಗೋಡಿದೆ. ಟೇಬಲೆಲ್ಲಾ ಹು ಕಿದೆ. ಎಲ್ಲೂ ಇಲ್ಲ. ಡ್ರಾಯರ್ ಎಳೆದೆ, ಅಲ್ಲ ಇಲ್ಲ, ಬಗ್ಗಿ ನೋಡಿದೆ. ಕಂಡಿತು ಕಸದ ಬು ಯಲ್ಲಿ ಓಪನ್ ಮಾಡದೇನೇ ಕಸದ ಬುಟ್ಟಿಗೆ ದ್ದರು. ಅಹಂಕಾರವೆಂದರೆ! ಅದೂ ದೇವ ದುರು?

ಈಗೇನು ಮಾಡುವುದು? ಗೊತ್ತಿದ್ದು ಗೊತ್ತಿದ್ದೂ ಆಪತ್ತನ್ನು ಬೇಡುತ್ತಿದ್ದಾರಲ್ಲ.

ಎರಡು ದಿನ ನೋಡಿದೆ. ಏನಾದರು ಕೆಟ್ಟದ್ದು ಸಂಭವಿಸೀತು. ಆದರೆ ವಿಶೇಷವಾ ದ್ದೇನೂ ನಡೆಯಲಿಲ್ಲ; ಆ ಸಂಜೆ ಹೊರ ಹೋದವರು ಕೊಡೆಯಿರದೆ ಮಳೆಯಲ್ಲಿ ನೆನೆದು ಬಂದುದರ ಹೊರತಾಗಿ ಒಂದು ವೇಳ ಅದೇ ನೆಪವಾಗಿ ಭಯಂಕರ ಜ್ವರ ಬಂದ ಅವರು ತೀರಿಕೊಂಡರೆ?

ಆ ಸಂಜೆ, ಕಾಗದದ ಮತ್ತೊಂದು ಕಾ ಮಾಡಿಸಿ ತಂದೆ. ಪುನಃ ಅಂಥದೇ ಕವರಲ್ಲಿಟ್ಟು ಅವರ ವಿಳಾಸ ಬರೆದು ಪೋಸ್ಟಿಗೆ ಹಾಕಿ ಬಂದೆ.

ಮರುದಿನ ಕಳವಳದಲ್ಲೇ ಕಳೆದ ಹೋಯಿತು, ನನ್ನ ಪಾಲಿಗೆ.

ಕಾಗದ ಪುನಃ ಬಂತು ನನ್ನ ಡೆಸ್ಕಿಗೆ. ಸರಿ ಹಾಕಿದೆ. ಪೇದೆಯೊಂದಿಗೆ ಕಳುಹಿಸುವುದ ಬದಲು ನಾನೇ ಎಲ್ಲಾ ಟಪಾಲನ್ನು ಒಳ ಕೊಂಡು ಹೋದೆ.

ಟೆಲಿಫೋನಿನಲ್ಲಿ ಮಾತನಾಡುತ್ತಿದ್ದರು ನಾನು ಕುರ್ಚಿಯಲ್ಲಿ ಕುಳಿತೆ. ಟಪಾಲನ್ನು ಮೇಜಿನ ಮೇಲಿಟ್ಟೆ. ಫೋನಿನಲ್ಲಿ ಮಾತು ಮುಗಿಸಿ ಟಪಾಲನ್ನು ಎತ್ತಿಕೊಂಡರು. ಕವರನ್ನು ಪರಿಶೀಲಿಸುತ್ತ ಒಂದೊಂದನ್ನೇ ಮೇಜಿನ ಮೇಲ ಹರಡಿದರು. ನನ್ನ ಹೃದಯದೊಳಗೆ ಕರಡಿ ಕುಣಿತ. ಕೊನೆಗೆ ಬಂತು, ನನ್ನ ಕವರ್.

ಒಂದು ಗಳಿಗೆ ಅದರ ಮೇಲೆ ಕಣ್ಣಾಡಿಸಿ ದರು. ಅನಂತರ ಬಲಗೈಯಿಂದ ಕವರನ್ನು ಎತ್ತಿ ನನ್ನ ಮುಂದೆ ಹಿಡಿದು ಹೇಳಿದರು. "ರಾಮ್ಸ್ವಾಮಿ, ಯಾರೋ ಮೂರ್ಖ ಈ ಚೈನ್ ಲೆಟರ್‌ನ್ನು ನಾಲ್ಕೈದು ದಿನಕ್ಕೊಮ್ಮೆ ಕಳಿಸ್ತಾ

ಡಿದ್ದಾನೆ. ಇನ್ನು ಮುಂದೆ ಈ ಹ್ಯಾಂಡ್‌ರೈಟಿಂಗಿನಲ್ಲಿ ಈ ಕವರ್‌ನಂತಹದು ಬಂದ್ರೆ, ನೀವೇ ಕಸದ ಬುಟ್ಟಿಗೆ ಹಾಕಿ ಬಿಡಿ. ನಂಗೆ ಕಳಿಸೋದು ಬೇಡ.''

ಹಾಗೆ ಹೇಳಿ ಮುಗಿಸುವ ಮೊದಲೇ ಅದನ್ನೆತ್ತಿ ಕಸದ ಬುಟ್ಟಿಗೆ ಹಾಕಿಬಿಟ್ಟರು. ನಾನು ಸಿಡಿಲೆರಗಿದವರಂತೆ ಕುಳಿತಿದ್ದೆ, ತಲೆಯಾಡಿಸುತ್ತ.

ಈ ಮನುಷ್ಯನ ಅಹಂಕಾರ ತೀರ ಜಾಸ್ತಿಯಾಯ್ತು. ದೇವರನ್ನು ಹೊಗಳುವ ಕಾಗದವನ್ನು ಇಷ್ಟು ಕೀಳಾಗಿ ಕಂಡವರಿಗೆ ಎಂತಹ



ಘೋರ ವಿಪತ್ತು ಕಾದಿರಲಿಕ್ಕಿಲ್ಲ!

ಆ ದಿನ ಮನೆಗೆ ಬಂದ ಕೂಡ್ಲೇ ಕಾಗದವನ್ನು ಎತ್ತಿಕೊಂಡೆ. ಎರಡನೆಯ ಪ್ಯಾರಾದ ಕೊನೆಯ ಎರಡು ವಾಕ್ಯಗಳಿಗೆ ಅಂಡರ್‌ಲೈನ್ ಮಾಡಿದೆ. ಅದನ್ನು ಹಿಡಿದುಕೊಂಡು ಪೇಟೆಗೆ ನಡೆದೆ. ಇನ್ನೊಂದು ಕಾಪಿ ಮಾಡಿದೆ. ಒಂದು ಏರ್ ಮೈಲ್ ಕವರ್ ತೆಗೆದುಕೊಂಡೆ. ಮನೆಗೆ ಬಂದು, ಮಡಚಿದ ಕಾಗದವನ್ನು ಕವರಿನೊಳಗಿಟ್ಟು, ನೆರೆ ಮನೆಯ ಎಂಟು ವರ್ಷದ ಹುಡುಗಿಯನ್ನು ಹೇಗೋ ಪುಸಲಾಯಿಸಿ ಮನೆಗೆ ಕರೆದುಕೊಂಡು ಬಂದೆ. ಬಣ್ಣದ ಪೆನ್ನು ಕೊಟ್ಟು ಕವರಿನಲ್ಲಿಟ್ಟು ಅಯ್ಯರ್‌ರ ವಿಳಾಸ ಬರೆಯಲು ಹೇಳಿದೆ.

ಅದನ್ನೆತ್ತಿಕೊಂಡು ಬಸ್‌ಸ್ಟಾಂಡಿಗೆ ಹೋದೆ. ರಾತ್ರಿಯ ಬಸ್ಸು ಹಿಡಿದು ಮೈಸೂರಿಗೆ ಹೋದೆ. ಒಂದು ಬುಕ್ ಸ್ಟೋರಿನೆದುರಿನ ಪೋಸ್ಟ್‌ಬಾಕ್ಸಿಗೆ ಕವರ್ ಹಾಕಿ ಬಸ್‌ಸ್ಟಾಂಡಿಗೆ ಬಂದೆ. ಬಸ್ಸು ಹಿಡಿದು ಬೆಂಗಳೂರಿಗೆ ವಾಪಸ್ಸಾದಾಗ ಸೂರ್ಯ ಮೂಡಿದ್ದ. ನಿದ್ದೆ ಬರುತ್ತಿತ್ತು. ಮನೆಗೆ ಬಂದು ಒಂದು ಗಂಟೆಯಾದ್ರೂ ನಿದ್ದೆ ಮಾಡಿ ಆಫೀಸಿಗೆ ಹೋಗೋಣ ಎಂದು ನಿದ್ದೆ ಮಾಡಿದೆ. ಎದ್ದಾಗ ಹನ್ನೊಂದೂವರೆ.

ಎದುರಿನ ಮನೆಗೆ ನಡೆದು ಬ್ಯಾಂಕಿಗೆ ಟೆಲಿಫೋನ್ ಮಾಡಿದೆ. ''ಜ್ವರ ಬರ್ತಿದೆ. ಶೀತ ಜ್ವರ. ಅರ್ಧ ದಿನ ರಜೆ ಬೇಕು.'' ಎಂದು ಕೇಳಿಕೊಂಡೆ.

ಎರಡು ದಿನ ಕಳೆದು ಮೈಸೂರಲ್ಲಿ ಹಾಕಿದ ಕಾಗದ ಬಂತು, ಆಫೀಸಿನ ನನ್ನ ಡೆಸ್ಕಿಗೆ. ಈಗ ಅದನ್ನು ಒಳಗೆ ಕಳುಹಿಸಬಾರದೆಂದು ಅವರೇನು ಹೇಳಿಲ್ಲವಲ್ಲ! ಏಕೆಂದರೆ ಕವರೂ ಬೇರೆ, ವಿಳಾಸವೂ ಬೇರೆ ಕೈಬರೆಹದಲ್ಲಿ.

ಕವರಿನ ಮೇಲೆ ಇನಿಶಿಯಲ್ಸ್ ಹಾಕಿ ಒಳಗೆ ಕಳುಹಿಸಿದೆ.

ಐದು ನಿಮಿಷ ಕಾದೆ. ಹತ್ತು ನಿಮಿಷ ಕಾದೆ. ಇಪ್ಪತ್ತು ನಿಮಿಷಗಳಾಯಿತು. ಒಳಗಿಂದ ಏನಾದ್ರೂ ಕರೆ ಬರಬಹುದೆಂದುಕೊಂಡೆ ಊಹೂಂ..... ಸಂಶಯ ಪಡುತ್ತಲೇ ಒಂದು



ಫೈಲಿನ ವಿವರ ಕೇಳುವ ನೆಪ ಹಿಡಿದುಕೊಂಡು ಒಳಹೋದೆ.

ಅಯ್ಯರ್ ಈಗ ಎಲ್ಲಾ ಟಪಾಲು ನೋಡಿಯಾಗಿತ್ತು. ಆದರೆ ಅಲ್ಲೆಲ್ಲೂ ನನ್ನ ಕಾಗದ ಕಂಡು ಬರಲಿಲ್ಲ. ಆಚೀಚೆ ಕದ್ದು ನೋಡಿದೆ. ಎಲ್ಲೂ ಕಣ್ಣಿಗೆ ಬೀಳಲಿಲ್ಲ.

ಮಧ್ಯಾಹ್ನ ಊಟದ ಹೊತ್ತಿಗೆ ಅಯ್ಯರ್ ಹೊರಹೋದಾಗ ರೂಮಿನೊಳಗೆ ಹೋದೆ. ಎಲ್ಲಾ ಜಪ್ತಿ ಮಾಡಿದೆ. ಮೇಜು, ಡ್ರಾಯರ್, ಫೈಲಿನ ರಾಶಿ, ಕಸದ ಬುಟ್ಟಿ..... ಎಲ್ಲೂ ಇಲ್ಲ.

ಹಾಗಿದ್ರೆ ಅವರೀಗ ಕಾಗದವನ್ನು ಕಿಸೆಯಲ್ಲಿ ಹಾಕಿಕೊಂಡಿರಬೇಕು. ಅವರ ಮನಸ್ಸು ಬದಲಾಗಿರಬೇಕು. ಆಂಜನೇಯ ದೇವರ ಕೃಪೆ ಅವರ ಮೇಲಿದೆ ಎಂದಾಯ್ತು. ಅವರೀಗ ಕಾಗದವನ್ನು ಮನೆಗೆ ಕೊಂಡೊಯ್ಯುತ್ತಾರೆ. ಮೂರು ಕಾಪಿ ಮಾಡುತ್ತಾರೆ. 'ಆಂಜನೇಯ ಸ್ವಾಮಿ ನಮೋ ನಮಃ' ಎಂದು ಮೂರು ಸಲ ಬರೆಯುತ್ತಾರೆ. ಮತ್ತೆ ಮೂರು ಮಂದಿಗೆ ಕಳುಹಿಸುತ್ತಾರೆ. ಆಗ ಅವರ ಸಕಲ ದೋಷಗಳೂ ಪರಿಹಾರವಾದಂತೆ.....

ಊಟದ ನಂತರ ಅವರು ವಾಪಸ್ಸು ಬರಲಿಲ್ಲ. ಎಲ್ಲಿಂದಲೋ ಫೋನ್ ಮಾಡಿ, ''ಮದ್ರಾಸಿಗೆ ಅರ್ಜಂಟ್ ಕೆಲ್ಸಕ್ಕೆ ಹೋಗ್ಲಿಕ್ಕಿದೆ, ನಾಳೆ ಮಧ್ಯಾಹ್ನ ಬರ್ತೇನೆ,'' ಎಂದರು.

ನಾಳೆ ಬಂತು. ಮಧ್ಯಾಹ್ನವೂ ಬಂತು.

ಆದರೆ ಅಯ್ಯರ್‌ರ ಸುಳಿವಿಲ್ಲ. ಏನಾಗಿರ



...ಹುದು? ಹಾರ್ಟ್ ಅಟ್ಯಾಕ್ ಏನಾದ್ರೂ? ...ಲು ಬಸ್ಸು ಏನಾದ್ರೂ ಆಕ್ಸಿಡೆಂಟ್ ಆಗಿ... ...ತರಪಡುತ್ತಲೇ ಮಧ್ಯಾಹ್ನ ಕಳೆದೆ.

ಸಂಜೆ ಮನೆಗೆ ಬಂದಾಗ ಬಾಗಿಲ ಚಿಲುಕದ ...ೇಲೊಂದು ಲಕೋಟೆ. ಅಪರಿಚಿತ ಕೈಬರಹ.

ತೆರೆದು ನೋಡಿದೆ. ಮಡಚಿಕೊಂಡು ಕುಳಿ...ದ್ದ, ಕಾಗದ ಬಿಡಿಸಿದೆ. ಅಪರಿಚಿತ ಕೈಬರಹ ...ಲ್ಲಿ ಹೀಗೆ ಬರೆದಿತ್ತು.

"ಕಾಂಚೀಪುರದ ಶಿವದೇವಸ್ಥಾನವು ಪಲ್ಲವರ ಕಾಲದಿಂದಲೂ ದೇಶದ ಉದ್ದಗಲಕ್ಕೂ ಪ್ರಸಿದ್ಧಿಯನ್ನು ಹರಡಿಕೊಂಡು ಬಂದಿದೆ. ಈ ಶಿವ ದೇವರ ಅನುಗ್ರಹದಿಂದ ಅಪಾರ ಕೀರ್ತಿ ಹಣ, ಸಂತೃಪ್ತಿ ಪಡೆದುಕೊಂಡವರು ಸಾವಿರಾರು ಮಂದಿ......"

ಎಂದು ಪ್ರಾರಂಭವಾದ ಆ ಕಾಗದದ ಕೊನೆಯಲ್ಲಿ ಹೀಗಿತ್ತು.

"........... ಈ ಮಹೇಶ್ವರನ ಪೂಜೆಯನ್ನು ಸಂಪೂರ್ಣ ನಿರ್ಲಕ್ಷಿಸಿದ್ದಲ್ಲದೇ, ಯಾರೋ ಬಾಲದ ದೇವರನ್ನು ದಿನದ ಇಪ್ಪತ್ನಾಲ್ಕು ಗಂಟೆಗಳೂ ಮನದೊಳಗಿಟ್ಟು ಹಗಲು ರಾತ್ರಿ ಜಪಿಸುತ್ತಾ ಬಂದುದರಿಂದಾಗಿ, ಬೆಂಗಳೂರಿನ ಅರಳೇಪೇಟೆಯ ಬ್ಯಾಂಕೊಂದರ ರಾಮ್ವಾಮಿ ಎಂಬ ಚಿಕ್ಕ ಅಧಿಕಾರಿಯೊಬ್ಬರು ಸಂಪೂರ್ಣ ಬುದ್ಧಿಭ್ರಮಣೆಗೊಂಡು ಹುಚ್ಚುಹುಚ್ಚಾಗಿ ವರ್ತಿಸತೊಡಗಿದರು. ಇಂತಹ ಹಲ ಉದಾಹರಣೆಗಳಿಂದಾಗಿ, ಕೀಳು ದೇವರ ಮೇಲೆ ನಂಬಿಕೆಯಿಡುವುದರ ಬದಲು 'ಓಂ ನಮಃ ಶಿವಾಯ' ಎಂದು ಮೂರು ಬಾರಿ ಉಚ್ಚರಿಸಿ, ಈ ಕಾಗದದ ಮೂರು ಕಾಪಿ ಮಾಡಿ...." ●

---

**ಡಾ.** ಹಾ.ಮಾ.ನಾಯಕರು ಒಮ್ಮೆ ಚಿತ್ರದುರ್ಗಕ್ಕೆ ಬಂದಿದ್ದರು. ಅಭಿಮಾನಿಯೊಬ್ಬರು ಅವರ ಸಂಜೆಯ ಉಪಾಹಾರಕ್ಕೆಂದು ಬಗೆ ಬಗೆಯ ಪದಾರ್ಥಗಳನ್ನು ತಂದಾಗ ಹಾ.ಮಾ.ನಾ. ತಾವು ಎರಡು ಊಟಗಳ ನಡುವೆ ಏನನ್ನೂ ತೆಗೆದುಕೊಳ್ಳುವುದಿಲ್ಲ ಎಂದುಬಿಟ್ಟರು. ಆದರೂ ಆ ಅಭಿಮಾನಿ ಒತ್ತಾಯ ಮಾಡಹತ್ತಿದಾಗ ಅವರು "ನೀವು ನನಗೆ ಏನೆಲ್ಲವನ್ನೂ ಕೊಡಬಹುದು. ಆದರೆ ಆರೋಗ್ಯವನ್ನು ಕೊಡಲಾರಿರಿ. ಅದನ್ನು ನಾನೇ ಕಾಪಾಡಿಕೊಳ್ಳಬೇಕು. ಅದಕ್ಕಾಗಿ ನಾನು ಎಷ್ಟು ಅಗತ್ಯವೋ ಅಷ್ಟನ್ನೇ ಉಣ್ಣುವವನು," ಎಂದು ಹೇಳಿಬಿಟ್ಟರು ಮಾತ್ರವಲ್ಲ ಲವಲವಿಕೆಯಿಂದ ಕಾರ್ಯಕ್ರಮವನ್ನು ನಡೆಸಿಕೊಟ್ಟರು.

ಮಾರನೆಯ ದಿನ ಮೈಸೂರಿಗೆ ಹೊರಡುವ ಮುನ್ನ ಕಾರ್ಯಕ್ರಮವನ್ನು ಏರ್ಪಡಿಸಿದ್ದ ರೋಟರಿ ಅಧ್ಯಕ್ಷ ಬಿ.ಎಸ್ ಶ್ರೀನಿವಾಸಮೂರ್ತಿ ಅವರ ಮನೆಗೆ ಬೆಳಗಿನ ಉಪಾಹಾರಕ್ಕಾಗಿ ಬಂದರು. ಎಲ್ಲರೊಡನೆ ಆತ್ಮೀಯವಾಗಿ ಮಾತನಾಡುತ್ತಾ ಉಪಾಹಾರ ಸೇವಿಸಿದ ನಂತರ ಸೀದಾ ಅಡಿಗೆ ಮನೆಗೆ ನಡೆದು ಆ ಮನೆಯ 'ಅನ್ನಪೂರ್ಣೆ'ಗೆ, "ತುಂಬಾ ಸೊಗಸಾಗಿ ತಿಂಡಿ ಮಾಡಿದ್ದೀರಿ. ಮೈಸೂರು ಸೇರುವವರೆಗೆ ಏನೂ ಯೋಚನೆ ಇಲ್ಲ. ಹೋಗಿ ಬರುತ್ತೇನೆ," ಎಂದು ಹೇಳಿ ನಮಸ್ಕರಿಸಿ ಹೊರಬಂದಾಗ ಆ ತಾಯಿಗೆ ಸಾರ್ಥಕ್ಯ ಭಾವದಿಂದ ಕಂಗಳು ಹನಿಗೂಡಿದ್ದವು.

*ಕೆ. ವೆಂಕಣ್ಣಾಚಾರ್*

# ನಿಮ್ಮ ಶಬ್ದಭಾಂಡಾರ ಬೆಳೆಯಲಿ

**ಶಬ್ದಭಾಂಡಾರವು ಹಣದ ಭಾಂಡಾರಕ್ಕಿಂತಲೂ ಅಮೂಲ್ಯವಾಗಿದೆ**

ಪ್ರತಿ ತಿಂಗಳೂ ಇಲ್ಲಿ ಕೆಲವು ಶಬ್ದಗಳ ಪರಿಚಯ ಮಾಡಿಕೊಡಲಾಗುವುದು. ಆಯಾ ಶಬ್ದದ ಮುಂದೆ ನಾಲ್ಕು ಅರ್ಥಗಳನ್ನು ಕೊಟ್ಟಿದ್ದು ಅವುಗಳಲ್ಲಿ ಒಂದು ಮಾತ್ರ ಸರಿಯಾಗಿರುತ್ತದೆ. ನಿಮಗೆ ಸರಿಯೆನಿಸಿದ ಅರ್ಥವನ್ನು ಮೊದಲು ಆರಿಸಿಕೊಳ್ಳಿರಿ. ಆಮೇಲೆ ಅದರ ಬೆನ್ನಿನ ಪುಟ ನೋಡಿರಿ. ಅಲ್ಲಿ ಸರಿಯಾದ ಅರ್ಥವನ್ನು ವಿವರಿಸಿದೆ.

1. **ಯೇನಕೇನ ಪ್ರಕಾರೇಣ**
   (ಅ) ಏನೂ ತಿಳಿಯದವ
   (ಆ) ಒಂದಕ್ಕೊಂದು
   (ಇ) ಯಾರಿಗೂ ತಿಳಿಯದಂತೆ
   (ಈ) ಯಾವುದಾದರೂ ರೀತಿಯಿಂದ
2. **ನಾಮಕಾವಸ್ತೇ**
   (ಅ) ಉಪ್ಪಿನ ಋಣ
   (ಆ) ಹೆಸರಿಗೆ ಮಾತ್ರ
   (ಇ) ಮೋಸ ಮಾಡುವ ದಾರಿ
   (ಈ) ಕೃತಘ್ನ
3. **ಅನಭಿಷಿಕ್ತ**
   (ಅ) ಪಟ್ಟಾಭಿಷೇಕ ಆಗದ
   (ಆ) ಔಷಧವಿಲ್ಲದ
   (ಇ) ದುರ್ವಾಸನೆ ಮೈಯುಳ್ಳ
   (ಈ) ನೀರು ಸಿಂಪಡಿಸಿದ
4. **ಕಾಲುರಿಚ**
   (ಅ) ಬಿಸಿಯೇರಿದ ನೆಲ
   (ಆ) ಸರದಿ ಬೆಳೆ
   (ಇ) ಹೆಜ್ಜೆ
   (ಈ) ಕಾಲು ಮುರಿದವ
5. **ಚೋದ್ಯ**
   (ಅ) ಚಾಡಿ ಹೇಳುವವ
   (ಆ) ಮುರಿದು ತುಂಡಾದ
   (ಇ) ಆಶ್ಚರ್ಯ
   (ಈ) ಸ್ವಚ್ಛ ಮಾಡಬೇಕಾದ
6. **ಮೊದ್ದು**
   (ಅ) ಪ್ರೀತಿಯ
   (ಆ) ಸಂತೋಷ ಕೊಡುವ
   (ಇ) ಸುಂದರ
   (ಈ) ಬುದ್ಧಿಯಿಲ್ಲದ
7. **ಬಿನ್ನವಿಸು**
   (ಅ) ಅರಿಕೆ ಮಾಡಿಕೊಳ್ಳು
   (ಆ) ಮುರಿ
   (ಇ) ನಮಸ್ಕಾರ ಮಾಡು
   (ಈ) ವಿಘ್ನ ಮಾಡು
8. **ಬಕಧ್ಯಾನ**
   (ಅ) ಊಟದ ಚಿಂತೆ
   (ಆ) ಸೋಗಿನ ಧ್ಯಾನ
   (ಇ) ಆಳವಾದ ಆಲೋಚನೆ
   (ಈ) ಹಾರಾಟ
9. **ಭಾಂಡಾಗಾರ**
   (ಅ) ಪುಸ್ತಕಾಲಯ
   (ಆ) ಉಗ್ರಾಣ
   (ಇ) ಬಂಡಿಯಗಾಲಿ
   (ಈ) ಸೂಳೆಯ ಮನೆ
10. **ರಂಕ**
   (ಅ) ಹಕ್ಕಿ
   (ಆ) ಕೋಪಿಷ್ಠ
   (ಇ) ಬಡವ
   (ಈ) ಹುಣ್ಣಿವೆ
11. **ಆಶೀವಿಷ**
   (ಅ) ಶಾಪ
   (ಆ) ವಿಷ ತಿಂದ
   (ಇ) ಒಂದು ಔಷಧ
   (ಈ) ಹಲ್ಲಿನಲ್ಲಿ ವಿಷವುಳ್ಳ ಪ್ರಾಣಿ
12. **ಗಿಲೀಟು**
   (ಅ) ಹೊಳಪು ಕೊಡುವುದು
   (ಆ) ಕೊಳಕು
   (ಇ) ಹಕ್ಕಿಗಳ ಸ್ವರ
   (ಈ) ಕ್ಷೌರದ ಕತ್ತಿ

# ಮೂವತ್ತು ಸಾವಿರ ಜನರ ಮಾರಣ ಹೋಮ

ಈಶ್ವರಯ್ಯ

ದಕ್ಷಿಣ ಅಮೇರಿಕದ ಪೆರು ದೇಶದ ಉತ್ತರಕ್ಕಿರುವ ಪುತುಮೆಯೊ ಎಂಬ ಪ್ರದೇಶ ರಬ್ಬರ್ ಗಿಡಗಳ ದಟ್ಟವಲ್ಲಯು. ಈ ಶತಮಾನದ ಮೊದಲ ದಶಕದಲ್ಲಿ ಅರನಾ ಎಂಬ ವ್ಯಾಪಾರಿಯೊಬ್ಬ 'ಪೆರುವಿಯನ್ ಅಮೇಜಾನ್ ಕಂಪನಿ' ಎಂಬೊಂದು ಸಂಸ್ಥೆಯ ಮೂಲಕ ಇಲ್ಲಿ ರಬ್ಬರ್ ವ್ಯವಹಾರವನ್ನು ತುಂಬ ಲಾಭದಾಯಕವಾಗಿ ನಡೆಸುತ್ತಿದ್ದ. ಆತನ ಈ ವ್ಯವಹಾರಕ್ಕೆ ಬೆನ್ನೆಲುಬಾಗಿದ್ದವರು ಆ ಪ್ರದೇಶದ ಬಹುಮುಖ್ಯ ಮತ್ತು ಬಹುಸಂಖ್ಯಾಕ ಮೂಲನಿವಾಸಿಗಳಾಗಿದ್ದ ಬಾರ್ಬೆಡಿಯನ್ ಹಾಗೂ ಹಿತಿತೊ ಇಂಡಿಯನ್ನರು. ತುಂಬ ಸುಸ್ವಭಾವದ ಈ ಜನ ಶಾಂತಿಪ್ರಿಯರು, ಕಷ್ಟಸಹಿಷ್ಣುಗಳು. ಆಗ ಅವರ ಸಂಖ್ಯೆ ಅರವತ್ತು ಸಾವಿರಕ್ಕೂ ಹೆಚ್ಚು. ಅಸಂಖ್ಯಾತ ರಬ್ಬರ್ ಗಿಡಗಳಿಂದ ರಬ್ಬರ್ ಹಾಲನ್ನು ಸಂಗ್ರಹಿಸುವುದು ಅವರ ಕೆಲಸ.

ಅರನಾ ಈ ಅರವತ್ತು ಸಾವಿರ ಜನಕ್ಕೆಲ್ಲ ಅಸುರಸ್ವರೂಪಿಯೆ. ತನ್ನಲ್ಲಿ ದುಡಿಯುವ ಆ ಮೂಲನಿವಾಸಿಗಳನ್ನಾತ ಅಮಾನುಷವಾಗಿ ನ
ಸಿಕೊಂಡ. ತನಗಾಗಿ ದುಡಿಯುವ ಕೈಗಳನ
ಕಟ್ಟಿದ, ರಬ್ಬರ್ ಗಿಡಗಳನ್ನೇರುವ ಕಾಲುಗಳನ
ಕಡಿದ, ತನ್ನ ವ್ಯವಹಾರದ ಬೆನ್ನೆಲುಬಾಗಿದ್ದ ಮೂಲ ನಿವಾಸಿಗಳ ಬೆನ್ನು ಮುರಿದ.

ಈ ಕುರಿತು ಮೊಟ್ಟ ಮೊದಲ ಬಾರಿ
ಹೊರಜಗತ್ತಿಗೆ ಸುದ್ದಿ ಮುಟ್ಟಿಸಿದಾತ ಹಾರ್ಡ
ಬರ್ಗ್ ಎಂಬ ಒಬ್ಬ ತರುಣ ರೇಲ್ವೆ ಎಂಜ
ಯರ್. ಆತ ಪೆರುವಿನಿಂದ ಓಡಿ ಬಂದ
ಆದರೆ ಯಾಕೆ ಓಡಿ ಬಂದ ಎಂಬುದು ಮಾ
ಇಂದಿಗೂ ಗೊತ್ತಿಲ್ಲ. ಪುತುಮೆಯೊ ಕಾಡಿನ
ನಡೆಯುತ್ತಿದ್ದ ಈ ಪೈಶಾಚಿಕ ಕೃತ್ಯದ ವರ
ಲಂಡನ್ನನ್ನು ಮೊದಲ ಬಾರಿ ತಲುಪಿದಾ
ಅಲ್ಲೊಂದು ಕೋಲಾಹಲವೇ ಎದ್ದಿತು. ಇ
ನಡೆದದ್ದು 1910ರ ಸುಮಾರಿಗೆ.

1903ರಲ್ಲಿ, ಇಂಥದೇ ಒಂದು ಬರ್ಬರ ಕಾಂಡ ಆಫ್ರಿಕದಲ್ಲಿ ನಡೆದಿತ್ತು. ಅಲ್ಲಿಯ ಕಾಂಗೋ ನಿವಾಸಿಗಳು ಈ ಮಾರಣಹೋಮದಲ್ಲಿ ಬಲಿಪಶುಗಳು. ರಬ್ಬರ್ ಗಿಡ ಅವರ ಪಾಲಿಗೆ ಸಾಕ್ಷಾತ್ ಯಮಸ್ವರೂಪಿಯೆ.

ಬೆಲ್ಜಿಯಮ್ಮಿನ ರಾಜ ಎರಡನೆಯ ಲಿಯೊಪೋಲ್ಡ್ ಈ ಬರ್ಬರಕಾಂಡದ ಸೂತ್ರಧಾರ. ಕಾಂಗೋ ನಿವಾಸಿಗಳನ್ನು ದಂಡಿಸಲು ತುಕಡಿಗಟ್ಟಲೆ ಸೈನ್ಯವನ್ನಾತ ಕಳಿಸುತ್ತಿದ್ದ.

ಲಿಯೊಪೋಲ್ಡನ ಈ ಕ್ರೌರ್ಯದ ಕತೆಯನ್ನು ಕೇಳಿ ರೋಜರ್ ಎಂಬ ನಿರ್ಭೀತ ಐಯರಿಶ್ ಒಬ್ಬ ಕಾಂಗೋ ನಿವಾಸಿಗಳ ಸಹಾಯಕ್ಕೆ ಧಾವಿಸಿದ. ಅಲ್ಲಿ ಆತ ಕಂಡದ್ದು ಕೇವಲ ಕತೆಯಾಗಿರಲಿಲ್ಲ-ಕಟುಸತ್ಯವಾಗಿತ್ತು. ರೋಜರ್ ಹಲವಾರು ದಿನ ಅಲ್ಲಿದ್ದು ಈ ಕ್ರೂರ ದಬ್ಬಾಳಿಕೆ-ಚಿತ್ರಹಿಂಸೆಗಳ ಕುರಿತು ಒಂದು ವಿಸ್ತೃತ ವರದಿಯನ್ನು ತಯಾರಿಸಿ ಬ್ರಿಟಿಶ್ ಸರಕಾರಕ್ಕೆ ಕಳುಹಿಸಿದ. ಕಾಂಗೋ ನಿವಾಸಿಗಳನ್ನು ಚಾಬೂಕಿನಿಂದ ಹೊಡೆಯುವುದು, ಅಂಗಚ್ಛೇದನ, ಶಾರೀರಿಕ ವೇದನೆಗಳ ನೂರಾರು ಉದಾಹರಣೆಗಳನ್ನು ವರದಿಯಲ್ಲಿ ಅವುಗಳ ಕ್ರಮಸಹಿತ ವಿವರಿಸಿದ ರೋಜರ್ ಇದಕ್ಕೆಲ್ಲ ಪುರಾವೆಯೆಂಬಂತೆ ಒಕ್ಕಲೆಬ್ಬಿಸಲ್ಪಟ್ಟ ವಸತಿ ಪ್ರದೇಶಗಳು, ಮೈಲುಗಟ್ಟಲೆ ಹರಡಿಬಿದ್ದ ಕಾಂಗೋ ನಿವಾಸಿಗಳ ಮೂಳೆಗಳು-ಅಸ್ಥಿಪಂಜರಗಳ ಕುರಿತೂ ಬರೆದಿದ್ದ.

ಆ ವರದಿಯನ್ನೋದಿದರೇ ಲಿಯೊಪೋಲ್ಡನ ಬರ್ಬರತೆ ಕಣ್ಣಿಗೆ ಕಟ್ಟುವಂತಿತ್ತು. ಕೆಲದಿನಗಳಲ್ಲಿಯೇ ಜಗತ್ತಿನಾದ್ಯಂತದ ಪತ್ರಿಕೆಗಳ ಮುಖ್ಯ ಸುದ್ದಿಯಾಗಿಬಿಟ್ಟಿತು ಈ ವರದಿ. ಪರಿಣಾಮವಾಗಿ ಬೆಲ್ಜಿಯಮ್ ಸರಕಾರ ಕಾಂಗೋದಲ್ಲಿ ಲಿಯೊಪೋಲ್ಡನ ಪ್ರಭುತ್ವವನ್ನು ಕೊನೆಗಾಣಿಸಬೇಕಾಯಿತು. 'ರಬ್ಬರ್ ಕಾಂಡ'ದಿಂದ ಕೋಟ್ಯಂತರ ಹಣವನ್ನು ಗಳಿಸಿದ್ದ ಲಿಯೊಪೋಲ್ಡ್ ಕಾಂಗೋ ಮೂಲನಿವಾಸಿಗಳ ಮೇಲಿನ ತನ್ನ 'ಕ್ರೌರ್ಯದ ಫಲ'ವನ್ನು ತಾನೇ ಉಂಡ.

ಕಾಂಗೋದ ಈ ಅಮಾನುಷ ಘಟನೆ ಏಳು ವರ್ಷಗಳ ನಂತರ ಪುತುಮೆಯೊದಲ್ಲಿ ಮರುಕಳಿಸುತ್ತಿರುವುದರ ವಾರ್ತೆ ರೋಜರನ ಕಿವಿ ತಲುಪಿತು. ಸ್ವತಃ ಅತ್ಯಾಚಾರಕ್ಕೊಳಗಾಗಿ, ಪುತುಮೆಯೊದಿಂದ ಓಡಿಬಂದ ಕೆಲವರು ಬಾರ್ಬೇಡಿಯನ್ನರಿಂದ ಅಲ್ಲಿಯ ಪರಿಸ್ಥಿತಿಯನ್ನು ಅರಿತುಕೊಂಡ ರೋಜರ್. 46 ವರ್ಷ ರೋಜರ್ ಆಗ ರಿಯೊಡಿಜನೇರಿಯೊದಲ್ಲಿ ಬ್ರಿಟನ್ನಿನ ಕೌನ್ಸಿಲ್ ಜನರಲ್ ಹುದ್ದೆಯಲ್ಲಿದ್ದ. ಪುತುಮೆಯೊದ ನರಕ-ಸದೃಶ ಕುಕೃತ್ಯಗಳಿಂದಾಗಿ ರೋಸಿದ ರೋಜರ್ ದೀರ್ಘಕಾಲದ ರಜೆ ಪಡೆದು ಇಕ್ವಿಟಾಸ್‌ಗೆ ಧಾವಿಸಿದ. ಪುತುಮೆಯೊದ ರಬ್ಬರನ್ನು ವಿದೇಶಗಳಿಗೆ ಕಳಿಸುವ ಬಂದರು ಕಟ್ಟೆ ಈ ಇಕ್ವಿಟಾಸ್. ಆದರೆ ಕೆಲದಿನಗಳಲ್ಲೇ ಅಲ್ಲಿಯ ಹವಾಮಾನ-ನೀರುಗಳು ಮಾನಿಸದ ಕಾರಣ ರೋಜರ್‌ನನ್ನು ಅನಾರೋಗ್ಯ ಕಾಡಿತು. ಆದರೂ ಆತ ಪಟ್ಟು ಬಿಡಲಿಲ್ಲ. ಅಲ್ಲಿಯ ಬ್ರಿಟಿಶ್ ಕೌನ್ಸಿಲ್‌ನಿಂದ ಪುತುಮೆಯೊದ ವಿದ್ಯಮಾನಗಳ ಬಗ್ಗೆ ಹೆಚ್ಚು ಮಾಹಿತಿ ಪಡೆದ.

ಅರನಾ ನೇಮಿಸಿಕೊಂಡಿದ್ದ ಧಾಂಡಿಗರು ಮನುಷ್ಯತ್ವ ಎಂಬ ಪದವನ್ನೇ ಕೇಳರಿಯದ ಸೈತಾನರು. ಒಡೆಯ ಹೇಳಿದ್ದಕ್ಕಿಂತ ಹೆಚ್ಚೇ ಅಟಾಟೋಪ ತೋರಿಸುಹಂಥವರು. ಅರನಾನ ಕಂಪನಿಯಲ್ಲಿ ರಬ್ಬರ್ ಹಾಲು ಸಂಗ್ರಹಿಸುವ ಆ ಮೂಲನಿವಾಸಿಗಳೆಲ್ಲ ಒಂದು ರೀತಿಯಲ್ಲಿ ಆತನ ಗುಲಾಮರೆ.

ಈ ಬಗ್ಗೆ ಲಂಡನ್ನಿಗೆ ಮೊಟ್ಟಮೊದಲ ಬಾರಿ ಸುದ್ದಿ ತಲುಪಲು ಕಾರಣವಾಗಿದ್ದ ರೇಲ್ವೆ ಎಂಜಿನಿಯರ್ ಹಾರ್ಡನ್‌ಬರ್ಗ್‌ನ ಹೇಳಿಕೆಗಳೆಲ್ಲ ಸುಳ್ಳು ಎಂದ ಅರನಾ. ಆದರೆ ಬ್ರಿಟಿಶ್ ಸರಕಾರದ ಆಗಿನ ವಿದೇಶ ಸಚಿವ ಸರ್ ಎಡ್‌ವರ್ಡ ಈ ಕುರಿತು ತನಿಖೆ ನಡೆಸಲು ಆದೇಶವಿತ್ತ. ಎಡ್‌ವರ್ಡನ ಬಳಿ ಎರಡು ಬಲವಾದ ಆಧಾರಗಳಿದ್ದವು: ಒಂದು, ಲಕ್ಷ ಪೌಂಡುಗಳ ಬಂಡವಾಳದ 'ಪೆರುವಿಯನ್ ಅಮೇಜಾನ್ ಕಂಪನಿ' ಲಂಡನ್ನಿನಲ್ಲಿ ರಿಜಿಸ್ಟರಾಗಿತ್ತು. ಎರಡು, ಅರನಾ ಬಾರ್‌ಡೋಸಿನ 200 ಜನರನ್ನು

ಡೈವರುಗಳೆಂದು ನೇಮಿಸಿಕೊಂಡಿದ್ದ. ಬಾರ್ಡೋಸ್ ಬ್ರಿಟಿಶ್ ಸಾಮ್ರಾಜ್ಯದ ಅಧೀನವೇ ಇತ್ತಾದ್ದರಿಂದ ಬಾರ್‌ಬೇಡಿಯನ್ನರೂ ಬ್ರಿಟನ್ನಿನ ಪ್ರಜೆಗಳೆಂದೇ ಗಣಿಸಲ್ಪಡುತ್ತಿದ್ದರು.

ರೋಜರನನ್ನು ಅತ್ಯಾಚಾರ ಪ್ರಕರಣದ ತನಿಖೆ ಮಾಡಲು ಬ್ರಿಟಿಶ್ ಸರಕಾರ ನೇಮಿಸಿತು.

ಇಕ್ವಿಟಾಸ್ ಬಂದರಿನಿಂದ 'ದಿ ಲಿಬರಲ್' ಎಂಬ ಸ್ಟೀಮರನ್ನೇರಿ ರಬ್ಬರ್ ತೋಟದ ಗುಲಾಮರನ್ನು ಮುಕ್ತಗೊಳಿಸಲು ಹೊರಟ ರೋಜರ್. ಆದರೆ ಪುತುಮೆಯೊದ ದಟ್ಟಕಾಡುಗಳ ಕೆಟ್ಟ ಸೊಳ್ಳೆಗಳಿಂದಾಗಿ ಆತನಿಗೆ ಮಲೇರಿಯಾ ಬಾಧಿಸಿತು. ಈ ರೋಗಬಾಧೆಗಿಂತ ರೋಜರನನ್ನು ಹೆಚ್ಚು ಬಂಧಿಸಿದ್ದು ಪುತುಮೆಯೊದ ಮೂಲನಿವಾಸಿಗಳ ನಿತ್ಯದ ನರಳಾಟ, ಸಾವು, ನೋವು...

ಪುತುಮೆಯೊದಲ್ಲಿ ಅರನಾದ ಅತ್ಯಾಚಾರದ ಅಸಂಖ್ಯಕತೆಗಳನ್ನು ಕೇಳಿದ ರೋಜರ್. ಈ 'ಸೈತಾನನ ಸ್ವರ್ಗ'ದಲ್ಲಿದ್ದ ಹಿತಿತೊ ಇಂಡಿಯನ್ನರನ್ನು ರಕ್ಕಸರ ಹಿಡಿತದಿಂದ ಹೊಡೆತದಿಂದ ಪಾರುಮಾಡಬಯಸಿದ ಆತ.

ಅರನಾನ ಧಾಂಡಿಗರಲ್ಲೊಬ್ಬ ನಾರ್ಮಂಡ್ ಅತ್ಯಾಚಾರದ ವಿಷಯದಲ್ಲಿ ಆತ ಅರನಾನ ಮಗನೇ. ಮರದಿಂದ ರಬ್ಬರ್ ಇಳಿಸುತ್ತಿದ್ದ ಒಬ್ಬ ಮೂಲನಿವಾಸಿಯನ್ನಾತ ಜೀವ ಸಹಿತ ಸುಟ್ಟಿದ್ದ.

ಅರನಾ ಹಾಗೂ ನಾರ್ಮಂಡರು ಗೈದ ಮಾರಣಹೋಮದ ವಿವರಗಳನ್ನು, ಪುರಾವೆಗಳನ್ನು ಸಂಗ್ರಹಿಸತೊಡಗಿದ ರೋಜರ್. ಅದರಲ್ಲಿ ಆತ ಬರೆದ ವರದಿಗಳ ಕೆಲವು ತುಣುಕುಗಳಿವು:

''ಹಿತಿತೊ ಇಂಡಿಯನ್ನರ ಮುಖ್ಯಸ್ಥರ ರುಂಡಗಳನ್ನು ಒಂದೇ ಹೊಡೆತಕ್ಕೆ ಕತ್ತಿಯಿಂದ ಹಾರಿಸಲಾಗುತ್ತಿತ್ತು. ಆ ಕತ್ತಿಗಳು ರಬ್ಬರ್ ಗಿಡಗಳಲ್ಲಿ (ಹಾಲು ಹರಿಯಲು) ಕಚ್ಚು ಹಾಕಲು ಬಳಸುವಂಥವು. ಅಲ್ಲದೇ ಉಳಿದ ಹಿತಿತೊಗಳನ್ನು ನೀರಲ್ಲದ್ದಿದ ಅವರನ್ನು ಚರ್ಮದ ಬಾರುಕೋಲಿನಿಂದ ಹೈರಾಣಾಗುವವರೆಗೆ ಹೊಡೆಯುತ್ತಿದ್ದರು. ಹೆಚ್ಚಿನ ಪ್ರಕರಣಗಳಲ್ಲಿ ಹೀಗೆ ಹೊಡೆತ ತಿಂದವರ ಮೈ ಚರ್ಮ, ಮಾಂಸಖಂಡಗಳು ಕಿತ್ತು ಒಳಗಿನ ಮೂಳೆ



ದ್ದು ಕಾಣುವಂತಿರುತ್ತಿತ್ತು. ಅದೇ ಸ್ಥಿತಿಯಲ್ಲಿ ವರನ್ನು ಬಿಡಲಾಗುತ್ತಿತ್ತು. ಹೊಡೆತದ ನೋವು, ಗಾಯದಿಂದ ಆದ ಕೀವು, ಹುಣ್ಣು-ಅವುಗಳಲ್ಲಿ ಹುಳುಗಳು ಹರಿದಾಡಿ ಆ ನಿಷ್ಪಾಪಿಗಳು ಹೆಣವಾಗುತ್ತಿದ್ದರು. ಈ ಹೆಣಗಳನ್ನು ನಾಯಿಗಳಿಗೆಸೆಯುವ ನಿರ್ಧಾರವನ್ನೂ ಮಾಡುತ್ತಿದ್ದ ಅರನಾ.

''ಅರನಾನ ಧಾಂಡಿಗರಲ್ಲಿ ಕೆಲವರಂತೂ ಎರಡು ಮರಗಳ ನಡುವೆ ತೂಗುಯ್ಯಾಲೆಯಂಥ ಜೋರಸು ಕಟ್ಟಿ, ಅವುಗಳ ತಳಕ್ಕೆ ಕಾರ್ಮಿಕರನ್ನು ಬಿಗಿದು ತಾವು ಮೇಲೆ ಮಲಗುತ್ತಿದ್ದರು. ತೂಗುಯ್ಯಾಲೆ ಅತ್ತಿತ್ತ ಸರಿದಾಡಿದಾಗ ಆ ಗುಲಾಮರು ಭಯದಿಂದ ಅರಚಿಕೊಳ್ಳುತ್ತಿದ್ದರು. ಅವರ ಅರಚುವಿಕೆಯಿಂದ ಉತ್ತೇಜಿತಗೊಂಡ ತೋಳದಂಥ ನಾಯಿಗಳು ಬಿಡದೆ ಕಚ್ಚಿ ಗಾಯಗೊಳಿಸುತ್ತಿದ್ದವು. ಇಂಥ ನಾಯಿಗಡಿತದ ನಂಜಿನಿಂದ ಸತ್ತವರೆಷ್ಟೊ.

''ನಾನು ಇಲ್ಲಿಯ ಮೂಲನಿವಾಸಿಗಳನ್ನು ನೋಡಿದ್ದೇನೆ. ಅವರ ಶರೀರದ ಶೇಕಡಾ ತೊಂಬತ್ತು ಪಾಲು ಚಾಟಿ, ಬಾರುಕೋಲುಗಳ ಬಾಸುಂಡೆಗಳಿಂದ ತುಂಬಿದೆ. 'ಇವೆಲ್ಲ ಅರನಾದೇಣಿಗೆ,' ಎನ್ನುತ್ತಾರವರು. ಈ ಬಾಸುಂಡೆಗಳೊಂದಿಗೆ ಅಹೋರಾತ್ರಿ ಭಯಭೀತರಾಗಿ ಬಾಳುತ್ತಿವೆ ಹತ್ತು-ಹನ್ನೆರಡು ವಯಸ್ಸಿನ ಸಾವಿರಾರು ಮಕ್ಕಳು.

''ಈ ಮೂಲನಿವಾಸಿಗಳನ್ನು ದಂಡಿಸುವ ಇನ್ನೊಂದು ಕ್ರಮವೆಂದರೆ ಅವರ ಕಾಲಿನ ಪಾದಗಳ ಮೇಲಿನ ಭಾಗವನ್ನು ಎರಡು ಕಟ್ಟಿಗೆಯ ಪಟ್ಟಿಗಳ ನಡುವೆಯಿಟ್ಟು ಮೊಳೆ ಜಡಿಯುವದು. ಇದರಿಂದಾಗಿ ಮುಗ್ಧ ಗುಲಾಮರು ಕಾಲನ್ನು ಅತ್ತಿತ್ತ ಸರಿಸಲೂ ಸಾಧ್ಯವಾಗುವುದಿಲ್ಲ. ಕಾಲು ಬಿಡಿಸಿಕೊಳ್ಳಬೇಕೆಂದರೆ ಗಾಯ ಮಾಡಿಕೊಳ್ಳಲೇಬೇಕು.

''ಕೆಲವೊಮ್ಮೆ ಹೀಗೆ ಬಂಧಿಸಿಟ್ಟವರನ್ನು ಬಾರುಕೋಲಿನಿಂದ ಹೊಡೆಯುವರು. ಬಂಧಿತರ ಹಸಿವಿನ ಬಾಧೆ ಹೇಳತೀರಲಾರದ್ದು. ಕೆಲವರು ಪ್ರತ್ಯಕ್ಷದರ್ಶಿಗಳ ಪ್ರಕಾರ, ಈ ಬಂಧಿತರು ಹಸಿವನ್ನು ನೀಗಲು ಬೆರಳುಗಳಿಂದ ಮಣ್ಣನ್ನು ಕೆದರಿ ಬಾಯಿಗೆ ಹಾಕಿಕೊಳ್ಳುವರು, ಕೆಲವರಂತೂ ತಮ್ಮ ಗಾಯಗಳಲ್ಲಾದ ಹುಣ್ಣಿನ ಹುಳುಗಳನ್ನೇ ತೆಗೆದು ತಿನ್ನುವರು. ಚಿತ್ರಹಿಂಸೆ-ಹಸಿವು ಮತ್ತು ಸಾವಿನ ಈ ನರಕ ಮನುಷ್ಯ ನಿರ್ಮಿತವೆ.''

''ಇದೆಲ್ಲದರ ಉದ್ದೇಶವೇನು ಗೊತ್ತೆ? ಕೂಲಿ ಪಡೆಯದೆ ಆ ಜನ ತನ್ನೊಡೆಯನಿಗಾಗಿ ದುಡಿಯಬೇಕು. ಅದೂ ದಿನದ ಹದಿನೆಂಟು ಗಂಟೆಗಳು! ಇಂಥ ಕೂಲಿ ಇರದ ದುಡಿತವೆಂದರೆ ಒಡೆಯನಿಗೆ ಆಗುವ ಲಾಭದ ಲೆಕ್ಕ ಹಾಕಿಕೊಳ್ಳಿ. ಪುಕ್ಕಟೆಯಾಗಿ ಮತ್ತು ಹೇಳಿದಷ್ಟು ಕಾಲ ದುಡಿಯಲೊಪ್ಪದವರಿಗೆ ಈ ರೀತಿಯ ದಂಡನೆ.''

''ದನಕ್ಕೆ ಕಟ್ಟಿದಂತೆ ಹಗ್ಗದಿಂದ ಹತ್ತಾರು ಇಂಡಿಯನ್ನರ ಕತ್ತಿಗೆ ಹಗ್ಗಹಾಕಿ ಎಳೆಯುತ್ತ ಬಾರುಕೋಲಿನಿಂದ ಹೊಡೆಯುವರು. ಕಟ್ಟಿಗೆಯ ಕ್ರಾಸ್ ಮೇಲೆ ತಲೆ ಕೆಳಗಾಗಿ ಕಟ್ಟಿಬಿಡುವರು, ಇಲ್ಲ, ಆ ಕ್ರಾಸನ್ನು ಅದು ಮುಳುಗುವ ಮಟ್ಟದವರೆಗಿನ ನೀರಲ್ಲಿ ಎಸೆದು ಬಿಡುವರು.

ಇವೆಲ್ಲ ಶಿಕ್ಷೆಗೆ ಹೆದರಿ ಕೂಲಿಯೊಬ್ಬ ಓಡಿ ಹೋಗಲೆತ್ನಿಸಿದರೆ ಅರನಾನ ಚೌಕೀದಾರರು ಅವನನ್ನು ವಿನ್‌ಚೆಸ್ಟರ್ ರೈಫಲಿನಿಂದ ಉರುಳಿಸಿ ಬಿಡುವರು. ಇಂಥವರಲ್ಲಿ ಕೆಲವರನ್ನು ಗಿಡಗಳಿಗೆ ಕಟ್ಟಿ ಗುಂಡು ಹೊಡೆಯಲಾಗುತ್ತಿತ್ತು. ಇನ್ನು ಕೆಲವರ ಕಿವಿಯಲ್ಲಿ ಕಾದ ಮೇಣ ಸುರಿಯುತ್ತಿದ್ದರು.''

ಬ್ರಿಟಿಶ್ ಅನ್ವೇಷಕ ಕರ್ನಲ್ ಪರ್ಸಿ ಎಂಬಾತ ಇದೇ ಸಮಯದಲ್ಲಿ ಪುತುಮೆಯೊಕ್ಕೆ ಬಂದವ ಇದ್ದಕ್ಕಿದ್ದಂತೆ ಕಣ್ಮರೆಯಾಗಿಬಿಟ್ಟಿದ್ದ. ಆತ ಎಲ್ಲಿ ಹೋದ, ಏನಾದ, ಯಾರಾದರೂ ಆತನನ್ನು ಮುಗಿಸಿದರೆ ಇವೇ ಮುಂತಾದ ಪ್ರಶ್ನೆಗಳು ಇನ್ನೂ ಅನುತ್ತರಿತ.

ಪರ್ಸಿ ತನ್ನ ಒಂದು ವರದಿಯಲ್ಲಿ ಬರೆದಿದ್ದಾನೆ: ''ಅರನಾನ ದುಷ್ಟ ಮ್ಯಾನೇಜರ್ ಬಾರ್

ಬೇಡಿಯನ್ನರ ವಸತಿಗೆ ಬಂದು ಅವರನ್ನು ಬಲವಂತವಾಗಿ ಕೆಲಸಕ್ಕೆ ಎಳೆದೊಯ್ಯುತ್ತಿದ್ದರು. ಆಗ ಅಡ್ಡಬಂದ ಮಕ್ಕಳನ್ನು ಎತ್ತಿ ಪಕ್ಕದ ಮರಗಳ ಬೊಡ್ಡೆಗೆ ಎಸೆದು ಬಿಡುತ್ತಿದ್ದರು. ಆ ಪೆಟ್ಟಿನಿಂದ ಪಾಪ, ಆ ಹಸುಳೆಗಳು ಮಿದುಳು ಹೊರಬಂದು ಹೆಣಗಳಾಗುತ್ತಿದ್ದವು.

ರೋಜರ್ ಆ ದಟ್ಟ ಕಾಡಿನ ಎಲ್ಲಾ ಕಡೆ ಸುತ್ತಾಡಿಕೊಂಡು ತನ್ನ ವರದಿಯನ್ನು ಬರೆದು ಮುಗಿಸಿದ. ಆತ ಲೆಕ್ಕ ಹಾಕಿದಂತೆ 1900ರಿಂದ ಮುಂದಿನ ಹತ್ತು ವರ್ಷಗಳಲ್ಲಿ ನಾಲ್ಕು ಸಾವಿರ ಟನ್ ರಬ್ಬರ್ ಉತ್ಪಾದನೆಯಾಗಿತ್ತು. ಆದರೆ ಈ ಉತ್ಪಾದನೆಗೆ ಮೂವತ್ತು ಸಾವಿರ ಜನ ತಮ್ಮ ಪ್ರಾಣಗಳನ್ನು ಬಲಿ ನೀಡಿದ್ದರು.

ಈ ಮಾರಣಹೋಮದ ಮುಂದಾಳುಗಳಲ್ಲಿ ಕೆಲವರ ಹೆಸರುಗಳನ್ನು ರೋಜರ್ ಲಂಡನ್ನಿಗೆ ಕಳಿಸಿದ. ಕೂಡಲೆ ಪೆರು ಸರಕಾರಕ್ಕೆ ಈ ಮುಂದಾಳುಗಳ ಬಗ್ಗೆ ಕ್ರಮ ಕೈಕೊಳ್ಳಲು ಬ್ರಿಟಿಶ್ ಸರಕಾರ ತುರ್ತಾಗಿ ವಿನಂತಿಸಿತು.

1910ರ ಡಿಸೆಂಬರ್ ತಿಂಗಳಲ್ಲಿ ರೋಜರನ 'ಹೃದಯ ವಿದ್ರಾವಕ ವರದಿ' ಲಂಡನ್ ತಲುಪಿದಾಗ ಅದನ್ನು ಪ್ರಕಟಿಸದೇ ಹಾಗೇ ಉಳಿಸಿಕೊಳ್ಳಲಾಯಿತು. ಈ ಮೊದಲಿನ ತನ್ನ ವರದಿಯಂತೆ ಪೆರು ಸರಕಾರ ಪರಿಸ್ಥಿತಿಯನ್ನು ಸುಧಾರಿಸಲು ಯತ್ನಿಸುತ್ತದೆಯೋ ಎಂಬಾಸೆಯಿಂದ. ಆದರೆ ಅದರಿಂದೇನೂ ಪ್ರಯೋಜನ ಕಾಣಲಿಲ್ಲ. ಪೆರು ಸರಕಾರಕ್ಕೆ ಈ ದೂರಸ್ಥ ಪ್ರದೇಶದ ಮೇಲೆ ಹತೋಟಿ ಸಾಧಿಸುವುದು ಸಾಧ್ಯವಾಗಲಿಲ್ಲ. ಪುತುಮೆಯೊ ಕಾಂಡದ ಅಪರಾಧಿಗಳಿಗೆ ತಪ್ಪಿಸಿಕೊಂಡು ಹೋಗಲು ಇದರಿಂದ ಅನುಕೂಲವಾಗಿತ್ತು.

1911ರ ಸಪ್ಟಂಬರ್ 5ರಂದು ರೋಜರ್ ತನ್ನ ಡೈರಿಯಲ್ಲಿ, "ಅರನಾನ ಏಜಂಟನಾಗಿದ್ದ ನಾರ್ಮಂಡ್‌ನ ಮಿತ್ರ, ಗ್ವಾಯಜುಯೆತೊ ಈಗ ಪೆರುದೇಶದ ಸೇನೆಯಲ್ಲಿದ್ದಾನೆ. ಆತ ಡಿಕಿ ಎಂಬ ಡಾಕ್ಟರನೊಬ್ಬನಿಗೆ ಒಂದು ಸಲ, 'ನಾನು ಮತ್ತು ನಾರ್ಮಂಡ್ ಒಮ್ಮೆ ಮಟೆಂಜದಲ್ಲಿದ್ದಾಗ ಆತ




"ಪಾಪ! ಮೊನ್ನೆ ತಾನೆ ಹೊಸಾ ಸ್ಕೂಟರ್ ಕೊಂಡಿದ್ರು - ಪೆಟ್ರೋಲ್ ಬೆಲೆ ಏರ್‍ತು ನೋಡಿ ಅದ್ಕೆ ಹಾಗೇ ಆಫೀಸಿನವರೆಗೂ ದಿನಾಲು ನೂಕಿಕೊಂಡೇ ಹೋಗ್ತಿದಾರೆ!!"

ಇಬ್ಬರು ಇಂಡಿಯನ್ ಬಾಲಕರನ್ನು ಒಲೆಯ ಾವಲಿಯ ಮೇಲೆ ಕಟ್ಟಿ ಮಲಗಿಸಿ ಅವರಿಬ್ಬರೂ ರುಚುತ್ತ ಸುಟ್ಟು ಕರಕಾಗುವುದನ್ನು ನೋಡು ತ್ತಲಿದ್ದ...... ಅವರಿಬ್ಬರ ಚರ್ಮ ಕಿತ್ತಿತ್ತು, ಮಾಂಸ ಬೆಂದಿತ್ತು. ಆದರೂ ಜೀವ ಹೋಗಿರ ಲಿಲ್ಲ. ಅವರ ಯಾತನೆಯನ್ನು ನೋಡಲಾಗದೆ ನಾನೇ ಅವರಿಬ್ಬರನ್ನೂ ಗುಂಡು ಹಾರಿಸಿ ಕೊಂದೆ. ಇದರಿಂದ ಕುಪಿತನಾದ ನಾರ್ಮಂಡ್ ನನ್ನನ್ನು 'ನೌಕರಿಯಿಂದ ಕಡಿಮೆ ಮಾಡಿದ' ಎಂದು ಹೇಳಿದ,'' ಎಂದು ಬರೆದ.

ನಂತರದ ಎರಡು ದಿನಗಳಲ್ಲಿ ರೋಜರ್ ಮತ್ತೊಂದು ಸುದೀರ್ಘ ವರದಿಯನ್ನು ತಯಾರಿಸಿದ. ಅದನ್ನು ಬ್ರಿಟನ್ನಿನ ವಿದೇಶ ವಿಭಾಗಕ್ಕೆ ಕಳಿಸಿ, ಜತೆಗಿರಿಸಿದ ಕಾಗದದಲ್ಲಿ, ''ಪುತುಮೆಯೊದಲ್ಲಿ ನಾರ್ಮಂಡನೇ ಅತ್ಯಂತ ಕ್ರೂರಿ ಎನಿಸುತ್ತದೆ. ಆತನನ್ನು ಕೂಡಲೇ ನ್ಯಾಯ ವಿಚಾರಣೆಗೊಳಪಡಿಸಬೇಕು ಮತ್ತು ಅಲ್ಲಿಯ ಸರಕಾರ ಅವನನ್ನು ಬಂಧಿಸಿ ಬ್ರಿಟಿಶ್ ಸರಕಾರಕ್ಕೆ ಒಪ್ಪಿಸಬೇಕೆಂದು ಒತ್ತಾಯ ತರಬೇಕು,'' ಎಂದೂ ಕಾಣಿಸಿದ.

ನ್ಯಾಯಾಧೀಶರು ಪೆರುದ ನ್ಯಾಯಮೂರ್ತಿಗಳ ಆಯೋಗವೊಂದನ್ನು ಪುತುಮೆಯೊಕ್ಕೆ ಕಳಿಸಿ, 237 ಜನರ ಮೇಲೆ ಬಂಧನ ವಾರಂಟ್ ಜಾರಿ ಮಾಡಿದರು. ಆದರೆ ಸಿಕ್ಕವರು ಒಂಬತ್ತು ಜನ ಮಾತ್ರ. ಯಾರ ಮೇಲೂ ಮೊಕದ್ದಮೆ ಹೂಡಲಾಗಲಿಲ್ಲ.

1912ರಲ್ಲಿ ರೋಜರನ ವರದಿಯನ್ನು ಲಂಡನ್ನಿನಲ್ಲಿ ಸರಕಾರವೆ ಪ್ರಕಟಿಸಿತು. ಜಗತ್ತಿನಾದ್ಯಂತ ಪುತುಮೆಯೊ ಕಾಂಡದ ಕುರಿತು ಆಕ್ರೋಶ ವ್ಯಕ್ತಪಟ್ಟಿತು. ವರ್ಷವೊಂದರ ನಂತರ ಬ್ರಿಟನ್ನಿನ ನ್ಯಾಯಾಲಯ 'ಪೆರುವಿಯನ್ ಅಮೇಜಾನ್ ಕಂಪನಿ'ಯನ್ನು ಕೂಡಲೇ ಮುಚ್ಚುವಂತೆ ಆದೇಶವಿತ್ತಿತು.

ಈ 'ಮಾನವೀಯತೆ ಮೆರೆದ' ವ್ಯಕ್ತಿ, ಒಂದು ಜನಾಂಗದ ಕಷ್ಟವನ್ನು ಕೊನೆಗಾಣಿಸುವ ದಿಶೆಯಲ್ಲಿ ಶ್ರಮಿಸಿದ ಮಹನೀಯನೆಂದು ಹೊಗಳಿ ಬ್ರಿಟಿಶ್ ಸರಕಾರ ರೋಜರನಿಗೆ ನೈಟ್ ಹುದ್ದೆ ನೀಡಿ ಗೌರವಿಸಿತು. ಮರುವರುಷ (1914) ಪ್ರಾರಂಭವಾದ ಮೊದಲ ಮಹಾಯುದ್ಧ ಪುತುಮೆಯೊ ಕಾಂಡವನ್ನು ಜನಮಾನಸದಿಂದ ಒರೆಸಿ ಬಿಟ್ಟಿತು.

ಮೂರು ವರ್ಷಗಳ ನಂತರ, ''ರೋಜರ್ ಆಯರ್ಲಂಡಿನ ಸ್ವಾತಂತ್ರ್ಯ ಸಂಗ್ರಾಮದಲ್ಲಿ ದೇಶ ದ್ರೋಹಗೈದ''ನೆಂಬ ಆರೋಪದ ಮೇಲೆ ಮೊಕದ್ದಮೆ ನಡೆದು ರೋಜರ್ ಅಪರಾಧಿ ಎಂದು ತೀರ್ಪು ಬಂದಿತಲ್ಲದೆ ಆತನಿಗೆ ಮರಣ ದಂಡನೆ ಶಿಕ್ಷೆಯೂ ಆಯಿತು.

ಗಲ್ಲಿಗೇರುವ ಮುನ್ನ ರೋಜರ್ ಉದ್ಗರಿಸಿದನಂತೆ, ''ಪಾಪದ ಜನ ಆ ಪುತುಮೆಯೊ ಇಂಡಿಯನ್ನರು..'' (ಸಾಧಾರ) ●

ಒಬ್ಬನ ಯೋಗ್ಯತೆಯನ್ನು ತಿಳಿಯಲು ಅವನ ಉಡುಪಿನ ಬದಲಾಗಿ ಅವನ ಹೆಂಡತಿಯನ್ನು ನೋಡು.

- ರಾಬರ್ಟ್ ದಿವಾರ್

ಚೆಲುವೆಯಾದ ಹೆಂಗಸು ಒಂದು ವಡವೆ. ಒಳ್ಳೆಯ ಹೆಂಗಸು ಒಂದು ಭಂಡಾರ.

- ಸಾದಿ

ಗಂಡೂ ಹೆಣ್ಣೂ ಮದುವೆಯಾದಾಗ ಅವರ ಹಗಲುಗನಸುಗಳು ನಿಂತುಹೋಗಿ ಅವರ ಇತಿಹಾಸ ಆರಂಭವಾಗುತ್ತದೆ.

- ರೋಪೆ ಬ್ರೂನ್

# ಸಂಸಾರಕ್ಕಿಂತ ಪ್ರಿಯ ಸಂಗ್ರಹ ಹವ್ಯಾಸ

ಹಳೆಯ ಕಬ್ಬಿಣದ ಸಾಮಾನುಗಳನ್ನು ಹೆಕ್ಕಿ ತೆಗೆದುಕೊಂಡು ಅವನ್ನು ಸಂಗ್ರಹಿಸುವದರಲ್ಲಿ ಬ್ಯಾಕ್ಸನ್ ನಿಸ್ಸೀಮ. ಅವನ ಈ ಚಟ (ಹವ್ಯಾಸ!) ಅವನ ಹೆಂಡತಿ ಅಲೀಸ್ ಬ್ಯಾಕ್ಸನ್‌ಳ ದುರಾದೃಷ್ಟಕ್ಕೆ ಮದುವೆಯಾದ ನಂತರವೂ ಹದಿನೈದು ವರ್ಷಗಳವರೆಗೂ ಅವಿರತವಾಗಿ ಸಾಗಿತು! ಹೆಂಡತಿ ವಿವಾಹ ವಿಚ್ಛೇದನ ಕೋರಿ ನ್ಯಾಯಾಲಯಕ್ಕೆ ಹೋದಳು.

ಕಬ್ಬಿಣದ ಸಾಮಾನುಗಳು ಇಷ್ಟೇ ಆಕಾರದ್ದವಾಗಿರಬೇಕು, ಇಂಥವೇ ವಿಶಿಷ್ಟ ಬಗೆಯದ್ದಾಗಿರಬೇಕು ಎಂಬ ನೀತಿ ನಿಯಮಗಳೇನೂ ಅವನಿಗೆ ಇದ್ದಂತೆ ಕಾಣಲಿಲ್ಲ. ಆ ನಗರದ 'ಮ್ಯಾನ್‌ಹೋಲ್'ಗಳ ಮುಚ್ಚಳಗಳನ್ನು ಹೆಚ್ಚು ಸಂಖ್ಯೆಯಲ್ಲಿ ಸಂಗ್ರಹಿಸಿದ್ದನಾತ. ಜಾರ್ಜಿಯಾದ ಅಟ್ಲಾಂಟಾದಲ್ಲಿನ ಅವನ ಮನೆಯಲ್ಲಿನ ಎಲ್ಲ ಕೊಠಡಿಗಳನ್ನೂ ಆ ಮುಚ್ಚಳಗಳೇ ಮುಕುರಿದ್ದವು!

ಬ್ಯಾಕ್ಸನ್, ಹ್ಯಾಪಮೋರೆ ಹಾಕಿಕೊಂಡು ನ್ಯಾಯಾಲಯದಲ್ಲಿ ನೀಡಿದ ಹೇಳಿಕೆ ಇದು: "ನಾನು ಹುಡುಗನಾಗಿದ್ದಾಗಿನಿಂಗಲೂ ಮ್ಯಾನ್‌ಹೋಲ್‌ಗಳ ಮುಚ್ಚಳ ಮತ್ತು ಇನ್ನಿತರ ಕಬ್ಬಿಣದ ಸಾಮಾನುಗಳನ್ನು ಪ್ರಪಂಚದ ಎಲ್ಲ-ಮೂಲೆಗಳಿಂದಲೂ ಸಂಗ್ರಹಿಸುತ್ತಿದ್ದೇನೆ. ವಿಯೆನ್ನಾದ 'ದ ಥರ್ಡ್ ಮ್ಯಾನ್' ಎಂಬ ಚಲನಚಿತ್ರದ ಚಿತ್ರೀಕರಣದಲ್ಲಿ ಅಂಥದೊಂದು ಮ್ಯಾನ್‌ಹೋಲ್‌ನ ಮುಚ್ಚಳವನ್ನು ಬಳಸಿಕೊಂಡಿದ್ದಾರೆ".

ಇದೆಲ್ಲವನ್ನೂ ಅವನು ನ್ಯಾಯಾಲಯದಲ್ಲಿ ಹೇಳಿಕೊಂಡರೂ ಉಪಯೋಗವಾಗಲೇ ಇಲ್ಲ. 'ಕ್ರೌರ್ಯ' ಎಂಬ ಕಾರಣ ನೀಡಿ ನ್ಯಾಯಾಲಯ ಶ್ರೀಮತಿ ಬ್ಯಾಕ್ಸನ್‌ಗೆ ವಿವಾಹ ವಿಚ್ಛೇದನ ನೀಡಿತು.

ಜರ್ಮನ್ ದೇಶದ ಗೃಹಿಣಿಯೊಬ್ಬಳ ಗಂಡ 'ಲೋಹದ ಕವಚ'ಗಳನ್ನು (ತನು ತ್ರಾಣ) ಅವರ ಮನೆಯನ್ನು ಪೂರ್ಣವಾಗಿ ಇಡುಕಿ ತುಂಬುವವರೆಗೂ ಸಂಗ್ರಹಿಸಿದ!

ನ್ಯಾಯಾಲಯದಲ್ಲಿ, ಅವನ ದುರಾದೃಷ್ಟದ ಹೆಂಡತಿ ಹೇಳಿಕೆ ನೀಡಿದುದಿದು: "ಈ ಯುದ್ಧ ಕವಚಗಳ ರಾಶಿಗಳ ಮಧ್ಯೆ ಕಷ್ಟದಿಂದ ಜಾಗ ಮಾಡಿಕೊಂಡು ನನ್ನ ಮನೆಗೆಲಸವನ್ನು ನಾನು ಮಾಡಬೇಕಾಗಿತ್ತು. ಕೆಲವೊಮ್ಮೆ ಮಧ್ಯರಾತ್ರಿಯ ಹೊತ್ತಿನಲ್ಲಿ ಯಾವುದೋ ಒಂದು ಲೋಹ ಕವಚ ನೆಲದ ಮೇಲೆ ಇದ್ದಕ್ಕಿದ್ದಂತೆ ಬಿದ್ದುಬಿಡುತ್ತಿತ್ತು! ಆಗ ಭಯಂಕರ ಶಬ್ದವಾಗುತ್ತಿತ್ತು! ಆಗ ನಿದ್ದೆಯಿಂದ ದಿಢೀರನೆ ಎಚ್ಚೆತ್ತು; ಹೆದರಿ ಹೆಪ್ಪಳಿಸಿ ಹೋಗಿ ಕಿರುಚಿಕೊಂಡು ಬಿಡುತ್ತಿದ್ದೆ. ನೆನಸಿಕೊಂಡರೆ ಈಗಲೂ ರಕ್ತ ಹೆಪ್ಪುಗಟ್ಟಿಹೋಗುತ್ತದೆ".

ಈ ವಿಚಿತ್ರ ಭಯಾನಕ ಪರಿಸ್ಥಿತಿಗೆ ಐದು ವರ್ಷಗಳ ವರೆಗೆ ಅವಳು ಹೇಗೋ ಹೊಂದಿಕೊಂಡು ಬಿಟ್ಟಿದ್ದಳೂ ಅನ್ನಿ. ಆಮೇಲೆ ಈ 'ಸಂಗ್ರಾಹಕ'ನನ್ನು ಅವನ ಯೋಧ ಕವಚಗಳ ಜೊತೆಗೇ ಇರಲು ಬಿಟ್ಟು ಅವಳು ಪೇರಿಕಿತ್ತಳು!

ಮೆಕ್ಸಿಕೋ ನಗರದ ಗೃಹಿಣಿಯೊಬ್ಬಳ ಹವ್ಯಾಸ ಜೀವಂತ ಹಾವುಗಳನ್ನು ಸಂಗ್ರಹಿಸುವುದು! ಅವಳು ಸಂಗ್ರಹಿಸಿದ್ದ ಈ ಹಾವುಗಳು ಅವಳ ಮನೆಯ ಮೂಲೆ ಮೂಲೆಗಳಲ್ಲೂ ಹರಿದಾಡುತ್ತಿದ್ದವು.

ಅವಳ ಗಂಡ ಹೇಳುವುದನ್ನು ಕೇಳಿ:

"ಸಣ್ಣ ಸಣ್ಣ ಹಾವುಗಳಾಗಿದ್ದರೆ ನಾನವನ್ನು ಮನಸ್ಸಿಗೆ ಹಚ್ಚಿಕೊಳ್ಳುತ್ತಿರಲಿಲ್ಲ ಅನ್ನಿ. ಪೂರ್ಣವಾಗಿ ಬೆಳೆದಿದ್ದ ಹೆಬ್ಬಾವೊಂದನ್ನು ಆಕೆ ಮನೆಗೆ ತಂದಾಗ ನನಗನ್ನಿಸಿತು- ಇನ್ನು ಇವಳೊಡನೆ ಸಂಸಾರ ಮಾಡಲು ಸಾಧ್ಯವಿಲ್ಲ ಎಂದೂ".

ಸಂಗ್ರಹ: ಜೆ. ವಿ. ಶಶಿಧರ್

ತ್ತಲೇ ಒಳಗೆ ಕಾಲಿಟ್ಟೆ. ಆಕಸ್ಮಿಕವಾಗಿ ವರಾಂಡದ ಪಕ್ಕದ ರೂಮಿನ ಕಡೆ ನೋಡಿದಾಗ ದಿಗ್ಭ್ರಾಂತಳಾದೆ. ಚಿಕ್ಕಪ್ಪ ಹಾಸಿಗೆಯ ಮೇಲೆ ಕುಳಿತೇ ಇದ್ದಾರೆ! ಅವರ ಪಕ್ಕದಲ್ಲಿ ಸೀನಿ ಹಾಗೂ ಚಂದ್ರು!!

ಹಾಗಾದರೆ... ಹಾಗಾದರೆ... ಚಿಕ್ಕಪ್ಪ ಸತ್ತಿಲ್ಲವೇ? ಚಿಕ್ಕಪ್ಪ ಬದುಕಿದ್ದಾರೆಯೇ? ಹಾಗಾದರೆ...., ನಾರಾಯಣನ ಪಂಡತಿಯ ತಾರಕ ಸ್ವರ ನನ್ನನ್ನು ಬೆಚ್ಚುವಂತೆ ಮಾಡಿತು. 'ನಾರಾಯಣನೇ.... ಅಯ್ಯೋ ದೇವರೇ - ಅವನಿಗೇನಾಗಿತ್ತು ಸಾಯುವುದಕ್ಕೆ? ಸಾಯುವ ವಯಸ್ಸೇ ಅವನದು? ನನಗಿಂತ ಎರಡು ವರ್ಷ ಚಿಕ್ಕವನು. ಮದುವೆಯಾಗಿ ಒಂದೂವರೆ ವರ್ಷವಾಗಿರಬೇಕು ಅಷ್ಟೇ' ಅಂದುಕೊಂಡೆ.

ಆಕ್ಸಿಡೆಂಟ್ ಆಗಿತ್ತು ಎನ್ನುವುದು ಅನಂತರ ತಿಳಿಯಿತು. ಬೆಳಿಗ್ಗೆ 11 ಘಂಟೆಗೆ ಸ್ಕೂಲಿಗೆ (ಅವನು ಹೈಸ್ಕೂಲ್ ಟೀಚರ್ ಆಗಿದ್ದು ಅದೇ ಬಿಲ್ಡಿಂಗಿನಲ್ಲಿ ಜೂನಿಯರ್ ಕಾಲೇಜ್ ಬೆಳಿಗ್ಗೆ 8ರಿಂದ 11-30ವರೆಗೆ ನಡೆಯುತ್ತದೆ) ಸೈಕಲ್ ಮೇಲೆ ಹೋಗುತ್ತಿದ್ದಾಗ ಲಾರಿಗೆ ಸಿಕ್ಕು ಸ್ಥಳದಲ್ಲೇ ಸಾವು ಸಂಭವಿಸಿತ್ತು. ಆಸ್ಪತ್ರೆಯಲ್ಲಿ ಪೋಸ್ಟ್‌ಮಾರ್ಟಂ ಮುಗಿದು ಈಗೊಂದು ಅರ್ಧಘಂಟೆ ಮೊದಲು ಹೆಣವನ್ನು ಮನೆಗೆ ತರಲಾಗಿತ್ತು.

ಇನ್ನು ಹೇಳುವುದು ಏನಿದೆ? ತಂದೆ ಸತ್ತರೆ ಟೆಲಿಗ್ರಾಂ ಕೊಡು ಎಂದು ಯಾರಿಗೆ ಹೇಳಿ ಹೋಗಿದ್ದರೋ ಅವನದೆ ಶವಸಂಸ್ಕಾರಕ್ಕೆ ಅವನ ಅಣ್ಣಂದಿರು ಬಂದಿರುವದು ದುರದೃಷ್ಟವಲ್ಲವೆ ಮತ್ತೇನು?

**ಭಾರತಿ ದಿವಾಕರ್**

**ಈ** ಘಟನೆ ಸುಮಾರು ಇಪ್ಪತ್ತು ವರ್ಷಗಳ ಹಿಂದಿನದಾದರೂ, ಇಂದಿಗೂ ಮನಸ್ಸಿನಲ್ಲಿ ಅಳಿಯದೇ ಉಳಿದಿದೆ. ಆಗ ಗುಲಬರ್ಗದಲ್ಲಿ ವಾಸಿಸುತ್ತಿದ್ದೆವು. ನನ್ನ 5 ವರ್ಷದ ಪುಟ್ಟ ತಂಗಿ ಒಂದು ದಿನ ಇದ್ದಕ್ಕಿದ್ದ ಹಾಗೆ ಆಡುತ್ತಿದ್ದವಳು ಮೂರ್ಛೆಬಿದ್ದು ಬಾಯಲ್ಲಿ ನೊರೆ ಬರಲಾರಂಭಿಸಿತು. ಎಲ್ಲರಿಗೂ ಹೆದರಿಕೆಯೋ ಹೆದರಿಕೆ.

ಸ್ವಲ್ಪ ದೂರದಲ್ಲಿದ್ದ ಶಿಶುತಜ್ಞರೊಬ್ಬರ ಮಗುವನ್ನು ಕರೆದುಕೊಂಡು ಹೊರಟೆವು. ಸರದಲ್ಲಿ ಹಣವನ್ನೇನೂ ಒಯ್ದಿರಲಿ ವೈದ್ಯರು ಮಗುವನ್ನು ಪರೀಕ್ಷಿಸಿ ಒಂದು ಇ ಕ್ಷನ್ ಕೊಟ್ಟು, ಒಂದೆರಡು ಗಂಟೆಗಳ ನಂ ಮಗುವನ್ನು ಕರೆದೊಯ್ಯಬಹುದೆಂದೂ ಆ ಅದಕ್ಕೂ ಮೊದಲು ಅವರ ಫೀಸನ್ನು ಕೊ ಮಗುವನ್ನು ಮನೆಗೆ ಕರೆದುಕೊಂಡು ಹೋ ಬಹುದೆಂದೂ ಹೇಳಿದರು. ಮಗುವನ್ನು ಮ ಕರೆದೊಯ್ದು ಆಗಿಂದಾಗಲೇ ಹಣ ತಂದು ಡುತ್ತೇವೆಂದು ಎಷ್ಟು ಸಲ ಹೇಳಿಕೊಂಡ ಅವರು ತಮ್ಮ ಹಟ ಬಿಡಲಿಲ್ಲ. ಆಗ ನಿವಾ ವಿಲ್ಲದೆ ಮತ್ತೊಬ್ಬರನ್ನು ಮನೆಗೆ ಕಳು ಅವರ ಹಣವನ್ನು ಕೊಟ್ಟು ಮಗುವನ್ನು ಮ ಕರೆದುಕೊಂಡು ಹೋದೆವು. ಇದಾದ ಸರಿಯ ಒಂದು ತಿಂಗಳ ನಂತರ ಮಗುವಿಗೆ ಮಲರು ಮರುಕಳಿಸಿದಾಗ ಇನ್ನೊಬ್ಬ ಡಾಕ್ಟರರ ಹೋದೆವು. ಅವರು ಮಗುವನ್ನು ಪರೀ ದಾಗ ಅದಕ್ಕೆ ಪಾರ್ಶ್ವವಾಯು ತಗಲಿರುವ ಗಿಯೂ ದಿನಾಲು ತಾವೇ ಮನೆಗೆ ಬಂದು ಚ ನೀಡುವುದಾಗಿಯೂ ಹೇಳಿದರಲ್ಲದೆ ದಿನ ಮುಂಜಾನೆಗೊಮ್ಮೆ ಸಂಜೆಗೊಮ್ಮೆ ಬ ಮಗುವಿನ ಪರಿಸ್ಥಿತಿ ನೋಡಿ, ಚಿಕಿತ್ಸೆ ವ ನಮಗೆಲ್ಲಾ ಧೈರ್ಯ ನೀಡಿ ಹೋಗುತ್ತಿದ್ದ ಅವರ ಫೀಸಿನ ಬಗ್ಗೆ ವಿಚಾರಿಸಿದಾಗ ಅವ "ಮಗುವಿಗೆ ಗುಣವಾಗಲಿ, ಅನಂತರ ತೆ ಕೊಳ್ಳುವೆ," ಎನ್ನುತ್ತಿದ್ದರು. 20-25 ದಿವಸ ನಂತರ ಮಗುವಿನ ಸ್ಥಿತಿ ಉಲ್ಬಣಗೊಂಡಿ ಡಾಕ್ಟರರಿಂದ ಮಗುವನ್ನು ಉಳಿಸಲಾಗಲಿ ಆಗ ಅವರು ಕಣ್ಣೀರಿಟ್ಟಿದ್ದನ್ನು ನಮಗೇ ನೋ ಲಾಗಲಿಲ್ಲ. ಕೆಲವು ದಿನಗಳ ನಂತರ ಅ ಆಸ್ಪತ್ರೆಗೆ ಹೋಗಿ ಫೀಸಿನ ಬಗ್ಗೆ ವಿಚಾರಿಸಿ ಅವರು, "ನನ್ನ ಕೈಯಿಂದ ಒಂದು ಮಗುವ ಉಳಿಸಲಾಗಲಿಲ್ಲ, ಇನ್ನಾವ ಕೈಯಿಂದ ವನ್ನು ಪಡೆಯಲಿ?" ಎಂದು ನಮ್ಮನ್ನು ತಿ ಕಳುಹಿಸಿಬಿಟ್ಟರು.

**ಬಿ.ವೆಂಕಟೇಶಮೂ**

ಹಿಂದಿ ಕಥೆ

# ಹೆಸರಿಲ್ಲದ ಕಥೆ

ಮೂಲ: ಭೇದಿಲಾಲ ಗುಪ್ತ
ಅನುವಾದ: ಅಶೋಕ ಹಾಸ್ಯಗಾರ

ಚಂದ್ರಭಾನನ ಮನಸ್ಸು ಹೊಯ್ದಾಡುತ್ತಿದೆ. ...ತಲ್ಲಿ ನಿಲ್ಲುತ್ತಿಲ್ಲ. ದೃಷ್ಟಿ ಕೋಣೆಯಾಚೆಯ ...ಂಗಳವನ್ನು ದಾಟಿ, ಲೋಹದ ಗೇಟನ್ನು ...ಯ್ದು ಸ್ವಲ್ಪ ದೊಡ್ಡದಾದ ಗಲ್ಲಿಯನ್ನು ತಲು...ತ್ತದೆ. ಅಲ್ಲೇನಿದೆ? ಊಹುಂ, ಏನೂ ಇಲ್ಲ. ...ಂಥ ರಾತ್ರಿಯ ಹೊತ್ತಿನಲ್ಲಿ ಏನೊಂದೂ ...ರಲು ಸಾಧ್ಯವಿರಲಿಲ್ಲ.

ಯಾವ ಕೋಣೆಯಲ್ಲಾತ ಜೀವನದ ಅರ್ಧ ...ಗವನ್ನು ಕಳೆದಿದ್ದನೋ, ಅದು ಈಗ ಕೈದಿ ...ಕೋಣೆಯಂತಾಗಿದೆ. ದೃಷ್ಟಿಹರಿದಲ್ಲೆಲ್ಲಾ ...ಡ್ಡದೊಡ್ಡ ಗುಪ್ಪೆಗಳೇ ಗೋಚರಿಸುತ್ತಿವೆ. ...ಕೋಣೆಯ ಸಾಮಾನುಗಳೆಲ್ಲ ಪೋಲೀಸರು ...ತ್ತ ಹರಡಿಹೋಗಿದ್ದಾರೆ. ಪ್ರತಿಯೊಂದು ...ಸ್ತುವನ್ನೂ ಎತ್ತೆತ್ತಿ ನೋಡಿದ್ದಾರೆ. ಉಪ್ಪಿನ ...ಯಿಯ ಭರಣಿ, ಕಾಜಿನ ಲೋಟ ಎರಡೂ ...ಡೆದುಹೋಗಿವೆ. ಕೋಣೆಯ ಮಾಳಿಗೆಗೆ ಹಗ್ಗ ...ಂದ ಕಟ್ಟಿದ ಕಟ್ಟಿಗೆಯ ಪೆಟ್ಟಿಗೆಯ ಬಾಗಿಲು ...ಯುವ ಬದಲು ಒಡೆದು ಹಾಕಿದ್ದಾರೆ. ...ಲೀಸರು ಹಾಸಿಗೆಯ ಒಂದೊಂದು ಪದ...ನ್ನೂ ಹಿಂದೆ ಮುಂದೆ ಮಾಡಿ ನೋಡಿದ್ದಾರೆ.

ಸಾಮಾನುಗಳೆಲ್ಲ ಅಸ್ತವ್ಯಸ್ತವಾಗಿ ಹರಡಿಕೊಂಡಿವೆ. ದೀಪವಾರಿಸಿ ಮಲಗಬೇಕು ಎಂದುಕೊಂಡರೂ ಹರಡಿದ ಸಾಮಾನುಗಳನ್ನೆಲ್ಲ ಇನ್ನೊಮ್ಮೆ ಪರೀಕ್ಷಿಸಿ ನೋಡಬೇಕು ಎಂಬ ವಿಚಾರವೂ ಮನಸ್ಸಿನಲ್ಲಿ ಉಂಟಾಯಿತು. ಹೊಸ ಸೂಟ್‌ಕೇಸಿನ ಚಾವಿ ಮುರಿದಿದೆ. ಅದರೊಳಗಿನ ವಸ್ತುಗಳೆಲ್ಲ ಕಿತ್ತೆಸೆಯಲ್ಪಟ್ಟಿವೆ. ರಾಮಜೀಆವನನ ಎರಡು ಕುರ್ತಾಗಳು, ಗಂಜಿ ಹಾಕಿದ್ದ ಒಂದು ಧೋತರ ಮತ್ತು ಕಾಳಿ ಮಾತೆಯ ಒಂದು ಫೋಟೋ....

ರಾಮಜೀಆವನ ಆ ಫೋಟೋವನ್ನು ಕೆಲ ದಿನಗಳ ಮೊದಲಷ್ಟೇ ಖರೀದಿಸಿದ್ದ. ಊರಿಗೆ ಹೋಗುವಾಗ ಅದನ್ನು ಜತೆಗೊಯ್ದುದರಾಯಿತೆಂದುಕೊಂಡಿದ್ದನಾದರೂ ರಾಮಜೀಆವನ ಬಹಳ ದಿನಗಳಿಂದ ಊರಿಗೆ ಹೋಗುವ ಕುರಿತು ಮಾತೇ ಆಡಿರಲಿಲ್ಲ. ಇಂದು ಮುಂಜಾನೆಯಷ್ಟೇ ಕೇಳಿದ್ದ, ''ಮಾಸ್ತರೆ, ಕಾಶ್ಮೀರಕ್ಕೆ ಹೋಗಲು ಗಾಡಿ ಚಾರ್ಜೆಷ್ಟು?'' ಎಂದು.

ಮನುಷ್ಯನ ಮನಸ್ಸು ಎಷ್ಟು ವಿಚಿತ್ರ ಎಂದೆನಿಸಿತ್ತು ಚಂದ್ರಭಾನನಿಗೆ. ಈ ಹಳ್ಳಿಗಮಾರ ರಾಮ

ಜೀಆವನ ಕಾಶ್ಮೀರದ ಬಗ್ಗೆ ಯೋಚಿಸುತ್ತಾನೆ! ಆಗಲಾರದ್ದರ ಬಗ್ಗೆ ಯೋಚಿಸುವುದರ ಅರ್ಥ ಪೆಂದರೆ ಅನರ್ಥವೇ ಸೈ.

ಚಂದ್ರಭಾನ ಹೇಳಿಬಿಟ್ಟ, ''ಇರೋದು ಅರವತ್ತು ರೂಪಾಯಿ ನೌಕರೀಲಿ, ಕೇಳೋದು ಕಾಶ್ಮೀರದ ಗಾಡಿ ಚಾರ್ಜು?''

ಈ ವ್ಯಂಗ್ಯದಿಂದ ರಾಮಜೀಆವನನ ಮುಖದ ಮೇಲೆ ಯಾವ ಪ್ರತಿಕ್ರಿಯೆಯೂ ಕಂಡು ಬರಲಿಲ್ಲ, ಆದರೆ ಈ ಮಾತು ಮಾತ್ರ ಅವನ ಮನಸ್ಸಿನಲ್ಲಿ ಸರ್ಪದಂತೆ ಸುತ್ತುಹಾಕಿಕೊಂಡು ಉಳಿದುಬಿಟ್ಟಿತು. 'ಹಣವೇ ಎಲ್ಲವೂ- ಮನುಷ್ಯ, ಮನುಷ್ಯನ ಮರ್ಯಾದೆ ಎಲ್ಲವೂ' ಎಂದಾತ ಯೋಚಿಸಿರಲಿಕ್ಕಿಲ್ಲವೇ?

ಚಂದ್ರಭಾನ ಕೂತಂತೆಯೇ ಕೂತು ಬೇಸರಗೊಂಡಿದ್ದ. ಆತ ಆಳವಾದ ಉಸಿರೆಳೆದು, ಯೋಚಿಸಿದ-ದುಡ್ಡೇ ಎಲ್ಲವೂ ಅಲ್ಲ, ಕಾಲ ಕೆಲ ಹೊತ್ತಿನ ಈ ಭ್ರಮೆಯನ್ನುಂಟು ಮಾಡಿದೆ ಅಷ್ಟೆ. ಮನುಷ್ಯನ ಪರಿಸ್ಥಿತಿಗೆಲ್ಲ ಅವನ ವ್ಯವಹಾರವೆ ಕಾರಣ.

ಈ ಯೋಚನೆಯಲ್ಲಿದ್ದಂತೆಯೆ ಅವನಿಗೆ ಗಾಂಗೂಲಿಬಾಬುವಿನ ನೆನಪಾಯಿತು. ಆತ ಕೇಳಿದ್ದ, 'ಮಾಸ್ತರೆ, ನೀವೇ ಹೇಳಿರಿ- ರಾಮಜೀಆವನನಂಥವನೂ ಹೀಗೆ ಮಾಡಬಹುದೆಂದರೆ ನಾವು ಯಾರ ಮೇಲೆ ವಿಶ್ವಾಸವಿಟ್ಟು ನಮ್ಮ ಧಂದೆ ನಡೆಸಬೇಕು?'

ಚಂದ್ರಭಾನನಿಗೆ ಕತ್ತಲೆಯಲ್ಲಿ ಏನೋ ಮೊದಲು ಸಾವಕಾಶವಾಗಿ ಬಳಿಕ ಜೋರಾಗಿ ಓಡಿ ಒಂದೇ ಜಿಗಿತಕ್ಕೆ ಹೊರಗೆ ಹಾರಿಹೋದಂತೆ ಅನಿಸಿತು. ಬಹುಶಃ ಅದೇ 'ವಿಶ್ವಾಸ' ಇರಬೇಕು. ಗಾಂಗೂಲಿಬಾಬುವಿನದೋ.... ತನ್ನದೋ... ರಾಮಜೀಆವನನದೋ?

ರಾಮಜೀಆವನ ಹೀಗೆ ಮಾಡಿದ್ದು ಒಳ್ಳೆಯದೇನಲ್ಲ.

ಹಳೆ ಮನೆಯ ಮೂಲೆಯಲ್ಲಿನ ಈ ಕೋಣೆಯಲ್ಲಿ ಎಂದಿನಂತೆ ಇಂದೂ ಇಲಿಗಳು ಮಾಡಿದ ಧಡಭಡಕ್ಕೆ ಚಂದ್ರಭಾನ ಬೆಚ್ಚಿ ಬಿದ್ದ. 'ಕಟ್ ಕಟ್' ಎಂದು ಬಾಗಿಲು ಬಡಿದ ಸದ್ದಾದಾಗಲೂ ಆತ ಹೀಗೇ ಗಾಬರಿಗೊಂಡಿದ್ದ. ಆಗ ದೀಪವಾರಿಸಿ ಮಲಗಲು ಹೊರಟಿದ್ದ ಚಂದ್ರಭಾನ ಬಾಗಿಲು ಬಡಿಯುತ್ತಿರುವಾತ ರಾಮಜೀಆವನನೇ ಇರಬೇಕೆಂದುಕೊಂಡಿದ್ದ. ಬಾಗಿಲು ತೆರೆದಾಗ ಅಂಗಳದಲ್ಲಿ ಪೋಲೀಸು ಪೇದೆಗಳು, ಇನ್‌ಸ್ಪೆಕ್ಟರ್ ಮತ್ತು ರಾಮಜೀಆವನ ಕೆಲಸ ಮಾಡುತ್ತಿದ್ದ ಮಿಲ್ಲಿನ ಮಾಲಿಕ ಗಾಂಗೂಲಿ





ಬಾಬು ಎದುರು ನಿಂತಿರುವುದನ್ನು ನೋಡಿದ್ದ.

ಅನೀರಿಕ್ಷಿತತೆಯೆಂದರೆ ಹೀಗೆಯೆ

"ರಾಮಜೀಆವನ ಇಪ್ಪತ್ತು ಸಾವಿರ ರೂಪಾಯಿ ಸಹಿತ ನಾಪತ್ತೆಯಾಗಿದ್ದಾನೆ!" ಎಂಬ ಸುದ್ದಿ ಕೇಳಿ ಚಂದ್ರಭಾನನಿಗೆ ನರಗಳಲ್ಲಿನ ರಕ್ತ ಸಂಚಾರ ನಿಂತು ಹೋದಂಥ ಅನುಭವ ವಾಗಿತ್ತು.

"ಹ್ಞಾ! ಇಪ್ಪತ್ತು ಸಾವಿರ," ಎಂದಿದ್ದ ಗಾಂಗೂಲಿಬಾಬು ಕೈಸನ್ನೆಯಿಂದ, "ಅವನು ಇಷ್ಟು ಸಣ್ಣವನಿದ್ದಾಗಿನಿಂದ ಇಲ್ಲಿಯೇ ಇದ್ದ. ಅವನ ಹತ್ತಿರ ನಾನು ಬ್ಯಾಂಕಿಗೆ ಜಮಾ ಮಾಡಲು ಲಕ್ಷರೂಪಾಯಿಗಳವರೆಗೂ ಕೊಟ್ಟಿದ್ದಿದೆ. ಅವನು ಒಂದು ಪೈಸೆಯನ್ನೂ ಎಂದೂ ಅತ್ತಿತ್ತ ಮಾಡಿರಲಿಲ್ಲ..." ಎಂದಿದ್ದ.

ಪೋಲೀಸರು ಕೋಣೆಯನ್ನೆಲ್ಲ ಝಡತಿ ಮಾಡುತ್ತಿರುವಾಗ ಚಂದ್ರಭಾನನಿಗೆ 'ಅವನನ್ನು ಯಾಕಾದರೂ ತನ್ನ ಜೊತೆ ಇರಿಸಿಕೊಂಡೆ?' ಎಂಬ ಪ್ರಶ್ನೆ ಪದೇ ಪದೇ ಏಳುತ್ತಿತ್ತು. 'ಅವನೋ ಒಬ್ಬ ಚಪ್ರಾಸಿ, ನಾನೋ ಒಬ್ಬ ಮಾಸ್ತರ,.... ಭೂಮ್ಯಾಕಾಶಗಳ ಅಂತರ.'

ಹೀಗೆ ಯೋಚಿಸುತ್ತಿರುವಾಗಲೇ ಅವನ ದೃಷ್ಟಿ ಅಂಗಳದ ಮೂಲೆಯಲ್ಲಿದ್ದ ಕೋಣೆ ಯೆಡೆ ಹೊರಳಿತು. ಅಲ್ಲಿ ಪ್ರತಾಪಭಾಯಿಯ ಹೆಂಡತಿ ಬಾಗಿಲ ಚೌಕಟ್ಟಿಗೆ ಒರಗಿ ನಿಂತಿದ್ದಳು. ಅವಳ ದೃಷ್ಟಿಯಲ್ಲಿ ತಾನು ಎಷ್ಟು 'ಒಳ್ಳೆಯವ' ನಾಗಿದ್ದನೆಂಬುದು ನಿರ್ವಿವಾದದ ಮಾತೇ ಸರಿ. ಅವಳು ಏನೆಂದುಕೊಂಡಾಳು? ವಂಶೀಲಾಲಾ ಮತ್ತು ಈ ಮನೆಯ ಮಾಲಿಕ ಬದ್ರಿಪ್ರಸಾದರ ದೃಷ್ಟಿಯಲ್ಲೂ ತಾನು ಮೊದಲಿನಂತೆಯೆ ಉಳಿಯಬಹುದೆ?

ಹೆಸರು ಕೆಟ್ಟಿತ್ತು.

ನೀರಲ್ಲಿ ಹೋಮ ಮಾಡಿದಂತಾಯಿತಲ್ಲ ಇದು. ರಾಮಜೀಆವನನ ತೊಂದರೆಯನ್ನರಿತು. 'ಹಳ್ಳಿಯಿಂದ ಈ ಶಹರಕ್ಕೆ ಕೆಲಸ ಮಾಡಲು ಬಂದಿದ್ದೀಯಾ ಇಷ್ಟೂ ಸಹಾಯ ಮಾಡದಿದ್ದರೆ ಹೇಗೆ?' ಎಂದು ಹೇಳಿ ಇರಿಸಿಕೊಂಡಿದ್ದ. 'ಜೀವ-ನಾನಂತೂ ಸಾಗಿಸಲೇಬೇಕು, ಇಲ್ಲೇ ಹಾಸಿಗೆ ಹಾಕ್ಕೊಂಡು ಮಲಕ್ಕೋ' ಎಂದಿದ್ದ. ಅದರ ಪರಿಣಾಮ ಇದು...

ಚಂದ್ರಭಾನನ ಮನಸ್ಸೀಗ ಅಶಾಂತ ವಾಯಿತು.

ಪೋಲೀಸರು ಝಡತಿ ಕಾರ್ಯ ಮುಗಿಸಿ ರಾಮಜೀಆವನನ ಕುರಿತ ಪುರಾವೆಗಳೊಂದಿಗೆ ಹೊರಟು ಹೋದರು. ಆಗ ಅಲ್ಲಿ ಆ ವಠಾರದ ಪ್ರತಾಪಭಾಯಿ, ವಂಶಿಲಾಲಾ, ಬದ್ರಿಪ್ರಸಾದ ನೆರೆದರು. ಪ್ರತಾಪಭಾಯಿಗೆ ಸಭೆಗಿಭೆ ಎಂದರೆ ಆಯಿತು. ಪ್ರಶ್ನೆಗಳನ್ನೆಸೆದನೇ. ಆತ ಇಲ್ಲಿ ಶಂಕೆಯಿಂದೆಂಬಂತೆ. "ಆದರೆ ಮುಂಜಾನೆ ನಾನು ರಾಮಜೀಆವನನ್ನು ನೋಡಿದ್ದೆನಲ್ಲ.." ಎಂದ.

"ರಾಮಜೀಆವನ ಎಂದಿನಂತೆ ಹಣ ತೆಗೆದುಕೊಂಡು ಬ್ಯಾಂಕಿಗೆ ಹೋಗಿ, ಬ್ಯಾಂಕು ಮುಚ್ಚಿ ಬಹಳ ಹೊತ್ತಾದರೂ ವಾಪಸ್ಸು ಬಾರದಾದಾಗ ಈ ಎಲ್ಲ ಗಡಿಬಿಡಿ ಶುರು ಆಗಿರಬೇಕು" ಎಂದ ಚಂದ್ರಭಾನ.

"ಆತ ಹಣ ತೆಗೆದುಕೊಂಡು ಓಡಿಹೋದನೆಂದು ಹೇಗೆ ಹೇಳಲು ಸಾಧ್ಯ?" ಕೇಳಿದ ವಂಶೀಲಾಲಾ.

"ಹೇಗೆ ಸಾಧ್ಯವಿಲ್ಲ ಅಂತೀರಿ? ಬ್ಯಾಂಕಿನಲ್ಲಿ ರಾಮಜೀಆವನನ ಕುರಿತು ಹೋಗಿ ಕೇಳಿರಬೇಕು. ಆತ ಹಣವನ್ನು ಅಲ್ಲಿ ಜಮಾ ಮಾಡಿರಲಿಕ್ಕಿಲ್ಲ," ಚಂದ್ರಭಾನ ತನ್ನ ಅಸಹನೆಯನ್ನೆಲ್ಲ ವಂಶೀಲಾಲಾನ ಮೇಲೆ ಕಾರಿದ.

ಎಲ್ಲರೂ ಸುಮ್ಮನಾದರು. ಆದರೆ ಪ್ರತಾಪ ಭಾಯಿ ಮತ್ತೆ "ಏನ್ರಿ, ಎಷ್ಟೋ ವರ್ಷಗಳಿಂದ ರಾಮಜೀಆವನ ಇಲ್ಲಿ ಕೆಲಸ ಮಾಡ್ತಾ ಬಂದಿದ್ದಾನೆ. ಒಂದು ಪೈಸೆಯ ಫರಕು ಕೂಡ ಬಂದಿಲ್ಲ. ಆದರೆ ಎಲ್ಲ ಅವನದೆ ದೋಷ ಅನ್ನುವಂತೂ ಇಲ್ಲ. ಹೇಳಿ ಹಾಗಾದರೆ ಅರವತ್ತು ರೂಪಾಯಿಯಲ್ಲಿ ಮನುಷ್ಯನ ವಿಶ್ವಾಸವನ್ನು ಖರೀದಿ ಮಾಡಲಾಗುತ್ತದೆಯೇ ಹೇಳಿ."

"ಹಾಗಿದ್ದರೆ ಸರಿ," ಈವರೆಗೆ ಮೌನಿಯಾಗಿದ್ದ ಬದ್ರಿಪ್ರಸಾದ ಹೇಳತೊಡಗಿದ, "ರಾಮ

## 'ದಕ್ಷಿಣೆ'

ಸರಕಾರದ ಕೆಲಸ
ದೇವರ ಕೆಲಸ
ಅದರೆ
ದೇವರ ಕೆಲಸಕ್ಕೆ
ದಕ್ಷಿಣೆ!

'ರಂ'. ಪಕ್ರೆ

ಜೀವನನಿಗೆ ತನ್ನ ಮಕ್ಕಳಮರಿಗಳ ಭವಿತವ್ಯದ ಯೋಚನೆಯೂ ಇರಬೇಕಲ್ಲ..'

''ನೋಡಿ, ಪೋಲೀಸು - ಕಾನೂನುಗಳು ಇವನ್ನೆಲ್ಲ ಕೇಳುವುದೇ ಇಲ್ಲ. ಅವರಿಗೆ ಬಿಟ್ಟಿನಲ್ಲಿ 'ಆಸಾಮಿ' ಬೇಕು. ಪಾಪ. ಮಾಸ್ತರರಿಗೆ ಸುಮ್ಮನೆ ತೊಂದರೆ. ಭೂತ ಹೊಡೆಯೋದಿಲ್ಲ. ಅದು ಬರೀ ತೊಂದರೆ ಕೊಡೋದು ಮಾತ್ರ ನಿಜ. ರಾಮಜೀಆವನ ಈ ಹಣ ತೆಗೊಂಡು ತನ್ನ ಊರಿಗೆ ಹೋಗೋದಿಲ್ಲ. ಮುಂಬಯಿಗೆ ಹೋಗ್ತಾನೆ. ಹೂಂ, ಒಂದಿನಾ ಅದೇ ಹೇಳ್ತಿದ್ದ, 'ಊರು ಅಂದರೆ ಮುಂಬಯಿ. ಅಲ್ಲಿ ಫಿಲ್ಮ್ ಮಾಡ್ತಾರೆ.. ಅಬ್ಬಾ, ಶೋಕಿ ಅಂದರೆ ಅಲ್ಲಿಯವರದೆ..' ''

ಅವರೆಲ್ಲ ಸುಮ್ಮನಾದರು. ಮುಂದೇನು ಮಾತನಾಡಲು ವಿಷಯವೇ ಇರಲಿಲ್ಲ. ಪ್ರತಾಪ ಭಾಯಿ, ''ವಿಶ್ವಾಸಕ್ಕೊಂದು ಆಶ್ರಯವೇ ಒಂದೇ ಇಲ್ಲ. ಮಾಸ್ತರರಿಗೆ ಏಷ್ಟು ತೊಂದರೆಯಾದರೇನು? ಆತ ಮಾತ್ರ ದುಡ್ಡು ಮಾಡಿಕೊಂಡು ಹೋದ.'' ಎಂದೆನ್ನುತ್ತ ಹೊರಟುಬಿಟ್ಟ. ಉಳಿದವರು ಅವನ ಮಾತಿಗೆ ಸೈಗುಡುತ್ತ ದಾರಿ ಹಿಡಿದರು.

ದೂರದ ರಾಜವಾಡೆಯ ಗಡಿಯಾರ ಮೂರು ಗಂಟೆಗಳನ್ನು ಹೊಡೆದುಕೊಂಡಿತು.

ಹೊರಗಡೆ ಗಲ್ಲಿಯಲ್ಲಿ ದಡಬಡ ಸದ್ದಾದಾಗ ಚಂದ್ರಭಾನ ಸಿ.ಆಯ್.ಡಿ. ಮಂದಿ ಇಲ್ಲಿ ತಿರುಗಾಡುತ್ತಿರಲಿಕ್ಕಿಲ್ಲವಷ್ಟೆ ಎಂದು ಗಾಬರಿಗೊಂಡ.

[illegible] ರಸ್ತೆ ಗುಡಿಸುವ ಕಾಯಕ ನಡೆಸಿದ್ದ.

[illegible] ಹೊತ್ತಿಗೆ ಮಾಡಿನಿಂದ ಬೆಕ್ಕೊಂದು ಹಾರಿ ಹೋಯಿತು.

ಚಂದ್ರಭಾನ ಎದರು ಎದ್ದುನಿಂತ. ಅವನ ಮೈಮೇಲೆ ಮುಳ್ಳು ಬಂದಿದ್ದವು. ಎದೆ ಹೊಡೆದುಕೊಳ್ಳುತ್ತಿತ್ತು. [illegible] ಹಿಡಿದುಕೊಂಡನಾದರೂ ಕಾಲುಗಳು [illegible] ಅನುಭವ ಅವನಿಗೆ [illegible] ಒಂದು ಹೊತ್ತು [illegible] ಅಲ್ಲೇ ಕುಸಿದುಬಿಟ್ಟ.

[illegible] ಗಳು ಅವನ ಮನಸ್ಸಿನೊಳಗೆ [illegible] ನಡೆದಿದ್ದವು.

'ರಾಮಜೀಆವನ ಊರಿಗೆ ಹೋಗಲಾರ...'

ರಾಮಜೀಆವನ ಹಣ ತೆಗೆದುಕೊಂಡಿಲ್ಲ, ಇಲ್ಲ. ಇಲ್ಲ....'

'ಅವನು [illegible]. ಮುಂಬಯಿಗೆ, ಹೋಗಬಹುದು..... ಅವನು.....'

''ನಂಬಿಕೆಯ ಬೆಲೆ ಅರವತ್ತು ರೂಪಾಯಿಗಳಲ್ಲ.''

ಚಂದ್ರಭಾನ ತಲೆ ಅಲ್ಲಾಡಿಸಿ - 'ಇಲ್ಲ' ಎಂದ.

ಅಕಸ್ಮಾತ್ತಾಗಿ ಅಂಗಳದ ಮೂಲೆಯ, ಕತ್ತಲು ಕವಿದ ಬಚ್ಚಲು ಮನೆಯತ್ತ ಆತನ ದೃಷ್ಟಿ ಹೊರಳಿತು. ಅವನಿಗೆ ಅಲ್ಲೊಂದು ಅಪರಿಚಿತ ಮುಖ ಕಾಣಿಸಿತು.

ಬಹಳ ಹೊತ್ತು ಧೇನಿಸಿಕೊಂಡ ಮೇಲೆ, ''[illegible] ಬರಗ...'' ಎಂದ ಚಂದ್ರಭಾನ.

ರಾಮಜೀಆವನ ಕಚೇರಿಯ ಕ್ವಾರ್ಟರ್ [illegible] ದಿನ ಇಲ್ಲಿಗೆ ಬಂದಿದ್ದ ಕಪ್ಪು ಮುಖ, ಆಕಾಶದತ್ತ ನೋಡುವ ಕಣ್ಣುಗಳು. ಮುಖದ ಮೇಲೆ [illegible] ಗೆರೆಗಳು. ತಲೆ ಮೇಲೆ ಬಿರುಸಾಗಿ [illegible] ಬಿಳಿ ಕೂದಲುಗಳು, ಒಂದು [illegible].

ರಾಮಜೀಆವನ ಕಾಳೀಚರಣನನ್ನು ಕರೆ ತಂದ ದಿನ ಅವರಿಗೆ ಚಹಾ-ಪಾನಿ, ಬೀಡಿ ಪಾನ್‌ಗಳನ್ನಿತ್ತು, ನಂತರ 'ಮಾಸ್ತರೆ, ಇವರು ಕಾಳೀಚರಣ ಬಾಬು. ಪಾಪ, ಇವರ ತಲೇ ಮೇಲೆ ತುಂಬಾ ಹೊರೆಯಿದೆ!' ಎಂದಿದ್ದ.

ಅವರ ತಲೆ ಮೇಲೆ ಹೊರೆಯಿದೆ, ಇರಬಹುದು. ಮೇಲೆ ನೋಡಲಿಕ್ಕೆ ಹಾಗೇನು ಕಾಣುವುದಿಲ್ಲ. ಆದರೆ ಇಲ್ಲಿ ಹೊರೆಯಿಲ್ಲದವನಾರು? ಎಂದುಕೊಂಡಿದ್ದ ಚಂದ್ರಭಾನ.

ರಾಮಜೀಆವನ ಹೇಳಿದ್ದ, 'ಮೂವರು ಹುಡುಗಿಯರಿದ್ದಾರೆ ಅಂದರೆ ಮೂರುಗುಡ್ಡಗಳ ಭಾರವೆ ಇವರ ತಲೆ ಮೇಲಿದೆ. ನಮ್ಮ ಗಾಂಗೂಲಿಬಾಬುಗಳಂತೂ ಬಿಡಿ.. ಸಹಾಯ ಮಾಡುವ ಮಾತಂತಿರಲಿ, ಕೊನೆಗೆ ಇವರ ಕಷ್ಟವೇನೆಂದಾದರೂ ಕೇಳುವರೆ?'

ನಂತರ ಚಂದ್ರಭಾನನ ಕಿವಿಯ ಹತ್ತಿರ ಬಾಯಿಯಿಟ್ಟು ಮೆಲ್ಲನೆ ರಾಮಜೀಆವನ ಹೇಳಿದ್ದ- 'ತುಂಬಾ ಕಷ್ಟದಲ್ಲಿದ್ದಾರೆ ಪಾಪ. ದೊಡ್ಡ ಮಗಳು ಗೀತಾಳ ಲಗ್ನವನ್ನು ಜರೂರಾಗಿ ಮಾಡಲೇಬೇಕಾಗಿದೆ. ನೋಡಲಿಕ್ಕೇನೂ ಅಷ್ಟು ಚೆಂದವಿಲ್ಲ ಹುಡುಗಿ. ಕಾಳೀಚರಣ ಬಾಬು ಹದಿನಾರು ವರ್ಷಗಳಿಂದ ಗಾಂಗೂಲಿ ಬಾಬುಗಳ ಬಳಿ ಕ್ಯಾಶಿಯರ್ ಆಗಿದ್ದಾರೆ.'

ಆಮೇಲೆ ರಾಮಜೀಆವನ ಬಹಳ ಧೈರ್ಯದಿಂದಲೇ ಹೇಳಿದ್ದ, 'ಹೋಗಿ ಕಾಳೀಚರಣ ಬಾಬು, ನಿಮ್ಮ ಕಷ್ಟ ದೂರಾಗುತ್ತದೆ ಹೋಗಿ.. ನಿಶ್ಚಿಂತೆಯಿಂದ ಲಗ್ನ ಮಾಡಿ,' ಎಂದು.

ಅಂದರೆ ರಾಮಜೀಆವನ ಹೀಗೆ ಮಾಡಿದ್ದು ಕಾಳೀಚರಣಬಾಬುವಿನ ಕಷ್ಟಪರಿಹಾರಕ್ಕಾಗಿಯೇ? ಹಾಗಾದರೆ ಇದರಲ್ಲಿ ಅವನ ಕೈ ಇರಲಿಕ್ಕಿಲ್ಲ ಎಂಬುದು ಸುಳ್ಳೇ? ಈ ವಿಚಾರಗಳು ಚಂದ್ರಭಾನನ ಸುತ್ತಲಾರಂಭಿಸಿದವು.

ಇಲಿ ಹಿಡಿಯಲಿಕ್ಕೆಂದು ಬೆಕ್ಕು ಹೊಂಚುಹಾಕಿ ಚಂದ್ರಭಾನನ ಹಿಂದೆ ಮುಂದೆ ತಿರುಗಾಡುತ್ತಿತ್ತು 'ಥುತ್' ಎಂದ.

ಅವನ ಮನಸ್ಸಿನೊಳಗೆಲ್ಲ 'ಥುತ್ಕಾರ' ತುಂಬಿತ್ತು. ಈ ಪರಿಸ್ಥಿತಿಯ ಬಗ್ಗೆ. ಒಬ್ಬನ ಸಲುವಾಗಿ ಇನ್ನೊಬ್ಬ ಬಲಿಪಶುವಾಗುವಂಥ ಪರಿಸ್ಥಿತಿಯ ಬಗ್ಗೆ. ರಾಮಜೀಆವನ ಸಿಕ್ಕ. ಕಾಳೀಚರಣಬಾಬುವಿನ ಹೊಂಚಿನಲ್ಲಿ ರಾಮಜೀಆವ



ನನ ಹೊಂಚಿನಿಂದಾಗಿ ತಾನು ಪೋಲೀಸರ ದೃಷ್ಟಿಗೆ ಬೀಳುವಂತಾಯಿತು. ಗಾಂಗೂಲಿಬಾಬು ಕೂಡ ಹೊಂಚು ಹಾಕಿಕೊಂಡಿರುವಂಥವನೆ. ಚಂದ್ರಭಾನ ಮತ್ತೆ 'ಥತ್..... ಥತ್' ಎಂದ. ಗಾಂಗೂಲಿಬಾಬು ಒಂದು ವೇಳೆ ತನ್ನ ನೌಕರರನ್ನು ಸರಿಯಾಗಿ ನೋಡಿಕೊಂಡಿದ್ದರೆ..

''ನನ್ನದೇನು ದೋಷ ಇದರಲ್ಲಿ?'' ಚಂದ್ರಭಾನ ಗೊಣಗಿಕೊಂಡು ಅಸಹಾಯನಾಗಿ ತಲೆಗೂದಲನ್ನು ಕಿತ್ತುಕೊಳ್ಳತೊಡಗಿದ.

ಅಂಗಳದ ನಲ್ಲಿಯಲ್ಲಿ ನೀರು ಹನಿಹನಿಯಾಗಿ ಬೀಳತೊಡಗಿತು. ಟಪ್ ಟಪ್....

ಸ್ವಲ್ಪ ಹೊತ್ತಿನಲ್ಲೆ ಕತ್ತಲೆ ಹರಿಯಬಹುದು. ಬೆಳಕಾಗಬಹುದು. ವಠಾರದವರೆಲ್ಲರ ಸಂದೇಹಪೂರ್ಣ ದೃಷ್ಟಿ ತನ್ನ ಮೇಲೆ ಬೀಳುತ್ತದೆ.

ರಾತ್ರಿ ಕಳೆಯಿತು, ಕುಳಿತಲ್ಲೇ ಕುಳಿತು..

ಚಂದ್ರಭಾನ ನಿಟ್ಟುಸಿರೆಳೆದು ಮನೆಯಲ್ಲೆಲ್ಲ ಅಸ್ತವ್ಯಸ್ತವಾಗಿ ಬಿದ್ದಿದ್ದ ಸಾಮಾನುಗಳತ್ತ ಮೋಹಕ ದೃಷ್ಟಿಬೀರಿದ. ಹೊರಗಡೆ ಹೋಗಬೇಕೆಂದುಕೊಂಡು ಹೊಸ್ತಿಲವರೆಗೆ ಬಂದವ ಹಾಗೆಯೇ ನಿಂತುಬಿಟ್ಟ.

ಭಾರವಾದ ಹೆಜ್ಜೆಯಿಡುತ್ತ ರಾಮಜೀಆವನ ಬರುತ್ತಿರುವುದು ಕಾಣಿಸಿತು.

ಅವನು ರಾಮಜೀಆವನ ಆಗಿರಲಿಕ್ಕಿಲ್ಲ ವೆಂದು ಚಂದ್ರಭಾನನಿಗೆ ಅನ್ನಿಸಿತು. ಬೇರೆ ಯಾರೋ ಆಗಿರಬೇಕು. ಇಪ್ಪತ್ತು ಸಾವಿರ ರೂಪಾಯಿ ಹಾರಿಸಿಕೊಂಡು ಹೋದವ ಹೀಗೆ ಮರಳಿ ಬಂದಾನೆಯೆ?

ಆದರೆ ಬಂದಾತ ರಾಮಜೀಆವನನೇ. ಏನೊಂದು ಮಾತಾಡದೆ ಚಂದ್ರಭಾನ ಕೋಣೆಯೊಳಗೆ ಸರಿದ.

''ಮಾಸ್ತರರೆ ಏನು ಸಮಾಚಾರ?'' ಎಂದ ರಾಮಜೀಆವನ.

ಚಂದ್ರಭಾನ ಹೆದರುತ್ತ ಹೆದರುತ್ತ ಸಾವಕಾಶವಾಗಿ ಕೇಳಿದ. ''ರಾಮಜೀಆವನ, ನೀನು ಇಷ್ಟೊತ್ತಿನತನಕ ಎಲ್ಲಿದ್ದೆ?''

''ಎಲ್ಲಿ ಅಂತ ಹ್ಯಾಗೆ ಹೇಳಲಿ? ಕಾಳೀಚರಣ




"ಪೆಟ್ರೋಲ್ ಬೆಲೆ ಇಳಿಯೋವರ್ಗೂ ನಾನು ಈ ನನ್ನ ಸ್ವಂತ ಕಾರಲ್ಲಿ ಅಡ್ಡಾಡೊಲ್ಲ"

ಬಾಬೂನ ಮಗಳು ತನ್ನ ಮನೆತನದ ಮರ್ಯಾದೆಯನ್ನೇ ಕಳೆದಳು. ಓಡಿಹೋದಳು. ಆದರೆ....'' ರಾಮಜೀಆವನ ಕೋಣೆಯೊಗೆಲ್ಲ ದೃಷ್ಟಿ ಹಾಯಿಸಿ ಕೇಳಿದ, ''ಇದೆಲ್ಲ ಏನ ಹೇಗಾಯಿತು? ಏಕಾಯಿತು?''

''ಪೋಲೀಸರು ನಿನ್ನ ಹುಡುಕಿಕೊಂಡ ಬಂದಿದ್ದರಪ್ಪಾ ಮನೇನೆಲ್ಲಾ ಶೋಧಿಸಿದರು..''

''ಪೋಲೀಸರು! ಆತ ಅತ್ಯಾಶ್ಚರ್ಯದಿಂ ಕೇಳಿದ,'' ''ಇದು ಅನ್ಯಾಯ, ತೊಂದರೆಯ ಬಿದ್ದಿರಿ. ನನ್ನಿಂದಲೆ ಈ ತೊಂದರೆಯಾದದ್ದು ನಾನು ಕಚೇರಿಯಿಂದ ಹೊರಟಿದ್ದಾಗ ಕಾಳ ಚರಣಬಾಬು ಸಿಕ್ಕಿದ್ದರು. ಅವರು, 'ರಾ ಗೀತಾ ಮನೆಗೆ ಬಂದಿಲ್ಲ'ವೆಂದರು. ಆಕೆ ಎಲ್ಲಿ ಹೋಗಿರಬಹುದೆಂದು ಹುಡುಕತೊಡಗಿದೆವ ಆಸ್ಪತ್ರೆಯನ್ನೆಲ್ಲ ನೋಡಿಯಾಯಿತು. ಬಹುಃ ರೈಲು ಹಳಿಗೆ ತಲೆಕೊಟ್ಟಿರಬಹುದೆ? ಪತ್ತೆಯ ಗಲಿಲ್ಲ. ಬಾವಿ-ಕೆರೆ-ಹೊಳೆ ಮುಳುಗಿ ಸತ್ತಿರ ಹುದೇ? ಎಂದು ಮನಸ್ಸಿನಲ್ಲಿ ಬಂತು. ಅವ ಲಗ್ನ ಮುರುಗಡೆ ಆಗಿತ್ತು. ಗಂಗಾನದಿ ದ

ಲ್ಲಿ ಬಹಳ ದೂರದವರೆಗೂ ಹೋಗಿ ನೋಡಿ ವು. ಯಾವ ಸುಳಿವೂ ಸಿಗಲಿಲ್ಲ. ಯಾರ ಗಡವೋ ಓಡಿಹೋಗಿರಬೇಕೆಂಬ ಸಂಶಯ ತು. ಸಂಶಯ ನಿಜವಾಗಿ ಪರಿಣಮಿಸಿತು. ತೂ ಮದುವೆ-ಲಗ್ನ ಎಲ್ಲಾ ಜಂಜಡ ತು,'' ಎಂದು ರಾಮಜೀಆವನ ವಿಷಾದ ದ ಹೇಳಿ ಸುಮ್ಮನಾದ.

''ಮತ್ತೆ ಆ ಇಪ್ಪತ್ತುಸಾವಿರ ರೂಪಾಯಿ?'' ದ್ರಭಾನ ಗಂಭೀರನಾಗಿ ಕೇಳಿದ.

''ಅದನ್ನೆಲ್ಲ ಬ್ಯಾಂಕಿಗೆ ಜಮಾ ಮಾಡಿದ್ದೇನೆ. ! ತಪ್ಪು ಇಲ್ಲೇ ಆದದ್ದು. ಬ್ಯಾಂಕ್ ಬಂದಾ ಗ್ಲೇ ನಾನು ಕ್ಯಾಶಿಯರ್ ಮನೆಗೆ ಹೋಗಿ ಹಣ ಟ್ಟು ಬಂದೆ. ಇವತ್ತು ಬ್ಯಾಂಕ್‌ಲ್ಲಿ ಅದು ಮಾ ಆಗಿರ್‍ತದೆ.''

''ಹಾಗಿದ್ದರೆ ನೀನು ಹಣವನ್ನು ಲಪಟಾಯಿ ಲ...?''

''ಅರೆ! ಇದೇನು ಕೇಳ್ತೀರಿ ಮಾಸ್ತರೆ? ದುಡ್ಡಿನಿಂದಲೆ ಮನುಷ್ಯನ ಪ್ರಾಮಾಣಿಕತೆಯನ್ನು ಅಳೀತಾರೆ. ಮಾಸ್ತರೆ.. ಪ್ರಾಮಾಣಿಕನಾಗಿರದಿದ್ರೆ ತೊಂದರೆಯಾಗ್ತದೆ,'' ಎಂದ ರಾಮಜೀಆವನ.

ಹಗುರ ಮನಸ್ಸಿನಿಂದ ನಿರಾಳವಾಗಿ ಉಸಿರಾಡಿದ ಚಂದ್ರಭಾನ.

''ನೀನು ಗಾಂಗೂಲಿಬಾಬುಗಳ ಮನೆಗೆ ಬರ್‍ತೀಯಾ?''

''ಅದಕ್ಕೇನಂತೆ ನಡೀರಿ, ಈಗಲೇ, ಹೋಗೋಣ'' ಎಂದ ರಾಮಜೀಆವನ ಚಂದ್ರಭಾನನ ಹಿಂದಿನಿಂದ ಸಟಸಟನೇ ಹೆಜ್ಜೆಹಾಕತೊಡಗಿದ.

''ಗಾಂಗೂಲಿ ಬಾಬುಗಳ ಹಣ ಬ್ಯಾಂಕಿನಲ್ಲಿ ಜಮಾ ಆಯಿತು. ಕಾಳೀಚರಣಬಾಬುಗಳ ಮಗಳು ತನ್ನ ಮನೆತನದ ಮರ್ಯಾದೆ ಮೂರು ಕಾಸು ಮಾಡಿದಳು.''

●

ಹೆಚ್ಚು ಉಪ್ಪು ಸೇವಿಸುವುದು ಒಳ್ಳೆಯದಲ್ಲ ಎಂದು ಅನೇಕರು ಭಾವಿಸುತ್ತಾರೆ; ಆದರೆ ಇದು ನಿಜವೇ?

# ಉಪ್ಪು ಅಷ್ಟು ಕೆಟ್ಟದ್ದೆ?

ಶಂಸ ಐತಾಳ

ಜಾಕ್ ಡೆಂಟನ್ ಸ್ಕಾಟ್ ಅವರ ಲೇಖನ ಆಧಾರದಿಂದ

ಉಪ್ಪು ಜಗತ್ತಿನಲ್ಲಿಯೆ ಅಧಿಕ ಉಪಯುಕ್ತವೂ ವಿಸ್ಮಯಜನಕವೂ ಆಗಿರುವ ಖನಿಜಗಳಲ್ಲಿ ಒಂದು. ಸಾವಿರಾರು ವರ್ಷಗಳಿಂದಲೂ ಅದು ನಮ್ಮ ಇತಿಹಾಸ, ಭಾಷೆ ಹಾಗೂ ಆಹಾರಗಳ ಅವಿಭಾಜ್ಯ ಅಂಗ. ಧರ್ಮೋಪದೇಶ ಕಾಲದಲ್ಲಿ ಏಸುಕ್ರಿಸ್ತ ತನ್ನ ವಿಧೇಯ ಶಿಷ್ಯರನ್ನು ಉಪ್ಪಿಗೆ ಹೋಲಿಸಿದ್ದಾನೆ. ಪ್ರಾಚೀನ ರೋಮಿನಲ್ಲಿ ಸೀಜರ ತನ್ನ ಸೈನಿಕರಿಗೆ ಅವರ ವೇತನದ ಒಂದು ಭಾಗವನ್ನು ಉಪ್ಪಿನ ರೂಪದಲ್ಲಿ ನೀಡುವಷ್ಟು ಅದು ಬೆಲೆಯುಳ್ಳದ್ದಾಗಿತ್ತು. ಉಪ್ಪು ಎಂಬ ಅರ್ಥವುಳ್ಳ 'ಸ್ಯಾಲರಿಯಮ್' ಎಂಬ ಲ್ಯಾಟಿನ್ ಶಬ್ದದಿಂದಲೇ ಮುಂದೆ 'ವೇತನ' ಎಂಬ ಅರ್ಥದ 'ಸ್ಯಾಲರಿ' ಇಂಗ್ಲೀಷ್ ಶಬ್ದ ನಿಷ್ಪನ್ನವಾಯಿತು. ಖಾಸಗಿಯಾಗಿ ಉಪ್ಪು ತಯಾರಿಸುವುದನ್ನು ನಿಷೇಧಿಸುವ ಕಾನೂನನ್ನು ಉಲ್ಲಂಘಿಸುವುದರೊಂದಿಗೇ ಮಹಾತ್ಮಾ ಗಾಂಧಿ ತಮ್ಮ ಎರಡನೆಯ ಸತ್ಯಾಗ್ರಹ ಚಳವಳಿಯನ್ನು ಪ್ರಾರಂಭಿಸಿದರು. ಗುಲಾಮರ ಬದಲು ಉಪ್ಪನ್ನು ವಿನಿಮಯಮಾಡುವ ಪದ್ಧತಿಯೂ ಪ್ರಾಚೀನ ಗ್ರೀಸಿನಲ್ಲಿತ್ತು. ಇದರಿಂದಲೇ 'ಉಪ್ಪಿನಷ್ಟೂ ಬೆಲೆಯಿಲ್ಲದವ' ಎಂಬ ನುಡಿಗಟ್ಟು ಕ್ರಮೇಣ ಬಳಕೆಗೆ ಬಂದಿರಬೇಕು.

ಆದರೆ ವಾಸ್ತವಿಕವಾಗಿ ಆಹಾರವನ್ನಿದು ನ್ನಷ್ಟು ರುಚಿಕರವಾಗಿ ಪರಿವರ್ತಿಸುತ್ತದೆ ನ್ನುವುದನ್ನು ಬಿಟ್ಟರೆ ಹೆಚ್ಚಿಗೆ ಪ್ರಯೋಜನ ನೂ ಇಲ್ಲ. ಎಲ್ಲ ಬೇಕರಿ ಪದಾರ್ಥಗಳಲ್ಲೂ ಪ್ಪನ್ನು ಬಳಸಲಾಗುತ್ತದೆ. ಅಂತೆಯೆ ಡಬ್ಬ ಗೂ ಶೀತಕಗಳಲ್ಲಿ ಆಹಾರ ಪದಾರ್ಥಗಳನ್ನು ದಂತೆ ಇಡುವ ಸಂದರ್ಭಗಳಲ್ಲಿಯೂ ಪ್ಪನ್ನು ಬಳಸುತ್ತಾರೆ. ಬಹಳ ಕಾಲ ಕೆಡದೆ ಳಿಯುವಂತಹ ಎಲ್ಲ ಆಹಾರವಸ್ತುಗಳ ಯಾರಿಕೆಯಲ್ಲಿ, ಹೈನ, ಮತ್ಸ್ಯ ಹಾಗೂ ಂಸ ಉದ್ಯಮಗಳಲ್ಲೂ ಉಪ್ಪನ್ನು ಬಳಸು ರೆ. ಆಹಾರಪದಾರ್ಥಗಳನ್ನು ಕೆಡಿಸುವ ಕ್ಷ್ಮಾಣುಜೀವಿಗಳ ಬೆಳವಣಿಗೆಯನ್ನು ಏಳಂ ಗೊಳಿಸುವ ವಿಶೇಷ ಗುಣ ಉಪ್ಪಿಗೆ ಇರುವುದ ದ, ಆಹಾರವಸ್ತುಗಳನ್ನು ಕೆಡದಂತೆ ಇರಿ ವ ಯಾವುದೇ ವಿಧಾನವೂ ಉಪ್ಪನ್ನು ಬಳ ಸೆ ಸಾಧ್ಯವಿಲ್ಲ. ಉಪ್ಪನ್ನು ಬಳಸದೆ ನಾಗರಿಕ ೀವನವೇ ಸಾಧ್ಯವಿಲ್ಲವೆಂದು ರೋಮನ್ ಇತಿ ಸಕಾರ ಪ್ಲಿನಿ ಹೇಳಿದ್ದು ಬಹುಶಃ ಈ ಕಾರಣ ಗಿಯೆ.

ಆದರೂ ಇತ್ತೀಚೆ 'ಉಪ್ಪು ಬಳಸುವುದರಿಂದ ರೋಗ್ಯಕ್ಕೆ ಹಾನಿ' ಎಂಬ ಮಾತು ಮೇಲಿಂದ ೇಲೆ ಕೇಳಿಬರುತ್ತದೆ. 'ಉಪ್ಪನ್ನು ಹೆಚ್ಚು ಬಳ ವುದು ಒಳ್ಳೆಯದಲ್ಲ' ಎಂಬ ವಾದವನ್ನು ್ರಾರಂಭಿಸಿದವರಲ್ಲಿ ಅಮೇರಿಕದ ಆಹಾರ ಹಾಗು ಷಧಗಳ ಆಡಳಿತವಿಭಾಗದ ಮಾಜಿ ಕಮಿಷರ್ . ಆರ್ಥರ್ ಹಲ್ ಹಯೆಸ್ ಪ್ರಮುಖ ಗಿದ್ದಾರೆ. ಉಪ್ಪಿನ ಸೇವನೆಯನ್ನು ಕಮ್ಮಿ ಾಡುತ್ತ ಬರುವುದರಿಂದ ನಾವೆಲ್ಲರೂ ಯೋಜನ ಪಡೆಯಬಹುದೆಂದು ಇವರು 1ರಲ್ಲಿ ಮೊತ್ತಮೊದಲಬಾರಿಗೆ ಪ್ರಕಟಿಸಿ ು. ಅಮೇರಿಕದ ಹಾರ್ಟ್ ಅಸೋಸಿಯೇ ನ್ ಮತ್ತು ಮೆಡಿಕಲ್ ಅಸೋಸಿಯೇಷನ್ನಿ -ತಹ ಸಂಸ್ಥೆಗಳೂ ಅಮೇರಿಕದ ಸರ್ಜನ್ ನರಲ್ ಅವರೂ ಕ್ರಮೇಣ ಹಯೆಸ್ ಅವರ ಭಿಪ್ರಾಯವನ್ನು ಬೆಂಬಲಿಸಿದರು. ವ್ಯಕ್ತಿ ಸೇವಿಸುವ ಸೋಡಿಯಮ್ಮಿನ ಪ್ರಮಾಣ ಮತ್ತು ಹೃದ್ರೋಗ, ರಕ್ತಪರಿಚಲನದ ಅವ್ಯವಸ್ಥೆ, ಪಾರ್ಶ್ವವಾಯು, ಮರಣ ಇವುಗಳ ನಡುವೆ ನೇರ ಸಂಬಂಧವಿದೆ ಎಂದು ಅಮೇರಿಕದ ರಾಜಕಾರಣಿಗಳೂ ಪ್ರಚಾರ ಪ್ರಾರಂಭಿಸಿದರು. ಆದರೆ ಇದು ನಿಜವೆ? ಅನೇಕ ಡಾಕ್ಟರರು ಹಾಗೂ ವೈದ್ಯಕೀಯ ಸಂಶೋಧಕರು ಉಪ್ಪಿನ ವಿರುದ್ಧವಾದ ಪ್ರಚಾರ ಅತಿಯಾಯಿತೆಂಬ ಅಭಿಪ್ರಾ-ಯಕ್ಕೆ ಈಗ ಬರತೊಡಗಿದ್ದಾರೆ. ಇವರಲ್ಲೊಬ್ಬರಾಗಿರುವ ಅಲಾಬಾಮ ವಿಶ್ವವಿದ್ಯಾನಿಲಯದ ಕಾರ್ಡಿಯೊ-ವಸ್ಕ್ಯುಲರ್ ಸಂಶೋಧನ ಮತ್ತು ತರಬೇತಿ ಕೇಂದ್ರದ ನಿವೃತ್ತ ನಿರ್ದೇಶಕಿ ಡಾ.ಹ್ಯಾರ್ರಿಯೆಟ್ ದುಸ್ತನ್ ಹೀಗೆನ್ನುತ್ತಾರೆ: ''ಉಪ್ಪು ಸೇವನೆಯ ವಿರುದ್ಧ ಗದ್ದಲ ಮಾಡಬೇಕಾದ ಅಗತ್ಯವೇ ಇಲ್ಲ. ನಮ್ಮಲ್ಲಿ ಹೆಚ್ಚಿನವರ ವಿಚಾರದಲ್ಲಿ ಹೇಳುವುದಾದರೆ, ನಾವೆಷ್ಟು ಉಪ್ಪು ಸೇವಿಸುತ್ತೇವೆ ಎಂಬುದರಿಂದ ನಮ್ಮ ಆರೋಗ್ಯದ ಮೇಲೆ ಪ್ರಾಯಃ ಯಾವುದೇ ಪರಿಣಾಮ ಉಂಟಾಗುವುದಿಲ್ಲ.'' ದುಸ್ತನ್ ಅವರು ಈಚೆಗೆ ನಡೆಸಿದ 150 ಜನರನ್ನೊಳಗೊಂಡ ಅಲ್ಪಾವಧಿ ಅಧ್ಯಯನವೊಂದರಿಂದ ತಿಳಿದು ಬಂದಂತೆ, ಸಾಧಾರಣ ರಕ್ತದ ಒತ್ತಡವುಳ್ಳ ಯಾವುದೇ ವ್ಯಕ್ತಿಯ ಆರೋಗ್ಯದಲ್ಲಿ ಮೊದಲು ಕಡಿಮೆ ಉಪ್ಪು ಸೇವಿಸಿದುದರಿಂದಾಗಲಿ ಅಥವಾ ಅನಂತರ ಹೆಚ್ಚು ಉಪ್ಪು ಸೇವಿಸಿದುದರಿಂದಾಗಲಿ ಯಾವುದೇ ವ್ಯತ್ಯಾಸ ಉಂಟಾಗಿಲ್ಲ. ಆದರೆ ಅಧಿಕ ರಕ್ತದ ಒತ್ತಡವುಳ್ಳ ವ್ಯಕ್ತಿಗಳ ವಿಷಯದಲ್ಲಿ, ಸುಮಾರು ಶೇಕಡಾ 50ರಷ್ಟು ಜನರ ರಕ್ತದ ಒತ್ತಡ, ಕಡಿಮೆ ಉಪ್ಪು ಸೇವಿದಾಗ ಸ್ವಲ್ಪ ಕಡಿಮೆಯಾದುದೂ, ಹೆಚ್ಚು ಉಪ್ಪು ಸೇವಿಸ ತೊಡಗಿದಾಗ ಸ್ವಲ್ಪ ಹೆಚ್ಚಾಗಿ ಪುನಃ ಹಿಂದಿನ ಹಂತಕ್ಕೆ ಏರಿದುದೂ ಇದೇ ಅಧ್ಯಯನದಿಂದ ತಿಳಿದುಬಂದಿದೆ.

ಇತರ ಕೆಲವು ಸಂಶೋಧನೆಗಳೂ ದುಸ್ತನ್ ಅವರ ಸಂಶೋಧನೆಯನ್ನು ಸಮರ್ಥಿಸಿವೆ. ಉದಾಹರಣೆಗೆ, ಸಾಮಾನ್ಯ ಆರೋಗ್ಯವುಳ್ಳ

ವರನ್ನು ಉಪ್ಪಿನ ಅಧಿಕ ಸೇವನೆಗೆ ಒಳಪಡಿಸಿದಾಗ, ಅವರ ರಕ್ತದ ಒತ್ತಡ, ಅಧಿಕ ರಕ್ತ ಒತ್ತಡವೆನ್ನುವಂತಹ ಹಂತಕ್ಕೆ ಏರದೆ ಇರುವುದು ಇಂಡಿಯಾನಾ ಅಧ್ಯಯನವೊಂದರಿಂದ ಖಚಿತವಾಗಿದೆ. ಅಷ್ಟೇ ಅಲ್ಲ, ರಕ್ತದ ಒತ್ತಡ ಅತ್ಯಧಿಕವೆನಿಸಿದ ಹಂತಕ್ಕೆ ಏರಿರುವಂತಹ ವ್ಯಕ್ತಿಗಳ ಉಪ್ಪಿನ ಪ್ರಮಾಣವನ್ನು ಕಡಿಮೆ ಮಾಡದೆಯೆ, ಕಡಿಮೆ ಕ್ಯಾಲರಿಗಳುಳ್ಳ ಆಹಾರ ಪದಾರ್ಥಗಳನ್ನು ಸೇವಿಸಿ, ತಮ್ಮ ರಕ್ತದ ಒತ್ತಡ ಇಳಿಸಿಕೊಳ್ಳುವುದು ಸಾಧ್ಯ ಎಂದು ಕೂಡ ಇಸ್ರೇಲಿನಲ್ಲಿ ನಡೆದ ಕೆಲವು ಅಧ್ಯಯನಗಳು ಸಾಬೀತು-ಪಡಿಸಿವೆ.

''ಆರೋಗ್ಯವಂತರಾದ ಜನರಿಗೆ ಸಂಬಂಧಪಟ್ಟಂತೆ ಹೇಳುವುದಾದರೆ, ಸಮರ್ಪಕ ಪ್ರಮಾಣದ ಉಪ್ಪನ್ನು ಆಹಾರವಾಗಿ ಸೇವಿಸುವುದೇ ಒಳ್ಳೆಯದು; ಆದ್ದರಿಂದ, ಎಲ್ಲರೂ ಉಪ್ಪು ಸೇವನೆಯನ್ನು ಬಿಟ್ಟು ಬಿಡಬೇಕು ಎಂಬ ವಾದದಲ್ಲಿ ಯಾವುದೇ ಹುರುಳಿಲ್ಲ,'' ಎನ್ನುತ್ತಾರೆ ನ್ಯೂಯಾರ್ಕ್ ಹಾಸ್ಪಿಟಲ್-ಕಾರ್ನೆಲ್ ವೈದ್ಯಕೀಯ ಕೇಂದ್ರದ ಅಧಿಕ ರಕ್ತದ ಒತ್ತಡ ವಿಭಾಗದ ಮುಖ್ಯಸ್ಥರೂ, ಅಮೇರಿಕದ ಖ್ಯಾತ ರಕ್ತದ ಒತ್ತಡ ತಜ್ಞರೂ ಆಗಿರುವ ಡಿ. ಜಾನ್ ಲರಾಗ್.

ಉಪ್ಪನ್ನು ಇಷ್ಟಪಡುವ ನಮ್ಮೆಲ್ಲರಿಗೂ ಇದು ಶುಭ ಸಮಾಚಾರವೆ. ನಿಜವಾಗಿಯೆಂದರೆ ಮಾನವ ಶರೀರಕ್ಕೆ ಉಪ್ಪಿನ ಅಗತ್ಯ ಮೂಲಗಳು ಇವೆ. ಉಪ್ಪನ್ನು ಹೊರತುಪಡಿಸಿ ಜೀವಿಸಲು ಯಾರಿಗೂ ಸಾಧ್ಯವಿಲ್ಲ. ಉಪ್ಪು- ಇದನ್ನೆ ರಾಸಾಯನಿಕ ಪರಿಭಾಷೆಯಲ್ಲಿ ಹೇಳುವುದಾದರೆ ಸೋಡಿಯಮ್ ಕ್ಲೋರೈಡ್‌ನಲ್ಲಿ ಸೋಡಿಯಮ್ಮಿನ ಪ್ರಮಾಣ ಶೇಕಡಾ 39. ಆದರೆ, ಕ್ಲೋರೈಡಿನ ಪ್ರಮಾಣ ಶೇಕಡಾ 61. ಶರೀರದೊಳಗೆ ದ್ರಾವಣವೊಂದನ್ನು ಉಂಟುಮಾಡುವ ಇವೆರಡೂ ಘಟಕಗಳು ಸೋಡಿಯಮ್ ಹಾಗೂ ಕ್ಲೋರೈಡ್ ಅಯಾಣುಗಳಾಗಿ ವಿಭಜನ ಹೊಂದುತ್ತವೆ. ಇವೆರಡು ಅಯಾಣುಗಳಿಗೂ ತಮ್ಮದೇ ಆದ ಕರ್ತವ್ಯಗಳಿವೆ. ಕ್ಲೋರೈಡ್ ಜೀವಕೋಶ ಮತ್ತು ಅದರ ಪರಿಸರದ ನಡುವಿನ ಜಲಾಂಶದ ಸಮತೋಲನವನ್ನು ಕಾಪಾಡುವುದಲ್ಲದೆ ಆಹಾರವು ಜೀರ್ಣವಾಗಲು ನೆರವಾಗುತ್ತದೆ. ಅಲ್ಲದೆ ಅದು ಸೋಡಿಯಮ್ಮಿನ ಜೊತೆ






ಗೂಡಿ ಪ್ರಾಣಾಧಾರವೆನಿಸಿದ ರಕ್ತಾಮ್ಲ ಸಮತೋಲನವನ್ನೂ ಕಾಪಾಡುತ್ತದೆ. ಸೋಡಿಯಮ್, ರಕ್ತದ ಪ್ರಮಾಣ ಮತ್ತು ರಕ್ತದ ಒತ್ತಡಗಳನ್ನು ಮಾನವ ಶರೀರದ ಅವಶ್ಯಕತೆಗೆ ತಕ್ಕಂತೆ ನಿಯಂತ್ರಿಸುವಲ್ಲಿ ನೆರವಾಗುತ್ತದೆ. ನರ ಆವೇಗಗಳ ವಹನವನ್ನು ಸುಲಭಗೊಳಿಸುತ್ತದೆ. ಅಲ್ಲದೆ ಹೃದಯ ಹಾಗೂ ಸ್ನಾಯು ಸಂಕೋಚನೆಗಳಿಗೂ ಅದು ಅವಶ್ಯಕವಾಗಿವೆ.

ಲವಣಾಂಶದ ಕೊರತೆ ಅಥವಾ ಆಧಿಕ್ಯದಿಂದ ನಮ್ಮನ್ನು ರಕ್ಷಿಸಲು ತನ್ನದೇ ಆದ ವ್ಯವಸ್ಥೆ ನಮ್ಮ ಶರೀರದಲ್ಲಿದೆ. ಶರೀರದಲ್ಲಿ ಲವಣಾಂಶ ಅಧಿಕವಾಗಿರುವಾಗ ಅದನ್ನು ಮೂತ್ರದೊಂದಿಗೆ ವಿಸರ್ಜಿಸುವ ಮೂತ್ರಜನಕಾಂಗಗಳು, ಲವಣಾಂಶ ಕಡಿಮೆಯಾಗಿರುವಾಗ ಜಲಾಂಶವನ್ನಷ್ಟೇ ವಿಸರ್ಜಿಸುತ್ತವೆ.

ಈ ಅತ್ಯವಶ್ಯಕ ಖನಿಜವಿಲ್ಲದೆ ಮಾನವ ಶರೀರ ಕಾರ್ಯ ನಿರ್ವಹಿಸಲಾರದು. ಆಸ್ಪತ್ರೆಗಳ ತುರ್ತು ಚಿಕಿತ್ಸಾ ಘಟಕಗಳಲ್ಲಿ ರೋಗಿಯ ಅಭಿಧಮನಿ (ಮಲಿನ ರಕ್ತನಾಳ)ಗಳ ಒಳಗೆ ಲವಣಯುಕ್ತ ದ್ರಾವಣವನ್ನು ಸೇರಿಸಲಾಗುತ್ತದೆ. ಶಸ್ತ್ರಚಿಕಿತ್ಸೆಯ ಸಂದರ್ಭಗಳಲ್ಲಿ ಇದು ರೋಗಿಗಳು ಆಘಾತಕ್ಕೀಡಾಗದಂತೆ ತಡೆಯುತ್ತದೆ. ಉಪ್ಪಿನ ಸೇವನೆ ಅತ್ಯಲ್ಪವಾದಾಗ ಸ್ನಾಯು ಸಿಡಿತ ಮತ್ತು ಪಿತ್ತೋದ್ರೇಕಗಳುಂಟಾಗುತ್ತವೆ. ಇದರಿಂದ ಶರೀರದ ರೋಗನಿರೋಧಕ ಶಕ್ತಿ ಕುಗ್ಗುತ್ತದೆ. 1812ರಲ್ಲಿ ಲವಣಾಂಶಯುಕ್ತ ಆಹಾರದಿಂದ ವಂಚಿತರಾದುದರಿಂದ ರೋಗಗಳು ಹಾಗೂ ಸೋಂಕನ್ನು ನಿರೋಧಿಸುವ ಸಾಮರ್ಥ್ಯ ಬಹುಕಾಲ ಉಳಿಯದೆ ನೆಪೋಲಿಯನ್ನನ ಸಾವಿರಾರು ಸೈನಿಕರು ನಡೆದ ಕದನದಲ್ಲಿ ಸಾವನ್ನಪ್ಪಿದರು. ಆ ವರ್ಷ ನೆಪೋಲಿಯನ್ನನು ರಶಿಯದಿಂದ ಹಿಮ್ಮೆಟ್ಟಲು ಉಪ್ಪಿನ ಅಭಾವ ಹೀಗೆ ಅಪರೋಕ್ಷವಾಗಿ ಕಾರಣವಾಯಿತಂತೆ.

ಅದೃಷ್ಟವಶಾತ್ ಇಂದು ಅಂಥ ಪರಿಸ್ಥಿತಿಯೇನೂ ಇಲ್ಲ. ನಮ್ಮಲ್ಲಿ ಈ ಖನಿಜಧ ಸಮೃದ್ಧ ನಿಕ್ಷೇಪಗಳಿವೆ. ಸಮುದ್ರಜಲದ ಪ್ರತಿ ಲೀಟರಿನಲ್ಲಿಯೂ 30 ಗ್ರಾಮುಗಳಷ್ಟು ಲವಣಾಂಶವಿದೆ. ಆದ್ದರಿಂದ ಅಗತ್ಯ ಎಷ್ಟೇ ಅಧಿಕವಾದರೂ ಅದನ್ನು ಪೂರೈಸುವಷ್ಟು ಉಪ್ಪನ್ನು ಸಾಗರಗಳಿಂದ ತಯಾರಿಸುವುದು ಸಾಧ್ಯ.

ಗಾಜು, ಸಾಬೂನು, ಪ್ಲಾಸ್ಟಿಕ್, ಕಾಗದ, ಬಣ್ಣಗಳು, ಕೃತಕರಬ್ಬರ್, ಸೌಂದರ್ಯ ಪ್ರಸಾಧನ ವಸ್ತುಗಳು, ಬ್ಯಾಟರಿ ಹಾಗೂ ಔಷಧಗಳ ತಯಾರಿಕೆಯಲ್ಲಿ ಲವಣವನ್ನು ಬಳಸಲಾಗುತ್ತದೆ. ಲವಣವಿಲ್ಲದೆ ಯಾವ ರಾಸಾಯನಿಕ ಉದ್ಯಮವೂ ಸಾಧ್ಯವಿಲ್ಲ.

ಹಾಗಾದರೆ ಆಹಾರದಲ್ಲಿ ಎಷ್ಟು ಉಪ್ಪು ಇದ್ದರೆ ಒಳ್ಳೆಯದು? ಉಪ್ಪಿನ ಸೇವನೆಯ ವಿಚಾರದಲ್ಲಿ ಪ್ರತಿಯೊಬ್ಬನೂ ಒಂದು ಮಿತಿಯಲ್ಲಿರಬೇಕು ಎಂಬುದನ್ನು ವೈದ್ಯಕೀಯ ತಜ್ಞರೆಲ್ಲ ಒಪ್ಪುತ್ತಾರೆ. ಆರೋಗ್ಯವಂತರಿಗೆ ದಿನಕ್ಕೆ 4 ರಿಂದ 10 ಗ್ರಾಮುಗಳಷ್ಟು ಅಂದರೆ ಸುಮಾರು 1/2 ದಿಂದ 1 1/3 ಚಹಾ ಚಮಚಗಳಷ್ಟು ಉಪ್ಪು ಬೇಕು. ಇದರಲ್ಲಿ ಒಂದರಿಂದ ಎರಡು ಗ್ರಾಮುಗಳಷ್ಟು ಲವಣಾಂಶವು ಆಹಾರ ಪದಾರ್ಥಗಳಲ್ಲಿ ಸಹಜವಾಗಿರುವ ಸೋಡಿಯಮ್‌ನಿಂದಲೇ ಸಿಗುತ್ತದೆ. ಉಳಿದ ಪ್ರಮಾಣ ಆಹಾರ ವಸ್ತುಗಳನ್ನು ತಯಾರಿಸುವಾಗ ಅಥವಾ ಊಟದ ಕಾಲದಲ್ಲಿ ಪ್ರತ್ಯೇಕವಾಗಿ ಬಳಸಿ ಪಡೆಯುತ್ತೇವೆ.

ಯಕೃತ್ತು, ಮೂತ್ರಜನಕಾಂಗ ಹಾಗೂ ಹೃದಯಕ್ಕೆ ಸಂಬಂಧಪಟ್ಟ ರೋಗಗಳಿರುವವರು ಅವರ ವೈದ್ಯರು ಸಲಹೆ ಕೊಟ್ಟುದೇ ಆದರೆ, ಉಪ್ಪಿನ ಸೇವನೆಯನ್ನು ಮಿತಗೊಳಿಸಬೇಕು. ಆದರೆ 'ಅಲ್ಪ ಲವಣ' ಪ್ರತಿಪಾದಕರೆಂದೇ ಪರಿಚಿತರಾಗಿರುವ ಡಾ.ಆರ್ಥರ್ ಹಲ್ ಹಯೆಸ್ ಜೂನಿಯರ್ ಅವರು ಕೂಡ, ''ಹೆಚ್ಚು ಸೋಡಿಯಮ್ ಬಳಕೆ ಅಧಿಕ ರಕ್ತದ ಒತ್ತಡಕ್ಕೆ ಕಾರಣವಾಗುತ್ತದೆಂದು ನಾವು ಭಾವಿಸಿಲ್ಲ,'' ಎಂದು ಹೇಳುತ್ತಾರೆ. ಕ್ಯಾಲ್ಸಿಯಮ್, ಪೊಟ್ಯಾಸಿಯಂ, ಹಾಗೂ ಪ್ರಾಯಃ ಮ್ಯಾಗ್ನೀಶಿಯಮ್ಮಿನ ಕೊರತೆ, ಸ್ಥೂಲಕಾಯತ್ವ, (ಇದು ಸೋಡಿಯಮ್ಮಿಗಿಂ

ತಲೂ ಹೆಚ್ಚು ಅಪಾಯಕರ) ಅನುವಂಶೀಯ ಕಾರಣಗಳು, ಆತಂಕ- ಉದ್ವೇಗ ಇತ್ಯಾದಿಗಳೂ ಅಧಿಕ ರಕ್ತದ ಒತ್ತಡಕ್ಕೆ ಕಾರಣವಾಗಬಹುದೆಂಬುದಕ್ಕೆ ಹೆಚ್ಚುತ್ತಿರುವ ವೈಜ್ಞಾನಿಕ ಆಧಾರಗಳಿವೆ.

ಉಪ್ಪಿನ ಸೇವನೆಯ ಪ್ರಮಾಣವನ್ನು ವಿನಾ ಕಾರಣ ಕಡಿಮೆ ಮಾಡುವುದರಿಂದ ಪ್ರಯೋಜನಕ್ಕಿಂತ ಹಾನಿಯೇ ಹೆಚ್ಚು. ಓರೆಗಾನ್ ಆರೋಗ್ಯ ವಿಜ್ಞಾನ ವಿಶ್ವವಿದ್ಯಾನಿಲಯದ ಡಾ.ಡೇವಿಡ್ ಮೆಕ್-ಕ್ಯಾರೆನ್ ಅವರು ಹೇಳುವಂತೆ, ''ಸೋಡಿಯಮ್ಮಿನ ಬಗೆಗೆ ನಮಗೆ ಬಹಳಷ್ಟು ವಿಷಯಗಳು ತಿಳಿದುಬಂದಿವೆ. ಆದರೆ ಪೊಟ್ಯಾಶಿಯಮ್ ಮತ್ತು ಕ್ಯಾಲ್ಸಿಯಮ್ಮುಗಳ ಬಗ್ಗೆ ತಿಳಿದಿರುವುದು ಮಾತ್ರ ಅತ್ಯಲ್ಪ. ಇತರ ಪೋಷಕಾಂಶಗಳ ಬಗ್ಗೆ ಕೂಲಂಕಷವಾಗಿ ತಿಳಿಯಲು ನಾವಿನ್ನೂ ಪ್ರಯತ್ನಿಸುತ್ತಿದ್ದೇವೆ. ಹೀಗಾಗಿ ಪೋಷಕಾಂಶಗಳಲ್ಲಿ ಒಂದಾದ ಸೋಡಿಯಮ್ ಇತರ ಪೋಷಕಾಂಶಗಳ ಮೇಲೆ ಬೀರುವ ಪ್ರಭಾವವೇನೆಂಬುದನ್ನು ಅರಿಯದೆ, ಉಪ್ಪಿನ ಸೇವನೆಯ ಪ್ರಮಾಣವನ್ನು ಬದಲಾಯಿಸುವುದು ಅಪಾಯಕರ.''

ರಕ್ತದ ಒತ್ತಡ ಅಧಿಕವಾಗಿರುವವರನ್ನು ಕಡಿಮೆ ಉಪ್ಪಿನ ಪಥ್ಯಕ್ಕೆ ಒಳಪಡಿಸಿದಾಗಲೂ ಅವರಲ್ಲಿ ಕೆಲವರ ರಕ್ತದ ಒತ್ತಡ ಏರಿರುವುದು ಸಮೀಕ್ಷೆಗಳಿಂದ ತಿಳಿದುಬಂದಿದೆ. ಆದ್ದರಿಂದ ಉಪ್ಪಿನ ಅಧಿಕ ಸೇವನೆಯೊಂದೇ ರಕ್ತದ ಒತ್ತಡ ಏರಲು ಕಾರಣ ಎನ್ನಲಾಗದು. ಅಷ್ಟೇ ಅಲ್ಲ, ಕಡಿಮೆ ಉಪ್ಪಿನ ಪಥ್ಯವೊಂದೇ ಅಧಿಕ ರಕ್ತದ ಒತ್ತಡಕ್ಕೆ ಪರಿಹಾರವೂ ಆಗುವುದಿಲ್ಲ. ಕಡಿಮೆ ಉಪ್ಪಿನ ಸೇವನೆಯು ಹೃನ್ನಾಳ ಸಂಬಂಧಿ ರೋಗಗಳು, ಪಾರ್ಶ್ವವಾಯು ಹಾಗೂ ಹೃದ್ರೋಗ ಗಳಿಗೂ ಕ್ರಮೇಣ ಕಾರಣವಾಗಬಹುದು.

ಅದೆಲ್ಲ ಸರಿ. ಉಪ್ಪು ದೇಹಕ್ಕೆ ಕೆಟ್ಟದ್ದು ಎಂದು ಹೇಳುವ ತಜ್ಞರೂ ಇದ್ದಾರಲ್ಲ, ಹಾಗಾದರೆ ಯಾರ ಮಾತು ಸರಿ? ಈ ಪ್ರಶ್ನೆಗೆ ಇದಮಿತ್ಥಂ ಎಂದು ಹೇಳುವಂತಹ ಪರಿಹಾರವೇ ಇಲ್ಲವೆ? ಎಂದು ನೀವು ಕೇಳಬಹುದು. ಖಂಡಿತವಾಗಿಯೂ ಇದೆ. ಡಾ. ಲರಾಗ್ ಎಂಬ ತಜ್ಞರು ಹೇಳುವಂತೆ, ''ಉಪ್ಪು ನಿಮ್ಮ ಶತ್ರುವಲ್ಲ; ಮಾನವನ ಆರೋಗ್ಯಕ್ಕೆ ಸಂಬಂಧಿಸಿದಂತೆ ಹೇಳುವುದಾದರೆ ಅದು ಅತ್ಯಂತ ಪ್ರಮುಖ ಘಟಕ. ಹೀಗಾಗಿ ನಮಗೆ ಉಪ್ಪಿನ ಆವಶ್ಯಕತೆಯಿಲ್ಲವೆಂಬ ಭಾವನೆಯೇ ತಪ್ಪು. ಉಪ್ಪಿನ ಸೇವನೆಗೆ ಸಂಬಂಧಿಸಿದ ಯಾವುದಾದರೂ ಸಮಸ್ಯೆ ಇದೆಯೆಂದು ನಿಮ್ಮ ಕುಟುಂಬ ವೈದ್ಯರು ಎಚ್ಚರಿಸುವ ತನಕ ನೀವು ಉಪ್ಪನ್ನು ಬಿಡಬೇಕಾಗಿಲ್ಲ. ●

---

ಮಕ್ಕಳಿಲ್ಲದವರಿಗೆ ಮನೆ ಬರಿದು, ಒಳ್ಳೆಯ ಗೆಳೆಯನಿಲ್ಲದವನಿಗೆ ಮನ ಬರಿದು, ಮೂರ್ಖನಿಗೆ ದಿಕ್ಕುಗಳೇ ಬರಿದು, ದರಿದ್ರನಿಗೋ ಜಗತ್ತೇ ಬರಿದು.

– ಶೂದ್ರಕ

ಈ ಜಗತ್ತಿನಲ್ಲಿ ಹುಟ್ಟುವಾಗ ನೀವು ಏನನ್ನೂ ತಂದಿರುವುದಿಲ್ಲ. ಆದ್ದರಿಂದ ಆಮೇಲೆ ಸಂಭವಿಸುವುದೆಲ್ಲವೂ ನಿಮ್ಮಳ ಲಾಭವೇ ಸರಿ.

– ಥಾಮಸ್ ಸ್ಟೀಲ್

ಪ್ರತಿಯೊಬ್ಬರೂ ಪ್ರತಿದಿನವೂ ಏನಿಲ್ಲೆಂದರೂ ಒಂದೈದು ನಿಮಿಷಗಳಾದರೂ ಮೂರ್ಖನಾಗಿಯೇ ಇರುತ್ತಾರೆ. ಈ ಐದು ನಿಮಿಷಗಳ ಅವಧಿ ಹೆಚ್ಚದಂತೆ ನೋಡಿಕೊಳ್ಳುವುದರಲ್ಲಿಯೇ ಬುದ್ಧಿವಂತಿಕೆ ಇದೆ.

– ಗೋಲ್ಡ್ ಸ್ಮಿತ್

(ಸಂಗ್ರಹ) ಭೀಮಸೇನ ಪದಕಿ

# ಮದುವೆಗೊಂದು ಜಾತ್ರೆ

ಮುರಳೀಧರ ಖಜಾನೆ

ಫಾಲ್ಗುಣ ಮಾಸದ ಗಾಳಿ।
ಹರೆಯದ ಹಾಡನು ಕೇಳಿ।।
ಚೈತ್ರದ ಸಿಂಗಾರವತಾಳಿ।
ಎದೆಯೊಳು ಹೂಡಿದ ದಾಳಿ।।
(ಗುಜರಾತಿ ಜಾನಪದ ಹಾಡು)

ಅದೊಂದು ದೊಡ್ಡ ಜಾತ್ರೆ. ಬೆಳ್ಳಿ ಬಂಗಾರದ ಎಳೆಗಳಿಂದ ಕಸೂತಿ ಮಾಡಿದ ಬಣ್ಣ ಬಣ್ಣದ ಜಾಕೀಟು ಧರಿಸಿದ ಸುಂದರ ಯುವಕನೊಬ್ಬ ಬಣ್ಣದ ಛತ್ರಿಯೊಂದರ ಕೆಳಗೆ ಕುಳಿತು ಹಾದು ಹೋಗುವ ಚೆಲುವೆಯರ ಗುಂಪಿನತ್ತ ನೋಡುತ್ತಿದ್ದಾನೆ. ಗುಂಪಿನ ಮಧ್ಯೆ ಅಪ್ಸರೆಯಂತೆ ಅಪರೂಪ ರೂಪದ ಇಪ್ಪತ್ತರ ಹರೆಯದ ಸುಂದರಿ, ಹರೆಯದ ಮಬ್ಬು ಉಬ್ಬುಗೊಂಡ ಅಂಗಸೌಷ್ಠವ. ಮುಖಕ್ಕೆ ಒಪ್ಪವಿಡುವ ಕಪ್ಪು ಕಂಗಳ ಅಂಗಳದಲ್ಲಿ ಯೌವನ ಉಕ್ಕಿ ಏರಾಟ ನಡೆಸಿತ್ತು. ಇಷ್ಟೇ ಸಾಲದೆಂಬಂತೆ ಪಚ್ಚೆಪಯರಿನ ಹಚ್ಚ ಹಸಿರಿನ ಲಂಗ ಬೇರೆ. ಹಿಂದೆ ಬಿಗಿದು ಕಟ್ಟದ ಕುಪ್ಪಸದ ಪರಿವೇಶದಲ್ಲಿ ಎದ್ದು ಕಾಣುವ ವಕ್ರರೇಖೆಗಳಿಗೆ ಮೆರಗು ಕೊಡುವ ಬೆಳ್ಳಿಯ ಆಭರಣಗಳ ಸಡಗರ. ಇವರಿಬ್ಬರ ದೃಷ್ಟಿ ಒಂದಾಯಿತು. ಒಂದು ಕಾಣದ ಎಳೆತ ಒಂದು ಮಾಣದ ಸೆಳೆತಕ್ಕೆ ಸಿಕ್ಕಿ ಹೋದ ಇಬ್ಬರೂ ಒಬ್ಬರನ್ನೊಬ್ಬರು ಮೆಚ್ಚಿದರು. ಅವರವರ ಹಳ್ಳಿಗೆ ಹಿಂದಿರುಗುವ ಮುನ್ನ ಹಳ್ಳಿಯ ಜನ, ತಂದೆ ತಾಯಿ ಪರಸ್ಪರ ಮದುವೆಯ ಮಾತುಕತೆ ಪ್ರಾರಂಭಿಸಿದರು.

ಮೆಲ್ನೋಟಕ್ಕೆ ಸುಖಾಂತದ ಒಂದು ಸುಂದರ ಕಥೆಯಂತೆ ಕಾಣುವ ಈ ಘಟನೆ. ಗುಜರಾತಿನ ಸೌರಾಷ್ಟ್ರ ಭಾಗದ ತಾರನೇತರ್‌ನ ತ್ರಿನಿತ್ರೇಶ್ವರ ಮಹದೇವನ ಜಾತ್ರೆಯ ಒಂದು ಸಾಮಾನ್ಯ ದೃಶ್ಯ. 14ನೇಯ ಶತಮಾನದ ತ್ರಿನಿತ್ರೇಶ್ವರ ದೇವಾಲಯ ಮೂರು ಕಡೆಗಳಲ್ಲೂ ಸರೋವರದಿಂದ ಸುತ್ತುವರೆದಿದೆ. ಪ್ರತಿವರ್ಷ ಭಾದ್ರಪದ ಶುದ್ಧ ಅಥವಾ ಋಷಿಪಂಚಮಿಯಂದು ಗಂಗೆ ಸರೋವರ ಸೇರುವಳೆಂದು ಒಂದು ಪ್ರತೀತಿ. ಅಂದು ಸರೋವರದಲ್ಲಿ ಮಾಡಿದ ಸ್ನಾನ ಗಂಗಾಸ್ನಾನಕ್ಕೆ ಸಮವಂತೆ ಅಂದು ಸಾವಿರಾರು ಜನ

ಸರೋವರದಲ್ಲಿ ಸ್ನಾನ ಮಾಡುತ್ತಾರೆ. ಅಂದೇ ಈ ಪ್ರಸಿದ್ಧ ತ್ರಿನಿತ್ರೇಶ್ವರನ ಜಾತ್ರೆ ನಡೆಯುವುದು.

ಇದು ಗಂಡು ಹೆಣ್ಣುಗಳು ಪರಸ್ಪರ ಆಯ್ಕೆ ಮಾಡಿಕೊಳ್ಳುವ ಒಂದು ಜಾತ್ರೆ. ಮದುವೆಯಾಗದ ಯುವಕರು ಕೈಗಳಲ್ಲಿ ಬಣ್ಣದ ಛತ್ರಿಗಳನ್ನು ಹಿಡಿದು ಈ ಜಾತ್ರೆಗೆ ಬರುತ್ತಾರೆ. ತಮ್ಮ ಜೊತೆಗಾರನ್ನು ಅರಸುತ್ತಾ ಲಲನೆಯರು ಈ ಹುಡುಗರ ಪೈಕಿ ತಮಗೆ ಅನುರೂಪರಾದವರನ್ನು ಆಯ್ದುಕೊಳ್ಳುತ್ತಾರೆ. ನಂತರ ಆತನ ಛತ್ರಿಯಡಿ ಕುಳಿತು ಮಾತನಾಡುತ್ತಾರೆ. ಜಾತ್ರೆ ಮುಗಿದು ಹಿಂದಿರುಗುವಾಗ ತಂದೆ ತಾಯಿ, ಹಳ್ಳಿಯವರು ಈ ಗಂಡು ಹೆಣ್ಣುಗಳ ಮದುವೆಯ ಮಾತುಕತೆ ಆರಂಭಿಸುತ್ತಾರೆ. ಇದು ಈ 'ಜೋಡಿ ಜಾತ್ರೆ.' ಯ ಸಂಪ್ರದಾಯ.

ಇಲ್ಲಿ ಗಂಡಸರು ಸುತ್ತುವ ರುಮಾಲಿನದೇ ಬಹು ವಿಶೇಷ. ಅದು ಅವರು ವಿವಾಹಿತರೇ? ಅವಿವಾಹಿತರೇ? ಎಂಬುದನ್ನು ಸೂಚಿಸುತ್ತದೆ. ಮದುವೆಯಾದವರು ಹಸಿರು ಅಥವಾ ಕೆಂಪು ರುಮಾಲು ಧರಿಸಿರುತ್ತಾರೆ. ಹುಡುಗಿಯರನ್ನು ಅರಸುವವರು ರುಮಾಲು ಧರಿಸುವುದಿಲ್ಲ. ಗುಪ್ತಗಾಮಿನಿಯಾಗಿ ಹರಿದು ಬಂದು ಈ ಅವರು ರುಮಾಲನ್ನು ಕೊರಳ ಸುತ್ತ ಸುತ್ತಾರೆ. ಕಡುಗೆಂಪು ರುಮಾಲು ಧರಿಸಿದ ಒಂದಕ್ಕಿಂತ ಹೆಚ್ಚು ಸಾರಿ ಮದುವೆಯಾದ ಎಂದರ್ಥ.

ಜಾತ್ರೆಯ ಎರಡನೇಯ ದಿನ ತ್ರಿನಿತ್ರೇ ದೇವಾಲಯದ ಮೇಲೆ ಕಳೆದ ವರ್ಷ ಏರಿ ಕೇಸರಿ ಧ್ವಜವನ್ನು ಇಳಿಸಿ ಹೊಸ ಧ್ವಜವ ಏರಿಸುತ್ತಾರೆ. ಅಂದಿನ ಮುಖ್ಯ ಕಾರ್ಯಕ್ರ ದುಹಾ ಹಾಡುವುದು. ದುಹಾದ ಒಂದೊಂ ಭಾಗವನ್ನು ಗಂಟೆಗಟ್ಟಲೆ ಹಾಡುತ್ತಾ ಮಧ್ಯಾಹ್ನ ಗುಜರಾತಿನ ಖ್ಯಾತ ಜಾನಪದ 'ರಾಸ್'. ಇದಕ್ಕೆ ಢಕ್ಕೆ ಹಾಗೂ ಜೋಡಿ ಕೆ ಲಿನ ಸಾಥಿ ಬೇರೆ. 'ರಾಸ್ ಗರ್ಭ' ನೃತ್ಯ ಸ್ಪ ಈ ಜಾತ್ರೆಯ ಒಂದು ವಿಶೇಷ. ಅಂದು ರ 'ಭವಾಯಿ' ಕಾರ್ಯಕ್ರಮ (ಗುಜರಾ ಸಂಗೀತ ನಾಟಕ ಹಾಗೂ ನೃತ್ಯದ ಜಾನ ರೂಪ.) ಜೊತೆ ಜೊತೆಗೆ ಕೀರ್ತನ್ ಹಾ ಲೋಕಗೀತೆಗಳ ಗಾಯನ ಬೇರೆ.

ಮಾರನೇಯ ದಿನ ತಾರನೇತರ ಖಾ ಮುಂದಿನ ಸಾರಿ ಜಾತ್ರೆಗೆ ಬರುವಾಗ ಅರಸಿದ ಜೋಡಿ ಆಗ ಜಕ್ಕವಕ್ಕಿಗಳು.

(ಸಾಭಾ

# ಮೂಡಬಿದಿರೆ ಸಂಜೀವರಾಯರು

ಪ್ರಸನ್ನವದನದ ಮೇಲೆ ಸರ್ವದಾ ಸಿರುತ್ತಿದ್ದ - ಕಪಟ ಮೋಸ ತಟವಟಗಳನ್ನ ಂದ - ಸ್ನಿಗ್ಧ ಮಂದಹಾಸ, ಹೊಳಪು ಮರೆ ಗಿದ್ದರೂ ಕನ್ನಡಕದ ಹಿಂದೆ ಸೆರೆಯಾಗಿ ಕಪರತೆಯನ್ನು ಹೊಮ್ಮಿಸುತ್ತಿದ್ದ ಕಣ್ಣು , ಆ ವಿಶ್ವಾಸ, ಆ ಸೌಜನ್ಯ, ಕಷ್ಟದಲ್ಲಿರುವ ನೆರವಿಗೆ ಧಾವಿಸುವ ಮನೋಧರ್ಮ - ತ್ಯಾದಿ ಗುಣಸಂಪನ್ನ..... ಇವೆಲ್ಲದರ ಳವೇ ಮೂಡಬಿದಿರೆ ಸಂಜೀವರಾಯರು. ನುಷ್ಯನಾದವನು ತನ್ನ ಬದುಕಿನ ಇತಿಮಿತಿ ಲ್ಲಿ ಇದಕ್ಕಿಂತ ಹೆಚ್ಚಿನದೇನನ್ನೂ ಸಾಧಿಸ ಏದು ಎಂಬ ಅಚ್ಚರಿ ಮೂಡಿಸುವಷ್ಟು ನ್ನತವಾದ ಪಕ್ವ ಚೇತನ ಅವರದು.

ಬೆಂಗಳೂರಲ್ಲಿ ದಿ. ವಿ.ಸೀ.ಯವರ ಮನೆ ಮ್ಮೆ ಸಂಜೀವರಾಯರು ಬಂದಿದ್ದಾಗ ನ್ನಾರು ಸಲ ಅವರನ್ನು ನಾನು ಕಂಡಿದ್ದೆ. ೀಷವಾಗಿ, ವಿ.ಸೀ. ಲಂಡನ್ನಿಗೆ ಹೊರಟಂದು ಂಬಯಿಯಲ್ಲಿ ರಾಯರ ಮನೆಯಲ್ಲಿ ನೆಲ್ಲ ಒಟ್ಟಿಗೆ ಎರಡು ದಿನ ತಂಗಿದ್ದಾಗ, ರನ್ನು ಇನ್ನೂ ಹೆಚ್ಚು ಸಮೀಪದಲ್ಲಿ ಡಿದ್ದೆ. ಇದಕ್ಕಿಂತ ಹೆಚ್ಚಿನ ಸಂಬಂಧ, ಪರಿ ು, ಆಪ್ತತೆ ನನಗಿಲ್ಲ.

ಒಮ್ಮೆ ಅವರನ್ನು ಕಂಡವರಿಗೂ ಅವರ ನೆನಪು, ಪ್ರಭಾವ ಮಾಸದೆ ಉಳಿಯುವಂಥ ಪರಿಣಾಮ ಮಾಡುವಂಥದು ರಾಯರ ವ್ಯಕ್ತಿತ್ವ. ಆದ್ದರಿಂದಲೇ ಡಾ. ಶಿವರಾಮ ಕಾರಂತರು ರಾಯರನ್ನು ಕುರಿತು ''ಅವರನ್ನು ನೆನೆವಾಗೆಲ್ಲ ಒಳ್ಳೆಯತನದ ಒಂದು ಮೂರ್ತಿಮತ್ತ ಜೀವ ಇದಿರಾಗುತ್ತದೆ,'' ಎಂದಿರುವುದು.

ಮಾತು ನಡೆನುಡಿಗಳಲ್ಲಿ ರಾಯರು ತುಂಬ ಸಂಯಮಿ. ಈ ಸಂಗತಿ ಅವರ ಸಂಪರ್ಕಕ್ಕೆ ಬಂದ ಎಲ್ಲರಿಗೂ ಮೊದಲ ಪರಿಚಯಕ್ಕೇ ಅರಿವಾಗುತ್ತಿತ್ತು. ಅವರು ಆಡುತ್ತಿದ್ದ ಮಾತು ಕಡಿಮೆ. ಅಲ್ಲಿನ ನಯ, ಮೆದುತನ ಸುಲಭವಾಗಿ ಸಾಧಿಸಲಾಗದ್ದು; ಆದರೆ ಅಷ್ಟೇ ಖಚಿತವಾದ್ದು, ಖಂಡಿತದ್ದು. ಅಪಾರ್ಥ - ಹಾಸ್ಯ - ಕುಚೋದ್ಯಗಳಿಗೆ ಅಲ್ಲಿ ಸುತರಾಂ ಎಡೆಯಿಲ್ಲ. ಹೃದಯವನ್ನು ನೇರ ಹೊಗುವಂತೆಯೇ, ಮನಸ್ಸಿಗೆ ಆಪ್ಯಾಯಮಾನವಾಗುವಂತೆಯೇ ಆಡಿದವರ ಬಗೆಗೆ ಗೌರವಭಾವನೆ ತಳೆಸುವಂತೆಯೇ ಅದನ್ನು ಮೀರಲು, ಎದುರು ಉತ್ತರಿಸಲು ಪ್ರತಿ ಹೇಳಲು ಅಶಕ್ಯ ಎನ್ನಿಸುವಂಥದು. ಅವರ ಮಾತುಗಳ ಹಿಂದಿನ ಅರ್ಥವಂತಿಕೆ ಆಪ್ತವಾದ ಹಾರ್ದತೆಯ ಗರ್ಭವುಳ್ಳದ್ದು, ಪೂರ್ವಾಲೋಚ



ನೆಯ ನೆಲಸಿನದು, ಸದುದ್ದೇಶಪೂರಿತವಾದ ಮಾನವೀಯ ಗುಣವುಳ್ಳದ್ದು. ತತ್ಕ್ಷಣಕ್ಕೆ ಇದನ್ನು ಗ್ರಹಿಸದೆ ಹೋಗಬಹುದಿತ್ತಾದರೂ ಅರಿವು ತಟ್ಟುವಾಗ ವಿಸ್ಮಯವಾಗುತ್ತಿತ್ತು. ಆ ಅರ್ಥವಂತಿಕೆಯ ಬಗ್ಗೆ ಗೌರವ ಬೆಳೆಯುತ್ತಿತ್ತು.

ಅವರಲ್ಲಿ ನಾವು ತಂಗಿದ್ದ ಎರಡು ದಿನಗಳಲ್ಲಿ ಒಂದು ದಿನ 'ಮುಂಬಯಿ ಬಂದ್' ಆಚರಿಸಲ್ಪಟ್ಟಿತು. ಆ ಕಾರಣ ಆ ದಿನ ಬ್ಯಾಂಕುಗಳಲ್ಲಿ ವ್ಯವಹಾರ ನಡೆಯದೆ ಹೋಗಿ, ವಿ.ಸೀ. ಅವರಿಗೆ ತಕ್ಷಣಕ್ಕೆ ವಿದೇಶೀ ವಿನಿಮಯ ದೊರೆಯದಾಯಿತು. ರಾಯರು ಕೂಡಲೇ ಅವರನ್ನು ಏರ್‌ಪೋರ್ಟಿಗೆ ಕರೆದೊಯ್ದು, ಅಲ್ಲಿ ಉದ್ಯೋಗದಲ್ಲಿದ್ದ ತಮ್ಮ ಬಂಧುವೊಬ್ಬರನ್ನು ಹಿಡಿದು, ಅವರ ಮೂಲಕ ಹೇಗೋ ಆ ಕಷ್ಟಸಾಧ್ಯ ಕೆಲಸವನ್ನು ಕೆಲವೇ ನಿಮಿಷಗಳಲ್ಲಿ ಸುಸೂತ್ರವಾ ನೆರವೇರಿಸಿಕೊಟ್ಟರು. ಆಗ ಅವರು ಆ ಬ[illegible] ವಿಗೆ ಹೇಳಿದ್ದು, "ಹೌದಲ್ಲವೊ? ಅದು ಮು[illegible] ವಾದ ಕೆಲಸ ಅಲ್ಲವೊ? ಲಂಡನ್ ತಲು[illegible] ಮೇಲೆ ಅಲ್ಲಿಗೆ ಅವರನ್ನು ರಿಸೀವ್ ಮಾಡ[illegible] ಅಕಸ್ಮಾತ್ ಸ್ನೇಹಿತರು ಬಾರದಾದರೆ, ಅಥ[illegible] ಅವರು ಬರಲು ತಡವಾದರೆ, ಫಕ್ಕನೆ [illegible] ಫೋನ್ ಮಾಡಲಾದರೂ ಇವರ ಹ[illegible] (ವಿದೇಶೀ ವಿನಿಮಯದ) ದುಡ್ಡಿರಬೇಕಲ್ಲವೆ? ಅಲ್ಲಿ ಹೋಗಿ ಯಾರನ್ನು ಕೇಳಬೇ[illegible] ಇವರು?'' ಇಂಥ ನುಡಿತದ ಹಿಂದಿನ ದೂರಾಲೋಚನೆ ಅಪೂರ್ವವಾದದ್ದು. ಅ[illegible] ಸಮಯ ಪ್ರಜ್ಞೆಯೂ ಅಷ್ಟೇ ಚುರುಕಾದ್ದು[illegible]

ರಾಯರ ಮಿತ್ರವರ್ಗ ದೊಡ್ಡದು: ಗ[illegible] ಸಾಹಿತಿಗಳು, ಕಲಾಕಾರರು, ಸಾರ್ವಜನಿಕ ಸೆ[illegible] ಯಲ್ಲಿರುವವರು ಮುಂತಾದವರು. ಮುಂ[illegible] ಯಿಗೆ ಬಂದ ಈ ಮಿತ್ರವರ್ಗದವರಿಗೆಲ್ಲ ವ[illegible] ಯಲ್ಲಿ ವಸತಿ, ಊಟ, ತಿಂಡಿ, ಓಡಾ[illegible] ವಾಹನ ಸೌಕರ್ಯ, ಮಾತುಕತೆಗೆ ಸ್ನೇಹಿತ ವ[illegible] ಎಲ್ಲವನ್ನೂ ರಾಯರು ವ್ಯವಸ್ಥೆ ಮಾಡಿಕೊಡು[illegible] ದ್ದರು. ಇದು ಅವರ ಸ್ವಭಾವ, ಸಂಪ್ರದಾ[illegible] ಸಾಲದುದಕ್ಕೆ ಅತಿಥಿಗಳ ಎಲ್ಲ ಕೆಲಸ, ಕಾರ್ಯಕ್ರ[illegible] ಗಳಿಗೆ - ಯಾವುದೇ ಹೊತ್ತಿನಲ್ಲಿ ಏನೇ ಕೆ[illegible] ವಾಗಬೇಕಿರಲಿ - ರಾಯರ ಸಹಾಯಹಸ್ತ [illegible] ಗುತ್ತಿತ್ತು. ರಾಯರ ಸ್ನೇಹಿತರೂ ಅ[illegible] ಮಾತುಂಗಾ ಮನೆಗೆ ತುಸುವೇ ದೂರ ಇ[illegible] ವರೂ ಆದ ರಾಜಾರಾಮ ರಾಯರು (ಎ.ಆ[illegible] ರಾವ್; ಹಿರಿಯರಾದ ಪಂಜೆ ಮಂಗೇಶರಾಯ[illegible] ಅಳಿಯಂದಿರು, ಶ್ರೀಮತಿ ಅನಸೂಯಾ ದೇ[illegible] ಯವರ ಯಜಮಾನರು - 'ಇಕನಾಮಿ[illegible] ಟೈಮ್ಸ್' ಪತ್ರಿಕೆಯ ಸಂಪಾದಕ ವರ್ಗದಲ್ಲಿದ[illegible] ನಿವೃತ್ತರಾಗಿದ್ದವರು) ಒಮ್ಮೆ ವಿ.ಸೀ.ಯವರ[illegible]

**ಮುಂಬಯಿಯ ಮಹಾಗದ್ದಲದ ನಡುವೆಯೂ ಕನ್ನಡ ನಾಡುನುಡಿ ಸಂಸ್ಕೃತಿಗಳ ಏಳಿಗೆಗೆ ಸದ್ದಿಲ್ಲದೆ ಸೇವೆ ಸಲ್ಲಿಸಿದ ಅಗ್ರಮಾನ್ಯ ಕನ್ನಡಿಗ.**

ಜೀವರಾಯರ ಬಗೆಗೆ ಪ್ರಾಸಂಗಿಕವಾಗಿ ತಿಳಿ ಸ್ತ "You are with the most proper son in Bombay. With the resources at disposal and with his contacts, there nothing that Mr. Sanjeeva Rao could get it done" ಎಂದಿದ್ದರು. ಈ ನುಡಿತ ರ್ಥಾ ನಿಜವಾದದ್ದು. (ಆದರೆ ಇಂಥ ತು ರಾಯರ ಕಿವಿಗೆ ಬಿದ್ದರೊ - "ಏ, ಪ್ಪ, ನನಗೆ ಅಂಥ resources ಏನೂ ಲ, contacts ಮೊದಲೇ ಇಲ್ಲ; ನಾನು ಬರೀ ಲಿಕಾರ. ದೊಡ್ಡ ಮನುಷ್ಯರ contacts ಲವೇ ಇಲ್ಲ. ಯಾರು ಅವರ ಮನೆಯ ಗಿಲು ಕಾಯಲು ಸಾಧ್ಯ?" ಎಂದು ತುಂಬು ಯದಲ್ಲಿ ನುಡಿದು, ಅಂಥ ಮಾತನ್ನು ದೆ ತಳ್ಳಿ ಹಾಕಿಬಿಡುವರು.) ಏನೆಲ್ಲ ಮಾಡಿ ಹೂ ಎಷ್ಟೆಲ್ಲ ನೆರವು ನೀಡಿದರೂ ಯಾವು ನ್ನೂ ಮಾಡಿದೆನೆಂದು, ನೀಡಿದೆನೆಂದು ಹೇಳಿ ಳ್ಳದ, ತೋರಿಸಿಕೊಳ್ಳದ, ಪ್ರತಿಯಾಗಿ ಏನನ್ನೂ ನಿರೀಕ್ಷಿಸದ ದೊಡ್ಡಗುಣ ಅವರದು.

ಸ್ವಂತ ಬದುಕಿನಲ್ಲಿ ರಾಯರು ಬಹುವಾಗಿ ನಷ್ಟ ಅನುಭವಿಸಿದವರು. ಬಡತನದಲ್ಲಿ ಟ್ಟಿ ಬಡತನದಲ್ಲಿ ಬೆಳೆದು ತಮ್ಮ ಕಾಲ ಲೆ ತಾವು ನಿಂತು ಬದುಕನ್ನು ರೂಪಿಸಿಕೊಂ ರು. ಅಪಾರ ಶ್ರಮವಹಿಸಿ ವಿದ್ಯಾಭ್ಯಾಸ ಂದುವರೆಸಿದರೂ ಹೈಸ್ಕೂಲಲ್ಲಿ ಓದುತ್ತಿರು ಗಲೊ ಏನೊ ತಂದೆ ನಿಧನರಾದ ಸಂದರ್ಭ ಲ್ಲಿ ಕೆಲವು ದಿನ ಶಾಲೆಗೆ ಇವರು ಹೋಗದಿದ್ದು ನ್ನು ತಪ್ಪು ತಿಳಿದ ಮೇಲಿನ ಉಪಾಧ್ಯಾಯರು, ಮೆ ಅಂಕ ಗಳಿಸಿದ್ದ ವಿದ್ಯಾರ್ಥಿಗಳೆಲ್ಲರಿಗೂ ಸ್.ಎಸ್.ಸಿ. ಪರೀಕ್ಷೆಗೆ ಕುಳಿತುಕೊಳ್ಳುವ ಅವ ಶ ಕಲ್ಪಿಸಿ, ಎಲ್ಲ ವಿಧದಲ್ಲಿಯೂ ಮೇಲ್ತರದ ದ್ಯಾರ್ಥಿ ಆಗಿದ್ದ ಇವರಿಗೆ ಆ ಅವಕಾಶ ಪ್ಪಿಸಿ, ಇವರ ವಿದ್ಯಾರ್ಜನೆಯ ಉತ್ಸಾಹಕ್ಕೆ ನೀರೆರಚಿದರಂತೆ. ಹೀಗೆ ಸಂದರ್ಭದ ಬಲಿ ರುವಾಗಿ ವ್ಯಾಸಂಗ ಮುಂದುವರಿಸಲಾರದೆ ಹೋದ ರಾಯರು ತಮ್ಮ ಅದೃಷ್ಟವನ್ನು ಅರ ಸುತ್ತ ಚಿಕ್ಕವಯಸ್ಸಿನಲ್ಲಿಯೇ ಮುಂಬಯಿ ಸೇರಿದರು.

"ರಾಯರ ಬದುಕು ಬೆಳೆದು ವಿಕಸಿದುದು ಮುಂಬಯಿಯಲ್ಲಿ. ಬಲು ಕಷ್ಟದಿಂದಲೇ ಅವರು ಆ ನಗರದಲ್ಲಿ ಒಬ್ಬ ಅಜ್ಞಾತವ್ಯಕ್ತಿಯಾಗಿ ಬಾಳಿದರು. ವ್ಯಾಪಾರ ಉದ್ಯಮದಲ್ಲಿ ಕೈ ತೊಡಕಿಸಿದರು; ಆದರಿಂದ ಸಾಮಾನ್ಯ ವ್ಯಕ್ತಿ ತತ್ತರಿಸುವಷ್ಟು ನಷ್ಟ ತಂದುಕೊಂಡರು. ಆದರಿಂದ ಹತಾಶರಾಗಲಿಲ್ಲ; ತಮ್ಮ ಶೀಲವನ್ನು ಮಾರಿಕೊಳ್ಳಲಿಲ್ಲ. ದ್ವಿಗುಣಿತ ಹಠದಿಂದ ದುಡಿದು ಸಾಲಗಳನ್ನು ತುಂಬಿಸಿ, ತಲೆಯೆತ್ತಿ ನಿಲ್ಲುವ ಧೈರ್ಯ ತಂದುಕೊಂಡರು. ಮುಂದೆ ಕ್ರಮೇಣ ಅವರು ಕೈಕೊಂಡ ವ್ಯಾಪಾರೋದ್ಯಮ ಬೆಳೆಯಿತು; ಗಳಿಮೆ ಹೆಚ್ಚಿತು. ಅವರ ಮುಷ್ಟಿ ಬಿಗುವಾಗಿದ್ದರೆ - ಅವರ ಬ್ಯಾಂಕ್ ಲೆಕ್ಕ ಬೇಗಿ ಲಕ್ಷಾಧೀಶ್ವರರೆನಿಸಿ ಮೆರೆಯಬಹುದಿತ್ತು." - (ಡಾ.ಶಿವರಾಮ ಕಾರಂತ) ಆದರೆ ರಾಯರ ಮುಷ್ಟಿ ಬಿಗಿಯಲಿಲ್ಲ; ಅವರು ಲಕ್ಷಾಧೀಶ್ವರರಾಗಿ ಮೆರೆಯಬಯಸಲಿಲ್ಲ. ಪ್ರಾಮಾಣಿಕವಾಗಿ, ನ್ಯಾಯೋಚಿತ ಮಾರ್ಗದಲ್ಲಿ, ಸಾಕಷ್ಟು ಗಳಿಸಿದರು. ಆ ಗಳಿಕೆಯ ಹೆಚ್ಚಿನ ಪಾಲು, ಡಾ.ಕಾರಂತರೆಂದಿರುವಂತೆ, "ಒಳ್ಳೆಯ ಕೆಲಸಗಳಿಗೆ, ಕಂಗಾಲರಿಗೆ ಚಿಂತೆಯಿಲ್ಲದೆ ಹರಿದುಹೋಯಿತು. ಯಾರ ಮುಂದೆಯೂ ಡಂಗುರ ಸಾರದೆ ಅವರು ಬೆಂಬಲಿಸಿದ ಸಂಘಸಂಸ್ಥೆಗಳ ಕೆಲಸ, ವ್ಯಕ್ತಿಗಳು ಒಬ್ಬಿಬ್ಬರಲ್ಲ. ಹತ್ತು ಜನ ಸೇರಿ ದುಡಿವಲ್ಲಿ ತೂತನ್ನು ತುಂಬಿಸುವ ಕೆಲಸ ಅವರದು." ಇದು ರಾಯರ ಹೆಗ್ಗಳಿಕೆ.

ತಮ್ಮ ವಿದ್ಯಾಭ್ಯಾಸ ಮುಂದುವರಿಯದೆ ಅರ್ಧಕ್ಕೇ ನಿಂತು ಹೋದರೂ ಇತರರ ವಿದ್ಯಾಭ್ಯಾಸಕ್ಕೆಂದು ನಾಡಿನುದ್ದಕ್ಕೂ ಸೌಲಭ್ಯಗಳನ್ನು ಕಲ್ಪಿಸಿಕೊಡುವತ್ತ ರಾಯರು ಪ್ರಥಮ ಮನ್ನಣೆ ಕೊಟ್ಟರು. ಗುಲ್ವಾಡಿಯವರು ಹೇಳಿರುವಂತೆ "ವಿದ್ಯಾಭ್ಯಾಸ ಅವರ ಅತ್ಯಂತ ಆತ್ಮೀಯ ವಿಚಾರ. ಈ ಒಂದು ಮೂಲಭೂತ ಉದ್ದೇಶ

ಕ್ಕಾಗಿ ಅವರು ಸಾವಿರಾರು ರೂಪಾಯಿಗಳನ್ನು ಸ್ವತಃ ದಾನವಾಗಿ ನೀಡಿದ್ದಾರೆ. ಲಕ್ಷಾಂತರ ರೂಪಾಯಿಗಳನ್ನು ಸಂಗ್ರಹಿಸಿಕೊಟ್ಟಿದ್ದಾರೆ...'' ಮೂಡಬಿದಿರೆಯ ಸಮಾಜ ಮಂದಿರ, ಶ್ರೀ ಮಹಾವೀರ ಕಾಲೇಜು; ಬಾಬು ರಾಜೇಂದ್ರ ಪ್ರಸಾದ್ ಹೈಸ್ಕೂಲು, ಮುಲ್ಕಿಯ ವಿಜಯ ಕಾಲೇಜು, ಪುತ್ತೂರಿನ ವಿವೇಕಾನಂದ ಕಾಲೇಜು, ಶಿರ್ತಾಡಿಯ ಜವಾಹರಲಾಲ ನೆಹರೂ ಹೈಸ್ಕೂಲು, ಕಲ್ಲಮುಂಡಕೂರಿನ ಸರ್ವೋದಯ ಹೈಸ್ಕೂಲು, ಮುಂಬಯಿಯ ಕರ್ನಾಟಕ ಸಂಘದ ವಿಶ್ವೇಶ್ವರಯ್ಯ ಮೆಮೋರಿಯಲ್ ಹಾಲ್, ಈ ಎಲ್ಲ ಪ್ರದೇಶಗಳ ಇನ್ನೆಷ್ಟೋ ಸಂಸ್ಥೆಗಳು- ''ಎಲ್ಲವೂ ಅವರ ಶ್ರದ್ಧೆಯ, ಸಾಹಸದ, ಸೇವೆಯ ಉಜ್ವಲ ಪ್ರತೀಕ.'' ವಿಶೇಷವಾಗಿ, ಮೂಡಬಿದಿರೆಯ ಶೈಕ್ಷಣಿಕ, ಸಾಮಾಜಿಕ, ಸಾಂಸ್ಕೃತಿಕ ಬೆಳವಣಿಗೆಗೆ ರಾಯರ ಕೊಡುಗೆ ಮಹತ್ವದ್ದು. ಅವರಂತೆ ಹುಟ್ಟಿದೂರಿಗೆ ಹೆಚ್ಚಿನ ಸೇವೆ ಸಲ್ಲಿಸಿ ಋಣವನ್ನು ಹರಿಸಿಕೊಂಡವರು ವಿರಳ. ಹಾಗೇ ತಮ್ಮ ಸೇವಾಕ್ಷೇತ್ರವನ್ನು ಹುಟ್ಟಿದೂರಿಗಷ್ಟೇ ಸೀಮಿತಗೊಳಿಸಿಕೊಳ್ಳದೆ ನಾಡಿನುದ್ದಗಲಕ್ಕೂ ವಿಸ್ತರಿಸಿದ ಔದಾರ್ಯ ರಾಯರದು.

ಮುಂಬಯಿಯಲ್ಲಿ ಕನ್ನಡ ಸಾಹಿತ್ಯ ಸಂಸ್ಕೃತಿಗಳಿಗೆ ಪೋಷಣೆ ಪ್ರೋತ್ಸಾಹಗಳನ್ನೊದಗಿಸಿಕೊಟ್ಟು, ಅದನ್ನು ಅಲ್ಲಿ ಒಂದು ಚಳವಳಿಯನ್ನಾಗಿಸಿದವರೂ ಸಂಜೀವರಾಯರೆ. ಶ್ರೀಯುತರಾದ ಕೆ.ಕೆ.ಹೆಬ್ಬಾರ್, ವರದರಾಜ ಆದ್ಯ, ವ್ಯಾಸರಾಯ ಬಲ್ಲಾಳ, ಶ್ರೀನಿವಾಸ ಹಾವನೂರ, ಸಂತೋಷಕುಮಾರ ಗುಲ್ವಾಡಿ, ರಾಮಚಂದ್ರ ಉಚ್ಚಿಲ ಮತ್ತು ಇನ್ನಿತರ ಕನ್ನಡಿಗ ಮಿತ್ರವರ್ಗದೊಡನೆ ಅಲ್ಲಿಯ ಕರ್ನಾಟಕ ಸಂಘದ ಕೇಂದ್ರಬಿಂದುವಾಗಿ, ಕಲಾವಿದರಿಗೆ ಸಾಹಿತಿಗಳಿಗೆ ಹತ್ತು ಹಲವು ಬಗೆಯಲ್ಲಿ ಸಹಕಾರ, ಉತ್ತೇಜನ, ನೆರವುಗಳನ್ನಿತ್ತರು; ಸನ್ಮಾನ ಸಮಾರಂಭಗಳನ್ನು ಏರ್ಪಡಿಸಿದರು. ವಿವಿಧ ಸಾಮಾಜಿಕ ಸೇವಾ ಕಾರ್ಯಕ್ರಮಗಳನ್ನು ಹಮ್ಮಿಕೊಂಡರು. ರಾತ್ರಿ



ಕನ್ನಡಶಾಲೆಗಳನ್ನು ತೆರೆಸಿದರು. ಒಂದು ಮಾತಿನಲ್ಲಿ ಹೇಳಬಹುದಾದರೆ, ಮುಂಬಯಿ ಕನ್ನಡಿಗರಿಗೂ ಕರ್ನಾಟಕಕ್ಕೂ ಬಾಂಧವ್ಯ ಬೆಸೆವ ಸಾಂಸ್ಕೃತಿಕ ಸೇತುವಾದರು.

ಶಿವರಾಮ ಕಾರಂತರ ಯಕ್ಷಗಾನ ಪ್ರಯೋಗಗಳಿಗೆ ಸ್ಫೂರ್ತಿಯನ್ನೂ ಸಾಕಷ್ಟು ಧನಸಹಾಯವನ್ನೂ ಒದಗಿಸಲು ಮೊದಮೊದಲ ಕಾಲಗಳಲ್ಲಿ ನೆರವಾದ ಮುಂಬಯಿಯ ಯಕ್ಷಗಾನ ಪುನರುಜ್ಜೀವನ ಸಮಿತಿ, ವ್ಯಾಸರಾಯ ಬಲ್ಲಾಳರ ಮಾತಿನಲ್ಲಿ ಹೇಳುವುದಾದರೆ, ''ಸಂಜೀವ ರಾಯರ ಕೈಗೂಸು.'' ಸ್ವಯಂ ಕಾರಂತರೇ ''ನಾನು ಕೈಕೊಂಡ ಯಕ್ಷಗಾನ ಪುನರುಜ್ಜೀವನದ ಕೆಲಸ, ವಿಜ್ಞಾನಪ್ರಪಂಚದ ಕೆಲಸಗಳಿಗೆ ಅವರು ಕೊಟ್ಟ ನೆರವು, ಪ್ರೋತ್ಸಾಹಗಳೇನೂ ಕಡಿಮೆಯಲ್ಲ'' ಎಂದು ಸ್ಮರಿಸಿದ್ದಾರೆ. ಆ ಪುನರುಜ್ಜೀವನ ಸಮಿತಿಯ ಸದಸ್ಯರಲ್ಲಿ ಒಬ್ಬರಾಗಿ ಕಾರಂತರ ಜೊತೆ ದುಡಿದ ವ್ಯಾಸರಾಯ ಬಲ್ಲಾಳರು ತಾವು ಕಂಡಂತೆ ಕಾರಂತರ ''ಆ ಪ್ರಯೋಗಗಳನ್ನು ಎಲ್ಲರೂ ಪ್ರೋತ್ಸಾಹಿಸಬೇಕೆಂಬ ಉದ್ದೇಶದಿಂದ ತನ್ನ ದೇಹಾರೋಗ್ಯವನ್ನೂ ಲೆಕ್ಕಿಸದೆ, ನಾಲ್ಕೈದು ಮಾಳಿಗೆಗಳನ್ನೇರಿ

ಮುಂಬಯಿಯ ರಾತ್ರಿ ಶಾಲೆಗಳನ್ನು ಸಂದರ್ಶಿಸಿ, ಮುಂದ ಆ ವಿದ್ಯಾರ್ಥಿಗಳಿಂದ ದೊರಕಿದ ಪ್ರೋತ್ಸಾಹಕ್ಕೆ ತಾನು ಕೃತಜ್ಞ ಎನ್ನುವಂತೆ, ಕಾರಂತರ 'ವಿಜ್ಞಾನ ಪ್ರಪಂಚ'ದ ಎಲ್ಲ ಸಂಪುಟಗಳನ್ನೂ ತರಿಸಿ ಆ ಶಾಲೆಗಳಿಗೆ ದಾನವಾಗಿ ಕೊಟ್ಟ ಸಂಜೀವರಾಯರ ಅಂತಃಕರಣವನ್ನು ಎಷ್ಟು ನೆನೆದರೂ ಕಡಿಮೆಯೇ....'' ಎಂದಿದ್ದಾರೆ. ರಾಯರ ಹೃಯದವಂತಿಕೆಗೆ ಇದಕ್ಕಿಂತ ಹೆಚ್ಚಿನ ಉಲ್ಲೇಖ ಬೇಕೆ? ಅಷ್ಟೇ ಅಲ್ಲ, ಆ ಸಂದರ್ಭದಲ್ಲಿ ರಾಯರ ಶ್ರಮ ವಿಪರೀತವಾಗಿ, ಆ ಕಾರಣ ಹೃದ್ರೋಗದಿಂದ ಹಾಸಿಗೆ ಹಿಡಿದುದನ್ನೂ ತಿಳಿಸುತ್ತ, ''ಅನಾರೋಗ್ಯದಿಂದ ಚೇತರಿಸಿಕೊಂಡ ಮೇಲೂ 'ಇನ್ನು ಸಾರ್ವಜನಿಕ ಜೀವನಗಳಿಂದ ದೂರವಿರುತ್ತೇನೆ' ಎಂದು ಸಂಜೀವರಾಯರು ಆರಾಮವಾದ ಜೀವನವನ್ನು ಬಯಸಲಿಲ್ಲ; ಅವರ ಕರ್ತವ್ಯಪ್ರಜ್ಞೆ ಎಲ್ಲರಿಗೆ ಆದರ್ಶವಾಗಿ, ಅದೇ ರೀತಿ ಮುಂದುವರಿಯಿತು'' ಎಂಬುದನ್ನೂ ಬಲ್ಲಾಳರು ತಿಳಿಸಿದ್ದಾರೆ. ಅಂಥ ಧೀರಚೇತನ ರಾಯರದು.

ಚಿಕ್ಕಂದಿನಲ್ಲಿಯೇ ಜೈನಧರ್ಮ ಮತ್ತು ಗಾಂಧೀತತ್ವ ಪ್ರಣಾಳಿಕೆಗಳ ಗಾಢ ಪ್ರಭಾವಕ್ಕೆ ಸಿಲುಕಿದ್ದ ರಾಯರು ಆ ಗುಣಾದರ್ಶಗಳನ್ನು ತಮ್ಮ ಬದುಕಿನಲ್ಲಿ ಅಳವಡಿಸಿಕೊಂಡು ಅನುಷ್ಠಾನಕ್ಕೆ ತಂದರು. ಮೊದಲನೆಯದಾಗಿ, ಸರಳ ಋಜು ಪ್ರಾಮಾಣಿಕ ಜೀವನ ನಿರ್ವಹಣೆಯನ್ನು ಆಯ್ದರು. ಮಾತ್ರವಲ್ಲ, ತಮ್ಮ ಜೀವಿತದ ಕೊನೆಯವರೆಗೆ ನಡೆಸಿಕೊಂಡು ಬಂದರು. ಸರಳ ಜೀವನದ ಮೊದಲ ಹೆಜ್ಜೆಯಾಗಿ ಶುಭ್ರವಾದ ಖಾದಿ ಉಡುಗೆಯನ್ನೇ ಧರಿಸಲಾರಂಭಿಸಿದರು: ಬಿಳಿಯ ಜುಬ್ಬ, ಕಚ್ಚೆ ಪಂಚೆ, ತಲೆಯ ಮೇಲೆ ಬಿಳಿಯ ಟೋಪಿ, ಕಾಲಿಗೊಂದು ಚಡಾವು, ಕಣ್ಣಿಗೊಂದು ಕಪ್ಪು ಕಟ್ಟಿನ ದುಂಡು ಕನ್ನಡಕ: ಇಷ್ಟೆ ಅವರ ವೇಷಭೂಷಣ. ಮನೆಯಲ್ಲಿರುವಾಗಲೂ ಖಾದಿಯದೇ ಒಂದು ಅರೆತೋಳಿನ ಒಳ ಬನಿಯನ್, ಪಂಚೆ. ಪೂರ್ತಿ ಬಕ್ಕವಲ್ಲದ ಅವರ ತಲೆಯ ಮಾಟ ಆಕರ್ಷಕ. ಆಗ ಅರವತ್ತೈದರ ಅಂಚಿನಲ್ಲಿದ್ದ ರಾಯರ ವಯೋಧರ್ಮಕ್ಕನುಗುಣವಾಗಿ ತುಸುವೇ ಸೊರಗಿದಂತೆ ಆಯಾಸಗೊಂಡಂತೆ ಇರುತ್ತಿದ್ದ ಅವರ ಮುಖದಲ್ಲಿ ಒಂದು ನಿರಿಗೆ ಎದ್ದು ಕಾಣುತ್ತಿತ್ತು. ಸರ್ವದಾ ಸುಳಿಯುತ್ತಿದ್ದ ಮಂದಹಾಸಕ್ಕೆ ಸೀಮೆಯಾಗಿ, ಆದರೆ ಆ ಎಲ್ಲೆಯನ್ನು ಮೀರದೇನೊ ಎಂಬಂತೆ ತುಂಬಾ ಒಪ್ಪವಾಗಿ, ಆ ನಿರಿಗೆ ರಾಯರ ಮುಖಕ್ಕೆ ವಿಶೇಷ ಲಕ್ಷಣವನ್ನು ತಂದುಕೊಟ್ಟಿತ್ತು. ಅವರದು ಸ್ಪಷ್ಟ ಮಾತು, ಸ್ಪಷ್ಟ ಉಚ್ಚಾರ, ಸಮಧಾತುವಿನ ನುಡಿತ: ಆ ದನಿ ಏರದ್ದು, ಕುಗ್ಗದ್ದು, ಕಾಕು ಕಾಣದ್ದು.

ಮುಂಬಯಿಯ ಜನಸಾಂದ್ರ ಪ್ರದೇಶವಾದ ದಾದರಿನ ಅವಂತಿಕಾಬಾಯಿ ಗೋಖಲೆ ರಸ್ತೆಯಲ್ಲಿ 'ಚಾಂಪಿಯನ್ ಆಟೋ ಪಾರ್ಟ್ಸ್ ಕಂಪನಿ' ಎಂಬ ಹೆಸರಲ್ಲಿ ಆಟೋಮೋಬೈಲ್ ಬಿಡಿಭಾಗಗಳನ್ನು ಆಮದು ಮಾಡಿ ತರಿಸಿ ಮಾರಾಟ ಮಾಡುತ್ತಿದ್ದ ಸಂಸ್ಥೆಯ ಪಾಲುದಾರರೊ ಮಾಲಿಕರೊ ಆಗಿದ್ದವರು ಸಂಜೀವರಾಯರು. ಹುಬ್ಬಳ್ಳಿ, ಬೆಳಗಾಂ, ಬೆಂಗಳೂರುಗಳಲ್ಲಿಯೂ ಅದರ ಶಾಖೆಗಳು ಇದ್ದಿರಬೇಕು; ಆ ಕಾರಣ ರಾಯರು ಆಗಾಗ್ಗೆ ಆ ಊರುಗಳಿಗೆ ಪ್ರಯಾಣ ಬೆಳೆಸುತ್ತಿದ್ದರು. ಲಕ್ಷಾಂತರ ರೂಪಾಯಿಗಳ ವ್ಯವಹಾರ ಅವರ ಮಳಿಗೆಗಳಲ್ಲಿ ನಡೆಯುತ್ತಿತ್ತೆಂಬುದನ್ನು ಯಾರೂ ಕಾಣಬಹುದಿತ್ತು. ಹೆಚ್ಚಿನ ಲಾಭದಾಸೆಗೆ ಕಡಿಮೆ ಗುಣಮಟ್ಟದ ಕಳಪೆ ನಕಲಿ ಸರಕನ್ನು ಮಾರಿ ಹೆಸರು ಕೆಡಿಸಿಕೊಂಡವರು ಅವರಲ್ಲ. ಹಾಗೇ ಮುಂಬಯಿಯಲ್ಲಿರುವ ಪ್ರತಿಯೊಂದು ದಿನವೂ ಅವರೂ ಅಣ್ಣಂದಿರಾದ ಅಣ್ಣಪ್ಪಯ್ಯನವರೂ ತಪ್ಪದೆ ಅಂಗಡಿಗೆ ಹೋಗಿ ಕುಳಿತಿರುತ್ತಿದ್ದುದೂ ವಾಡಿಕೆಯೆಂದು ಕೇಳಿದ್ದೇನೆ.

ಅಂಗಡಿಯಲ್ಲಿ ಅವರದೇ ಒಂದು ಒಳ ಕೋಣೆಯಿತ್ತು. ಅಲ್ಲಿ ಅವರ ವ್ಯವಹಾರ ನಡೆಯುತ್ತಿತ್ತು. ಹಿಂದೊಮ್ಮೆ ಅದೇ ಅಂಗಡಿಯಲ್ಲಿ ತಾವೂ ಕೆಲಸಕ್ಕಿದ್ದರೆಂದು ಅವರಿಂದಲೇ ಕೇಳಿದ್ದ ನೆನಪು. ತಮ್ಮ ಪ್ರಾಮಾಣಿಕತೆ, ಸೌಜನ್ಯ, ಪರಿಶ್ರ

ಮಗಳಿಂದ ಮುಂದೆ ಪಾಲುದಾರರಾಗಿಯೊ ಮಾಲೀಕರಾಗಿಯೊ ಉನ್ನತಿಗೊಂಡರು. ಆ ಸಂಸ್ಥೆಯಲ್ಲಿ ಕೆಲಸ ಮಾಡುತ್ತಿದ್ದ ನೌಕರವರ್ಗದಲ್ಲಿ ಹಲವರು ಅಲ್ಲಿ ಇಪ್ಪತ್ತೈದು ವರ್ಷಕ್ಕೂ ಹೆಚ್ಚಿನ ಸೇವೆ ಸಲ್ಲಿಸಿದವರು ಎಂಬಂಥ ಅತಿ ಸಾಮಾನ್ಯ ಸಂಗತಿಯಿಂದಲೂ ರಾಯರ ವ್ಯವಹಾರ ಜೀವನದ ಮತ್ತೊಂದು ಮುಖದ ಪರಿಚಯವಾಗುತ್ತದೆನಿಸುತ್ತದೆ. ಮಾಲೀಕರಂತೆ ಎಂದೂ ರಾಯರು ಕೆಲಸಗಾರರನ್ನು ದುಡಿಸಿಕೊಂಡವರಲ್ಲ; ಅವರೊಡನೆ ಹಾಗೆ ವರ್ತಿಸಿದವರಲ್ಲ; ತಾವೂ ಆ ಕೆಲಸಗಾರರಲ್ಲಿ ಒಬ್ಬರು ಎಂಬಂತೆಯೇ ವ್ಯವಹರಿಸಿದವರು. ('ಕೂಲಿಕಾರ'ನೆಂದೇ ತಮ್ಮನ್ನು ತಾವು ನಿರ್ದೇಶಿಸಿಕೊಳ್ಳುತ್ತಿದ್ದವರು ಅವರು. ಆದರೆ ಈ ನಿರ್ದೇಶನ ಕೀಳರಿಮೆಯದಲ್ಲ.) ಈ ಗುಣವಿಶಿಷ್ಟತೆ ಪರಸ್ಪರ ನಂಬಿಕೆ ವಿಶ್ವಾಸಗಳನ್ನು ಅವರವರಲ್ಲಿ ಬೆಸೆದು ಸ್ಥಾಪಿಸಿದ್ದರಲ್ಲಿ ಆಶ್ಚರ್ಯವೇನಿಲ್ಲ.

ರಾಯರು ವಾಸಿಸುತ್ತಿದ್ದುದು ಕೇವಲ ಎರಡು ಬೆಡ್‌ರೂಮಿನ ಚಿಕ್ಕ ಫ್ಲಾಟಿನಲ್ಲಿ. ಮಾತುಂಗಾದ 'ನರೇಂದ್ರ ನಿವಾಸ'ದ ಅವರ ಮನೆಯಲ್ಲಿ ಸರ್ವದಾ ದೊರೆಯುತ್ತಿದ್ದುದು, ಹರಿಯುತ್ತಿದ್ದುದು ಸ್ನೇಹಸೌಜನ್ಯ ಆತ್ಮೀಯತೆಗಳ ಮಹಾಪೂರ. ಹೆಂಡತಿ; ಇಬ್ಬರು ಗಂಡು, ಒಬ್ಬಳು ಹೆಣ್ಣು ಒಟ್ಟು ಮೂವರು ಮಕ್ಕಳುಳ್ಳ ಚೊಕ್ಕವಾದ ಸಂಸಾರ ರಾಯರದು. ಶ್ರೀಮತಿಯವರಾದ ಕೃಷ್ಣಾಬಾಯಿಯವರಂತೂ -[1] ಶ್ರೀ ಗುಲ್ವಾಡಿಯವರೆಂದಿರುವಂತೆ ''ಸರಳ ಜೀವನ, ತ್ಯಾಗದ ಪ್ರತೀಕ. ಐಶ್ವರ್ಯವಿದ್ದರೂ ಇಲ್ಲದಂತೆ ನಡೆವ ಕ್ರಮ - ಇವುಗಳನ್ನೇ ವರಿಸಿದವರು.'' ತಂದೆ ಮಕ್ಕಳ ಸ್ವಭಾವವೂ ಪರಸ್ಪರ ವಿಶ್ವಾಸ-ಗೌರವದ್ದು. ಆದರೆ ತಮ್ಮ ಮಕ್ಕಳೊಡನೆಯ ರಾಯರ ಮಾತೂ ಒಂದೇ ಹದದ್ದು: ಆಡಿದ್ದು ಮೃದುವೇನೊ ಹೌದು, ಆದರೆ ಖಚಿತವಾದದ್ದು; ಮೀರಲಾಗದ್ದು, ಆದೇಶವೆಂಬಂಥದು. ಮನೆಯಲ್ಲಿ ರಾಯರ ಜೊತೆಗೆ ಅಣ್ಣಂದಿರಾದ ಅಣ್ಣಪ್ಪಯ್ಯನವರು. ರಾಯರಂತೆಯೇ



"ನೋಡಿ ನೋಡಿ ಮಹಿಳ್-ಯರಿಗೆ ಎಂಥ ಅನ್ಯಾಯ?"

ಅವರದು ಹಿರಿಯ ನಡೆ. ತಮ್ಮನ ಗುಣವಿಶೇಷಗಳನ್ನು ಅರಿತವರಾದ್ದರಿಂದ ಅಣ್ಣ ಅಣ್ಣಪ್ಪಯ್ಯನವರು ತಮ್ಮಂದಿರಾದ ಸಂಜೀವರಾಯರೊಂದಿಗೆ ತಾವೇ ತಮ್ಮ, ಅವರೇ ಅಣ್ಣ ಎಂಬಂತೆ ನಡೆದುಕೊಳ್ಳುತ್ತಿದ್ದರು. ಹಾಗೇ ಅಣ್ಣನಲ್ಲಿಯ ರಾಯರ ಗೌರವವೂ ಕಡಿಮೆಯದೇನಲ್ಲ. ಇಬ್ಬರ ನಡುವಣ ಮೈತ್ರಿ ಅಪೂರ್ವವಾದದ್ದು.

ಇನ್ನೊಬ್ಬರು ಆಪ್ತಗೆಳೆಯರು ಮನೆಯಲ್ಲಿ ಅವರೊಂದಿಗೇ ಹತ್ತಾರು ವರ್ಷ ಇದ್ದರು; ಸ್ವಾತಂತ್ರ್ಯಕ್ಕಾಗಿ ಹೋರಾಡಿ ನೊಂದು, ಬೆಂದು ತೀವ್ರಕಾಯಿಲೆಯಿಂದ ನರಳುತ್ತಿದ್ದವರು. ಅವರ ಪೋಷಣೆಯ ಭಾರವನ್ನು ರಾಯರೇ ವಹಿಸಿಕೊಂಡಿದ್ದರು. ದಿಕ್ಕಿಲ್ಲದವರೆಂದಲ್ಲ, ಯಾವುದೇ ದಾಕ್ಷಿಣ್ಯದಿಂದಲೂ ಅಲ್ಲ; ಸ್ನೇಹ ವಿಶ್ವಾಸ ಗೌರವಗಳಿಂದ, ಅದು ತಮ್ಮ ಕರ್ತವ್ಯ ಎಂಬಂತೆ ಆ ಕಾರ್ಯವನ್ನು ರಾಯರು ಕೈಕೊಂಡಿದ್ದರು ಎಂಬುದು ಅವರ ನಡೆನುಡಿಯಿಂದ ಯಾರಿಗೂ ವೇದ್ಯವಾಗುತ್ತಿತ್ತು. ರಾಯರ ಮನೆಯನ್ನು ಒಳಹೊಕ್ಕೊಡನೆ ಹಾಲಿನಲ್ಲಿ ಗೋಡೆಗಾನಿಸಿದಂತೆ ಹಾಕಲಾಗಿದ್ದ ಮಂಚವೊಂದರ ಮೇಲೆ ಕೃಶಕಾಯರಾಗಿ ಮಲಗಿ ವಿಶ್ರಾಂತಿ ಪಡೆ

ಯುತ್ತಿದ್ದ ಆ ಸ್ನೇಹಿತರನ್ನು ಯಾರೂ ಕಾಣಬಹುದಿತ್ತು. ಅವರು ಇರುವುದು. ತಮಗೆ ಒಂದು ಹೊರೆ, ತೊಂದರೆ, ಪೀಡೆ ಎಂದು ಎಂದೂ ಭಾವಿಸದಂಥ ಸಂಸ್ಕಾರಗೊಂಡ ಸಂಭಾವಿತ ಮನಸ್ಸು ರಾಯರದು. ಇದನ್ನು ಅರಿತಿದ್ದ ಮನೆಯವರೆಲ್ಲರದೂ ಇದೇ ದೃಷ್ಟಿ, ಮನಸ್ಸು.

ನಾವು ಅವರ ಮನೆಯಲ್ಲಿ ಉಳಿದಿರುವಾಗಲೇ ರಾಯರಿಗೆ ಆತ್ಮೀಯರಾಗಿದ್ದು, ಅವರ ಸಾಮಾಜಿಕ ಸಾಂಸ್ಕೃತಿಕ ಸಾರ್ವಜನಿಕ ಚಟುವಟಿಕೆಗಳ ಕೇಂದ್ರ, ಬಿಂದುವಾಗಿದ್ದ ಸನ್ಮಿತ್ರ ವಾಸುದೇವ ಪೈಗಳು ತೀರಿಕೊಂಡ ಅನಿರೀಕ್ಷಿತ ಸುದ್ದಿ ರಾಯರಿಗೆ ಮುಟ್ಟಿತು. ದಿನವಿಡೀ ದೊಡ್ಡ ನಷ್ಟ ಅನುಭವಿಸಿದಂತೆ, ಮನಸ್ಸಿಗೆ ತುಂಬ ಹಚ್ಚಿಕೊಂಡವರಂತೆ ಇದ್ದರು. ಮುಖ ಕಳೆಗುಂದಿ ಹೃದಯದ ಆಳದಲ್ಲಿ ಕೊರಗಿದ್ದರೂ ಅದನ್ನು ತಮ್ಮ ನಡೆನುಡಿ ವ್ಯವಹಾರಗಳಲ್ಲಿ ತೋರಿಸಿಕೊಳ್ಳದ ಎಂದಿನ ಸ್ವಭಾಲಕ್ಷಣಗಳನ್ನೇ ಅವರು ಕಾಣಿಸಿದ್ದು ಅಪರೂಪದ ಸ್ಥೈರ್ಯ ಪ್ರದರ್ಶನ. ಆ ದಿನ ಅವರು ಊಟ ಮಾಡಲಿಲ್ಲವೆಂದೇ ತೋರಿತು; ಸಂಜೆ ಸ್ವಲ್ಪ ಚಹಾ ಚೂಡಾ ಸೇವಿಸಿದರು, ಅಷ್ಟೆ.

ರಾಯರ ವ್ಯಕ್ತಿತ್ವವನ್ನು ನೆನೆವಾಗೆಲ್ಲ ನನಗೆ ವ್ಯಾಸರಾಯ ಬಲ್ಲಾಳರು ತಮ್ಮ "ಹೇಮಂತಗಾನ" ಕಾದಂಬರಿಯಲ್ಲಿ ಚಿತ್ರಿಸಿರುವ ತಲಪಾಡಿಯವರ ನೆನಪು ಮೂಡುತ್ತದೆ. ಬಹುಶಃ ತಲಪಾಡಿಯವರ ಪಾತ್ರಚಿತ್ರಣಕ್ಕೆ ರಾಯರೇ ಹಿನ್ನೆಲೆಯಾಗಿದ್ದಾರೇನೊ ಎಂಬ ಸಂದೇಹ ಹಲವು ಸಲ ನನ್ನನ್ನು ಕಾಡಿದ್ದುಂಟು....

ರಾಯರ ಸ್ನೇಹಿತರು, ಅಭಿಮಾನಿವರ್ಗದವರೆಲ್ಲ ಸೇರಿ 1969ರಲ್ಲಿ ಅವರ ಷಷ್ಠ್ಯಿ ಪೂರ್ತಿ ಉತ್ಸವವನ್ನು ಹುಟ್ಟೂರಾದ ಮೂಡಬಿದಿರೆಯಲ್ಲಿ ವಿಜೃಂಭಣೆಯಿಂದ ನಡೆಸಿದರು. ಆ ಸಂದರ್ಭದಲ್ಲಿ ಅವರ ಸಾರ್ವಜನಿಕ ಸೇವೆಗೆ ಕಳಸವಿಟ್ಟಂತೆ ಗಾಂಧೀ ಶತಮಾನೋತ್ಸವ ಸ್ಮಾರಕ ಉದ್ಯಾನ, ರಮೇಶರಾವ್ ಸ್ಮಾರಕ ಗ್ರಂಥಾಲಯ ಮತ್ತು ಸಂಶೋಧನ ಕೇಂದ್ರ, ಮಹಾವೀರ ಕಾಲೇಜಿನ ಹಾಸ್ಟೆಲ್ ಮತ್ತು ಬಾಬೂ ರಾಜೇಂದ್ರ ಪ್ರಸಾದ್ ಹೈಸ್ಕೂಲು ಇತ್ಯಾದಿಗಳ ಕಟ್ಟಡ ಶಿಲಾನ್ಯಾಸ ಮತ್ತು ಉದ್ಘಾಟನಾ ಸಮಾರಂಭ ಏರ್ಪಟ್ಟವು. ಅರವತ್ತು ತುಂಬಿದ ಸವಿನೆನಪಿನಲ್ಲಿ ರಾಯರಿಗೆ ಗೌರವ ಸಲ್ಲಿಕೆಯ ಸೂಚಿಕೆಯಾಗಿ, ಅವರ ಬದುಕಿನ ನಂಬಿಕೆ, ಸಂದೇಶಗಳೇ ಅನ್ವರ್ಥನಾಮವಾಗುಳ್ಳ "Service is Worship" ಎಂಬ ಒಂದು ಸಂಸ್ಮರಣ ಸಂಚಿಕೆಯನ್ನೂ (ಮಹಾವೀರ ವಿದ್ಯಾವರ್ಧಕ ಸಂಘದ ಸಹಾಯಾರ್ಥವಾಗಿ) ಹೊರತಂದರು. ಅವರ ಸಾರ್ವಜನಿಕ ಸಾಮಾಜಿಕ ಸಾಂಸ್ಕೃತಿಕ ಶೈಕ್ಷಣಿಕ ಸೇವೆಯನ್ನು ಮುಕ್ತಕಂಠದಿಂದ ಸ್ಮರಿಸಿ, ಒಟ್ಟುಗೂಡಿಸಿದ್ದ ಒಂದು ಲಕ್ಷ ರೂಪಾಯಿ ಮೊತ್ತದ ನಿಧಿಯನ್ನು ರಾಯರಿಗೆ ಅರ್ಪಿಸಲಾಯಿತು. ಈ ಕೊಡುಗೆಯನ್ನೂ ರಾಯರು ತಮ್ಮ ಸಾರ್ವಜನಿಕ ಕಾರ್ಯಗಳಿಗೇ ವಿನಿಯೋಗಿಸಿದರೆಂದು ಕೇಳಿದ್ದೇನೆ. ಆ ಉತ್ಸವದಲ್ಲಿ ರಾಯರಿಗೆ ನೀಡಿದ ಬಿನ್ನವತ್ತಳೆಯಲ್ಲಿ "ಅವರ ಬದುಕು ಒಂದು ತೆರೆದ ಪುಸ್ತಕದಂತೆ: ಯಾವುದೇ ವ್ಯಕ್ತಿ ತನ್ನ ಬದುಕಿನ ವೈಯಕ್ತಿಕ ಹಾಗೂ ವ್ಯಾವಹಾರಿಕ ನಡವಳಿಕೆಯಲ್ಲಿ ಪ್ರಾಮಾಣಿಕವಾಗಿ, ಸತ್ಯವಂತನಾಗಿ, ಶ್ರದ್ಧಾಳುವಾಗಿ ಇದ್ದಲ್ಲಿ ಅವನಿಗೆ ಯಶಸ್ಸು ಕಟ್ಟಿಟ್ಟ ಬುತ್ತಿ ಎಂಬುದನ್ನು ಅಲ್ಲಿ ಯಾರೂ ಕಾಣಬಹುದು" ಎಂಬ, ರಾಯರ ಬದುಕನ್ನು ಯಥಾವತ್ತಾಗಿ ಚಿತ್ರಿಸುವಂಥ ಮಾತುಗಳಿವೆ. "ನನ್ನ ಜೀವನದಲ್ಲಿ ಏನನ್ನಾದರೂ ನಾನು ಸಾಧಿಸಿದ್ದರೆ ಅದಕ್ಕೆ ಮುಖ್ಯ ಕಾರಣ ನನ್ನ ಪ್ರಾಮಾಣಿಕತನ ಮತ್ತು ನನ್ನ ಸಾದಾ ಜೀವನ. ಇವು ನನ್ನನ್ನು ಎಂಥ ಪೇಚಿನಿಂದಲೂ ರಕ್ಷಿಸಿವೆ" ಎಂದು ಸಂಜೀವರಾಯರೇ ಒಂದೆಡೆ ಹೇಳಿದ್ದಾರೆ. ಸಾರ್ವಜನಿಕ ಜೀವನಕ್ಕೆ, ಜನಸೇವೆಗೆ ತಮ್ಮನ್ನು ತಾವು ತೆತ್ತುಕೊಂಡು ಬದುಕನ್ನು ಸವೆಸಿದವರಲ್ಲಿ ಎಷ್ಟು ಮಂದಿ ಹೀಗೆ ತಮ್ಮನ್ನು ತಾವು ವಿಶ್ಲೇಷಿಸಿಕೊಂಡು ಪ್ರಾಮಾಣಿಕವಾಗಿ ನುಡಿದುಕೊಳ್ಳಬಲ್ಲರು?



## ಜೀವನದರ್ಶನ

30

ಕೆ.ಟಿ. ಪಾಂಡುರಂಗಿ

# ಬುದ್ಧಿವಂತಿಕೆ-ದಡ್ಡತನ

ಜೀವನದಲ್ಲಿ ನಾವು ಕೆಲವರನ್ನು ಬುದ್ಧಿವಂತರೆಂದೂ ಕೆಲವರನ್ನು ದಡ್ಡರೆಂದೂ ಗುರುತಿಸುವೆವು. ವಿದ್ಯಾಭ್ಯಾಸ, ಕಲೆ, ಕೈಕೆಲಸ ಇತ್ಯಾದಿಗಳನ್ನು ಚುರುಕಾಗಿಯೂ ವ್ಯವಸ್ಥಿತವಾಗಿಯೂ ಮಾಡುವವರನ್ನು ಬುದ್ಧಿವಂತರು ಎಂದು ಗುರುತಿಸುವೆವು. ಇವುಗಳನ್ನು ನಿಧಾನವಾಗಿ ಮತ್ತು ಕ್ರಮತಪ್ಪಿ ಮಾಡುವವರನ್ನು ದಡ್ಡರು ಎಂದು ಗುರುತಿಸುತ್ತೇವೆ. ಯಾವದೇ ವಿಷಯವನ್ನು ಬೇಗನೇ ತಿಳಿದುಕೊಳ್ಳುವವರು, ತಿಳಿದುಕೊಂಡದ್ದನ್ನು ನೆನಪಿಟ್ಟುಕೊಳ್ಳುವವರು, ಸಕಾಲದಲ್ಲಿ ಈ ತಿಳುವಳಿಕೆಯನ್ನು ಉಪಯೋಗಿಸುವವರು ಇವರನ್ನು ಬುದ್ಧಿವಂತರು ಎನ್ನುತ್ತೇವೆ. ಈ ಗುಣಗಳು ಇಲ್ಲದವರನ್ನು ದಡ್ಡರು ಎನ್ನುತ್ತೇವೆ.

ಈ ವರ್ಗೀಕರಣವೇನೂ ಸರಿಯೆ. ಆದರೆ ಇಂಥ ಚುರುಕುತನ ಅಥವಾ ಮದಡುತನ ಆಯಾ ವ್ಯಕ್ತಿಗಳಿಗೆ ಜನ್ಮತಃ ಬಂದ ಅವರ ಮನೋರಚನೆಯ ಒಂದು ಅಂಶವೇ ಅಥವಾ ಅವರ ಮನಸ್ಸು ಚುರುಕಾಗಿರಲು ಅವರಿಗೆ ಯೋಗ್ಯವಾದ ಪರಿಸರವಿಲ್ಲದಿರುವುದು, ಪ್ರತಿಬಂಧಕಗಳಿರುವುದು ಕಾರಣವೇ? ಎಂಬುದನ್ನು ಆಲೋಚಿಸಬೇಕು.

ಮನುಷ್ಯನು ಆನುವಂಶಿಕವಾಗಿ ಪಡೆಯಬಹುದಾದಂಥ ಎರಡು ನೂರು ಅಂಶಗಳಿವೆ ಎಂದು ವಂಶವಿಜ್ಞಾನಿಗಳ ಅಂಬೋಣ. ಇವುಗಳಲ್ಲಿ ಬುದ್ಧಿವಂತಿಕೆ ಒಂದು. ತಂದೆ-ತಾಯಿಗಳಿಂದ ಮಕ್ಕಳಿಗೆ ಬುದ್ಧಿವಂತಿಕೆ ಬರುವುದೆಂದರೆ ಮಕ್ಕಳ ಮನೋರಚನೆ ಆ ರೀತಿ ಸ್ಪಂದಿಸುವಂಥದಾಗಿರುವುದು. ಹೀಗೆ ಬುದ್ಧಿವಂತಿಕೆ ಆನುವಂಶಿಕವಾಗಿ ಬರುವುದು ಒಂದು ವಿಧ. ಇಂಥ ಬುದ್ಧಿವಂತಿಕೆ ಆನುವಂಶಿಕವಾಗಿ ತಂದೆ-ತಾಯಿಗಳು ಯಾವ ಕಾರ್ಯಕ್ಷೇತ್ರದಲ್ಲಿ ಬುದ್ಧಿವಂತರಾಗಿರುವರೋ ಆ ಕ್ಷೇತ್ರದಲ್ಲಿಯೇ ಬರುವ ಸಂಭವ ಹೆಚ್ಚು. ಕಲೆ ಮತ್ತು ಕೈಕೆಲಸಗಳಲ್ಲಿಯಂತೂ ಇದು ಇನ್ನೂ ಹೆಚ್ಚು. ಯಾಕೆಂದರೆ ಈ ಕ್ಷೇತ್ರಗಳಲ್ಲಿ ಬುದ್ಧಿಯ ಜೊತೆಗೆ ಕೈಚಳಕಗಳೂ ಆನುವಂಶಿಕವಾಗಿ ಬರುತ್ತವೆ.

ಆದರೆ ಹೀಗೆ ಆನುವಂಶಿಕತೆ ಒಂದೇ ಬುದ್ಧಿವಂತಿಕೆ ಅಥವಾ ದಡ್ಡತನಕ್ಕೆ ಕಾರಣವಲ್ಲ. ಪರಿಸರವೂ ಕಾರಣವಾಗುವುದು. ಅವಕಾಶಗಳೂ ಕಾರಣವಾಗುವವು. ಮನುಷ್ಯನು ಪರಿಸರದಿಂದ ಅನೇಕ ಅಂಶಗಳನ್ನು ಕಲಿಯುತ್ತಾನೆ. ರೂಢಿಸಿಕೊಳ್ಳುತ್ತಾನೆ. ಕಾರ್ಯಗತಗೊಳಿಸುತ್ತಾನೆ. ಇದರಂತೆಯೇ ಮನುಷ್ಯನಿಗೆ ಅವಕಾಶಗಳು ದೊರೆಯುತ್ತ ಹೋದಂತೆ ಅವನ ಕುತೂಹಲ ಕಾರ್ಯಕುಶಲತೆ ಹೆಚ್ಚುತ್ತ ಹೋಗುತ್ತದೆ. ಅವನ ಉತ್ಸಾಹ ಕುದುರುತ್ತ ಹೋಗುತ್ತದೆ.

ಈ ಪರಿಸರ ಮತ್ತು ಅವಕಾಶಗಳು ಅವನ ಅಭಿರುಚಿಯನ್ನು ರೂಪಿಸುತ್ತವೆ. ಮನುಷ್ಯನ ಮನಸ್ಸು ಬುದ್ಧಿಗಳು ಅವನ ದಕ್ಷತೆ ಕುಶಲತೆಗಳನ್ನು ರೂಪಿಸುವಂತೆ ಅವನಿಗಿರುವ ಪರಿಸರ ಅವಕಾಶಗಳು ಅವನ ಮನಸ್ಸು ಬುದ್ಧಿಗಳನ್ನು ರೂಪಿಸುತ್ತ ಹೋಗುತ್ತವೆ.

ಈ ಅಂತರಂಗ ಶಕ್ತಿ ಮತ್ತು ಬಹಿರಂಗ ಸಹಾಯಗಳು ಒಂದನ್ನೊಂದು ರೂಪಿಸುತ್ತವೆ. ಪ್ರಯತ್ನಪೂರ್ವಕ ತರಬೇತಿಯೂ ಸಹಾಯ ಮಾಡುತ್ತದೆ. ಪೂರ್ಣವಾಗಿ ದಡ್ಡರಾದವರು ಯಾರೂ ಇರುವುದಿಲ್ಲ. ಪರಿಸರದ ನೆರವಿಲ್ಲದೆ ಸ್ವಯಂ ಬುದ್ಧಿವಂತರು ಯಾರೂ ಇರುವುದಿಲ್ಲ. ●



# ನೀವೂ ಬೆಕ್ಕಾಗಿರಿ!

## ಸಂಸಾರ ತಾಪತ್ರಯಗಳಿಗೆಲ್ಲ ಇದೊಂದು ರಾಮಬಾಣ'

ರಮೇಶ ಮಂತ್ರಿ

ಹಗಲಿಡೀ ದುಡಿದು ನಿಮಗೆ ಬೇಸರವಾಗಿರಬೇಕು. ಕಚೇರಿಯಲ್ಲಿ ಮೇಲಿನವರಿಂದ ಬೈಸಿಕೊಂಡು ಮನೆಗೆ ಬಂದಾಗ ಹೆಂಡತಿಯ ಕಿರಿಕಿರಿ ಶುರುವಾದರೆ ಕೇಳಬೇಕೆ? ಆಗ ಮಕ್ಕಳೇನಾದರೂ ನಿಮಗೆ ನಿಲುಕದ ವಸ್ತುವನ್ನು ಕೇಳಿದರೆ ನಿಮಗೆ ಸಿಟ್ಟು ಬರುವುದೂ ಸ್ವಾಭಾವಿಕವೇ. ತಿಂಗಳ ಕೊನೆಯಲ್ಲಿ ನಿಮ್ಮ ಕಿಸೆ ಬರಿದೊಬರಿದು ಎನ್ನುತ್ತಿರುವಾಗ ನಿಮ್ಮ ಕಚೇರಿಯಲ್ಲಿ ಕೆಲಸ ಮಾಡುವ ಸುಂದರಿ ಸುಲಭಾ, ''ಬನ್ನಿ, ಸಿನೇಮಕ್ಕೆ ಹೋಗೋಣ,'' ಎಂದು ದುಂಬಾಲು ಬಿದ್ದರೆ ಸಿಡಿದುಹೋಗುವ ಮಟ್ಟಿಗೆ ನಿಮ್ಮ ತಲೆ ಕೆಟ್ಟರೆ ಅದೇನೂ ವಿಶೇಷ ಮಾತಾಗದು. ನಿಮಗಿಂತಲೂ ನಂತರ ಆಫೀಸಿಗೆ ಸೇರಿದ ತರುಣ ಕಾರಕೂನನೊಬ್ಬನಿಗೆ, ಅವನನ್ನು ತನ್ನ ಅಳಿಯನನ್ನಾಗಿ ಮಾಡಿಕೊಳ್ಳುವ ಉದ್ದೇಶದಿಂದ ಮ್ಯಾನೇಜರ ನಿಮ್ಮನ್ನು ಬದಿಗೆ ಸರಿಸಿ ಬಡ್ತಿ ಕೊಟ್ಟರೆ ನಿಮ್ಮ ಕೋಪದ ಜ್ವಾಲಾಮುಖಿ- ಸಮೀಪದಲ್ಲಿ ಮ್ಯಾನೇಜರನಿಲ್ಲದಾಗ- ಸ್ಫೋಟವಾಗುವುದು ಮನುಷ್ಯಧರ್ಮವೇ ಸರಿ.

''ಆದರೆ, ಸಾಕು. ಈ ಯಾದಿ ಇನ್ನು ಓದುವುದು ಬೇಡ. ಈ ಕಷ್ಟಗಳಿಂದ ಪಾರಾಗುವುದು ಹೇಗೆ, ಹೇಳಿ'' ಎಂದು ನೀವು ನನ್ನನ್ನು ಕೇಳುತ್ತೀರಿ. ''ಈ ಕಷ್ಟಗಳಿಂದ ಪಾರಾಗುವುದು ಸಾಧ್ಯವೇ ಇಲ್ಲ'' ಎಂಬ ಭಾವ ನಿಮ್ಮಲ್ಲಿ ಖಂಡಿತವಾಗಿಯೂ ಕಾಣಸುವುದು. ಆದರೆ ಸಾಧ್ಯವಿದೆ- ನನ್ನ ಆಶ್ವಾಸನ ನಿಮಗೆ- ಸ್ವಾನುಭವದಿಂದಲೇ 'ಸಾಧ್ಯವಿದೆ' ಎಂದು ಹೇಳುತ್ತಿದ್ದೇನೆ. ಎಲ್ಲ ಕಷ್ಟಗಳನ್ನೂ ಪರಿಹರಿಸಿಕೊಂಡು ನೀವು ಸುಖಿಗಳಾಗಬಹುದು. ಆದರೆ ಅದಕ್ಕಾಗಿ ಒಂದು ಕೆಲಸ ಮಾತ್ರ, ನೀವು ಮಾಡಿ.

'ಕಿರ್ಲೋಸ್ಕರ'ದಿಂದ

ನೀವು ಬೆಕ್ಕಾಗಿರಿ.

ಒಮ್ಮೆ ನಾನು ನಿಮ್ಮಂತೆಯೆ ಮನುಷ್ಯನಾಗಿದ್ದೆ. ಪ್ರಾಮಾಣಿಕತನದಿಂದ ನೌಕರಿ ಮಾಡುವ, ಸಂಸಾರ ರಥ ಎಳೆಯುವ, ಆರ್ಥಿಕ ಮತ್ತು ಇನ್ನಿತರ ಅಡಚಣೆಗಳಲ್ಲಿ ಸಿಕ್ಕು ಒದ್ದಾಡುವ ಮನುಷ್ಯನಾಗಿದ್ದೆ. ಒಂದೆರಡು ದಿನವಲ್ಲ, ಇಡೀ ಮೂವತ್ತೈದು ವರ್ಷಗಳವರೆಗೆ ನಾನು ಮನುಷ್ಯನಾಗಿದ್ದೆ. ಏನೂ ಪ್ರಯೋಜನವಾಗಲಿಲ್ಲ. ಮನುಷ್ಯನಾಗಿದ್ದಕ್ಕೆ ಪಶ್ಚಾತ್ತಾಪಪಟ್ಟುಕೊಂಡೆ.

ಇದೇ ಕಳೆದ ಮೇ ತಿಂಗಳ ಒಂದು ದಿನ. ನಾನು ರಾತ್ರಿ ಉದಾಸೀನಚಿತ್ತದಿಂದ ಕುಳಿತಿದ್ದೆ. ರಜಾಕಾಲವಾದ್ದರಿಂದ ಹೆಂಡತಿ ಮಕ್ಕಳು ಊರಿಗೆ ಹೋಗಿದ್ದರು. ಹೋಟೆಲಿಗೆ ಹೋಗಿ ಊಟ ಮಾಡಿ ಬರುವುದೂ ಬೇಸರವಾಗಿ ಒಂದೆರಡು ಬಿಸ್ಕಿಟ್ ತಿಂದು ಒಂದು ಕಪ್ಪು ಹಾಲು ಕುಡಿದು ಮಲಗೋಣ ಎಂದು ಯೋಚಿಸಿದೆ. ಆದರೆ ಅಡಿಗೆ ಮನೆಗೆ ಹೋಗಿ ನೋಡಿದರೆ ಹಾಲಿನ ಪಾತ್ರೆ ಬರಿದು. ಒಂದು ಬಿಳಿ ಬಾವುಗ ಮೀಸೆಗೆ ಹತ್ತಿದ್ದ ಹಾಲನ್ನು ಮುಂಗಾಲಿನಿಂದ ಒರೆಸಿಕೊಳ್ಳುತ್ತ ಮೂಲೆಯಲ್ಲಿ ರಾಜನಂತೆ ಕುಳಿತಿತ್ತು. ನನ್ನ ಸುಳಿವು ಹತ್ತಿದೊಡನೆ ಅದು ಎದ್ದು ಕಿಟಕಿಯ ಮೂಲಕ ಹಾರಿ ಹೊರಗೆ ಓಡಿತು. "ಎಲಾ! ತಮಾಷೆ ನೋಡಿ. ನಾವು ಇನ್ನೂ ರಾತ್ರಿಯಿರುವಾಗಲೇ ಎದ್ದು ಹಾಲು ತೆಗೆದುಕೊಂಡು ಚೆನ್ನಾಗಿ ಕಾಸಿ ಇಡಬೇಕು. ಈ ಬಾವುಗ ಅದು ತನ್ನದೇ ಎಂಬಂತೆ ಅದನ್ನು ಕುಡಿದು ತೇಗಬೇಕು. ಇದೆಂಥ ನ್ಯಾಯ? ಮಾನವ ಜನ್ಮ ನಿಜವಾಗಿಯೂ ವ್ಯರ್ಥ. ಅದಕ್ಕಿಂತಲೂ ಬೆಕ್ಕಾಗಿ ಹುಟ್ಟುವುದೇ ವಾಸಿ" ಎಂದು ಮನಸ್ಸಿನಲ್ಲಿ ವಿಚಾರ ಬಂತು.

ಮಾರನೆಯ ದಿನ ಒಬ್ಬ ಮಾಂತ್ರಿಕನ ಬಳಿಗೆ ಹೋದೆ. ಆತನ ಮನುಷ್ಯನನ್ನು ಹುಲಿಯಾಗಿ, ನಾಯಿಯಾಗಿ, ಮಂಗನಾಗಿ- ಏನುಬೇಕಾದ್ದು ಮಾಡುತ್ತಾನೆ ಎಂದು ಕೇಳಿದ್ದೆ. ನೋಡೋಣ ಎಂದು ಹೋದವನೇ "ನಾನು ಬೆಕ್ಕಾಗಬೇಕು" ಎಂದೆ.

"ಸರಿ. 50 ರೂಪಾಯಿ ಫೀ ಕೊಡಬೇಕು."

ಹಣ ಕೂಡಿಸುವ ವಿಚಾರ ಮಾಡತೊಡಗಿದೆ: ನಾಲ್ಕಾರು ಮಿತ್ರರ ಕಿಸೆಗೆ ಕೈಹಾಕಬೇಕಾದೀತು: ಏನೋ ಮುಂಜಾಗ್ರತೆ ಇರಲಿ ಎಂದುಕೊಂಡು "ಏನು ಮಾಂತ್ರಿಕರೇ, ಮತ್ತೆ ಮನುಷ್ಯನಾಗುವುದಾದರೆ?" ಎಂದು ಕೇಳಿದೆ.

"ನೂರು ರೂಪಾಯಿ ಕೊಡಬೇಕಾಗುತ್ತದೆ" ಎಂದನಾತ.

ಇದೇನೂ ಅಂಥ ತುಟ್ಟಿ ಬಾಬತ್ತಲ್ಲ. ಸಂಸಾರಿ ಮನುಷ್ಯ ತಿಂಗಳಿಗೆ 200-300 ರೂಪಾಯಿ ಖರ್ಚು ಮಾಡಲೇಬೇಕಾಗುತ್ತದೆ. ಅಷ್ಟನ್ನು ಸಂಪಾದಿಸಲು ಆತ ಬೆವರಿಳಿಸಿ ದುಡಿಯಬೇಕಾಗುತ್ತದೆ. ಆದರೆ ಬೆಕ್ಕಿಗೆ ನೌಕರಿ, ಕೆಲಸಗಳ ಜಂಜಾಟವಿಲ್ಲ. ರಾಜಕೀಯ ಧುರೀಣನೋಪಾದಿಯಲ್ಲಿ ಇತರರ ಹಾಲನ್ನು ಕುಡಿದು ಮ್ಯಾಂವ್ ಮ್ಯಾಂವ್ ಮಾಡುತ್ತ ಅಡ್ಡಾಡುವುದು. ನನ್ನ ಒಪ್ಪಿಗೆಯನ್ನು ಸೂಚಿಸಬೇಕು ಎನ್ನುವಷ್ಟರಲ್ಲಿ ಒಂದು ನಾಯಿ ಒಳಗೆ ಬಂತು. ಅದು ನನ್ನನ್ನು ಒಂದಿಷ್ಟು ವಿಚಿತ್ರ ದೃಷ್ಟಿಯಿಂದಲೇ ನೋಡಿತು. ನನಗೂ ಅದನ್ನು ಕಂಡಾಗ ಏನೊ ವಿಚಿತ್ರವೆನಿಸತೊಡಗಿತು. ಎದ್ದು ಓಡಿಹೋಗಬೇಕೆನ್ನಿಸಿತು. ಇನ್ನೇನು, ಎದ್ದು ಓಡಬೇಕು ಎನ್ನುವಷ್ಟರಲ್ಲಿ ನಾನಿನ್ನೂ ಬೆಕ್ಕಾಗಿಲ್ಲವೆ




1965ರ ಸಪ್ಟಂಬರ್ ಸಂಚಿಕೆಯಲ್ಲಿ ಪ್ರಕಟವಾದದ್ದು

ನ್ನುವುದು ನೆನಪಿಗೆ ಬಂತು. ಈಗಲೇ ನಾಯಿಗೆ ಹೆದರಬೇಕಾದಿಲ್ಲ ಎಂದುಕೊಂಡು ತುಸು ಶಾಂತ ನಾದೆ.

"ಬನ್ನಿ. ಹಣ ತಂದಿರೇನು?" ಎಂದು ಮಾಂತ್ರಿಕ ಆ ನಾಯಿಗೆ ಕೇಳಿದ. ಬಾಯಲ್ಲಿ ಹಿಡಿದುಕೊಂಡು ಬಂದಿದ್ದ ನೂರರ ನೋಟನ್ನು ನಾಯಿ ಮಾಂತ್ರಿಕನ ಮುಂದೆ ಚೆಲ್ಲಿತು. ಮಾಂತ್ರಿಕ ಅದನ್ನು ಎತ್ತಿಕೊಂಡು ಸರಿಯಾಗಿ ಪರೀಕ್ಷಿಸಿ ನೋಡಿ, "ಒಂದೈದು ಮಿನಿಟು ಕುಳಿತುಕೊಳ್ಳಿ. ಇವರ ಕೆಲಸ ಮುಗಿಸಿಬಿಡುತ್ತೇನೆ," ಎಂದ. ನಾಯಿ ಒಂದು ಮೂಲೆಗೆ ಹೋಗಿ ಮುದುಡಿಕೊಂಡು ಮಲಗಿತು.

"ನಿಮ್ಮ ಫೀ ನನಗೆ ಸಮ್ಮತ. ಆದಿತ್ಯವಾರ ಬರಲೇ?" ನಾನು ಕೇಳಿದೆ.

"ಆಗಬಹುದು. ಆದರೆ ಬೆಳಿಗ್ಗೆ ಎಂಟರೊಳಗಾಗಿ ಬನ್ನಿ. ನಂತರ ತುಂಬ ಗದ್ದಲವಿರುತ್ತದೆ. ನಿಮ್ಮನ್ನಷ್ಟು ಪರೀಕ್ಷಿಸಿ ನೋಡಬೇಕಲ್ಲ. ಎಲ್ಲಿ, ಒಮ್ಮೆ ಬೆಕ್ಕಿನಂತೆ 'ಮ್ಯಾಂವ್' ಅನ್ನಿ... ನೋಡೋಣ."

ನಾನು ನಾಚಿಕೊಂಡೆ. ಅತ್ತಿತ್ತ ನೋಡಿ ಅಸ್ಪುಟವಾಗಿ ಬಾಯಿಯಿಂದ 'ಮ್ಯಾಂವ್' ಅಂದೆ.

"ಛೆ! ಕಳ್ಳದನಿ ಬೇಡ. ಒಳ್ಳೆ ಬಾವುಗದಂತೆ ಗಟ್ಟಿಯಾಗಿ ಬರಲಿ," ಎಂದ ಮಾಂತ್ರಿಕ.

ಕೆಮ್ಮಿ ಗಂಟಲು ಸರಿಪಡಿಸಿಕೊಂಡು ಓರೆಗಣ್ಣಿನಿಂದ ಮೂಲೆಯಲ್ಲಿ ಮಲಗಿದ್ದ ನಾಯಿಯನ್ನು ನೋಡಿ ಗಟ್ಟಿಯಾಗಿ 'ಮ್ಯಾಂವ್' ಮಾಡಿದೆ. ಮಲಗಿದ್ದ ನಾಯಿ ಬಡಿದೆಬ್ಬಿಸಿದಂತೆ ಎದ್ದು ಕಿವಿ ನಿಮಿರಿಸಿಕೊಂಡು ನಿಂತಿತು. ಮಾಂತ್ರಿಕ ಅದಕ್ಕೆ, "ನೀವು ಸ್ವಲ್ಪ ಸುಮ್ಮನಿರಿ ನೋಡೋಣ. ಇವರ ಕೆಲಸ ಮುಗಿಯುವವರೆಗೆ ಅಲ್ಲಿ ನಾಯಿಯಂತೆ ಬಿದ್ದುಕೊಳ್ಳಿ," ಎಂದ.

ನಾಯಿ ಮತ್ತೆ ಮಲಗಿಕೊಂಡಿತು.

ಮಾಂತ್ರಿಕ ನನಗೆ ಹೇಳಿದ, "ಸರಿ, ಹತ್ತು ರೂಪಾಯಿ ಮುಂಗಡ ಕೊಟ್ಟುಹೋಗಿ. ಆದಿತ್ಯವಾರದವರೆಗೆ 'ಮ್ಯಾಂವ್' ಪ್ರಾಕ್ಟೀಸು ಮಾಡಿಕೊಳ್ಳಿ."

ಮುಂಗಡ ಕೊಟ್ಟು ಹೊರಟ ನನಗೆ ಹಾದಿಯಲ್ಲಿ ಬೆಕ್ಕನ್ನು ಕಂಡಾಗಲೆಲ್ಲ ಅದರ ಬಗ್ಗೆ ಒಂದು ವಿಧವಾದ ಆತ್ಮೀಯತೆ ಅನಿಸತೊಡಗಿತು. ಬೆಕ್ಕಿನ ಕಣ್ಣುಳ್ಳ ಹೆಂಗಸರನ್ನೂ ವಿಶೇಷ ಮಮತ್ವದಿಂದ ನೋಡಿದೆ. ಇಲಿಯಂಥ ಕೃತಘ್ನ ಪ್ರಾಣಿಗಳೆಲ್ಲ ಜಗತ್ತಿನ ಶತ್ರುಗಳು ಎಂದು ನನಗೆ ನಂಬಿಕೆಯಾಗತೊಡಗಿತ್ತು. ಎರಡು ಕಾಲು ಮತ್ತು ಎರಡು ಕೈ ಊರಿ ನಡೆಯಲು ಬರುವಾಗ ಮನುಷ್ಯ ಎರಡೇ ಕಾಲಿನ ಆಧಾರದಿಂದ ನಡೆಯುವ ಹವ್ಯಾಸದಲ್ಲಿ ತನ್ನ ಶಕ್ತಿಯನ್ನೇಕೆ ವ್ಯಯ ಮಾಡಬೇಕೊ ನನಗೆ ತಿಳಿಯದಂತಾಯಿತು.

ಬಸ್‌ಸ್ಟಾಪ್ ಬಂತು. ಬಸ್ಸನ್ನೇರಿದ ಮೇಲೆ ಕಂಡಕ್ಟರ್ ಕೇಳಿದ: "ಎಲ್ಲಿ?"

"ಮ್ಯಾಂವ್!"

ಕಂಡಕ್ಟರ್ ಮತ್ತು ಇತರ ಪ್ರವಾಸಿಕರು ಆಶ್ಚರ್ಯದಿಂದ ನನ್ನನ್ನು ನೋಡಿದರು. ಕಂಡಕ್ಟರ್ ಗಟ್ಟಿಯಾಗಿ ಮತ್ತೆ ಅದೇ ಪ್ರಶ್ನೆ ಕೇಳಿದ. ನಾನೂ ಇನ್ನಿಷ್ಟು ಗಟ್ಟಿಯಾಗಿ 'ಮ್ಯಾಂವ್' ಎಂದೆ: ಆದರೆ ಅಷ್ಟರಲ್ಲಿ ನಾನಿನ್ನೂ ಬೆಕ್ಕಾಗಿಲ್ಲ ಎಂದು ನೆನಪಿಗೆ ಬರಲು ಮುಖಭಂಗವಾದವನಂತೆ ತಲೆ ಕೆಳಗೆ ಮಾಡಿ "ಗಿರಗಾಂವ್" ಎಂದೆ.

ಕಚೇರಿಯಲ್ಲೂ ಎರಡು ಮೂರು ಸಲ ಇದೇ ಹಾಡಾಯಿತು. ನನ್ನನ್ನು ಕಾಣಲು ಮಿತ್ರನೊಬ್ಬ ಬಂದಾಗ ಆಫೀಸ್ ಹುಡುಗನಿಗೆ "ಎರಡು ಚಹ ಹೇಳಿ ಬಾ" ಎನ್ನುವ ಬದಲು "ಎರಡು ಮ್ಯಾಂವ್ ಹೇಳಿ ಬಾ" ಎಂದೆ. ಅವನು ನನ್ನನ್ನು ಬೆರಗುಗಣ್ಣಿನಿಂದ ನೋಡಲು "ಏನೊ, ಮ್ಯಾಂವ್ ಎಂದರೆ ಚಹ ಅನ್ನುವುದು ತಿಳಿಯದೇ ನಿನಗೆ?" ಎಂದು ಗದ್ದರಿಸಿದೆ.

ಮ್ಯಾನೇಜರ್ ನನ್ನನ್ನು ಕರೆಸಿ ಯಾವುದೊ ಕಂಪನಿಗೆ ಒಂದು ಪತ್ರ ಬರೆಯಲು ಹೇಳಿದರು. ಹೀಗೆ ಹೀಗೆ ಬರೆಯಿರಿ ಎಂದು "ಅಂದದ್ದೆಲ್ಲ ತಿಳಿಯಿತೇ?" ಎಂದು ಕೇಳಿದರು.

"ಮ್ಯಾಂವ್!"

"ಅಂ? ಎಲ್ಲಿದೆ ನಿಮ್ಮ ಲಕ್ಷ್ಯ?" ಮ್ಯಾನೇಜರ್ ನಾಯಿಯಂತೆ ಬೊಗಳಿದರು. ನಾನು ನನ್ನ

ಖುರ್ಚಿಗೆ ಬಂದೆ.

ಮಾಂತ್ರಿಕ ಹೇಳಿದಂತೆ "ಮ್ಯಾಂವ್" ಅನ್ನುವ ರೂಢಿಮಾಡಿಕೊಳ್ಳಬೇಕು. ಆದರೆ ಅದರ ಸಾಮಾಜಿಕ ಪರಿಣಾಮ ಧುತ್ತೆಂದು ಹೆಜ್ಜೆ ಹೆಜ್ಜೆಗೆ ಎದುರು ನಿಲ್ಲುತ್ತಿತ್ತು. ಆದ್ದರಿಂದ ಸಂಜೆ ಮಲಬಾರ್ ಹಿಲ್‌ಗೆ ಹೋದೆ. ನನ್ನ ಸುತ್ತಮುತ್ತ ಜನರ ಗದ್ದಲವಿದ್ದರೂ ನನ್ನ ಪರಿಚಯದವ ರಾರೂ ಇರಲಿಲ್ಲ.

ಪಾರ್ಸಿ ಹೆಂಗಸೊಬ್ಬಳು ಸರಪಳಿಗೆ ಕಟ್ಟಿದ್ದ ನಾಯಿಯೊಂದನ್ನು ಹಿಡಿದುಕೊಂಡು ನಿಂತಿದ್ದಳು. ನನ್ನ 'ಮ್ಯಾಂವ್' ಕೇಳುತ್ತಲೇ ಆ ನಾಯಿ ಜಗ್ಗಿ ಸರಪಳಿ ಬಿಡಿಸಿಕೊಂಡು ನನ್ನತ್ತ ಓಡಿ ಬಂತು. ಏನೂ ಅರಿಯದ ಮುಗ್ಧನಂತೆ ನಾನು ಕುಳಿತಿದ್ದೆ. ಆ ನಾಯಿ ಮೂಸುತ್ತ ನನ್ನ ಬಳಿ ಬಂದು ವಿಚಿತ್ರ ದೃಷ್ಟಿಯಿಂದ ನನ್ನನ್ನು ನೋಡಿ ತಿರುಗಿ ಹೋಯಿತು. ನಾಯಿ ಸಾಕಷ್ಟು ದೂರ ಹೋದ ಮೇಲೆ ನಾನು ಮತ್ತೊಮ್ಮೆ 'ಮ್ಯಾಂವ್' ಮಾಡಿದೆ. ಏನೂ ಪ್ರತಿಕೂಲ ಪರಿಣಾಮ ಕಾಣಿಸದಿರಲು ಮತ್ತೊಮ್ಮೆ 'ಮ್ಯಾಂವ್' ಮಾಡಿದೆ. ನನ್ನ ಪಕ್ಕದಲ್ಲಿದ್ದ ಒಂದು ಗಿಡ ಗಂಟಿಯ ಹಿಂದೆ ಕುಳಿತಿದ್ದವಳೊಬ್ಬಳು ತನ್ನ ಗಂಡನಿಗೆ "ಒಳ್ಳೆಯ ಬಟ್ಟೆ ಹಾಕಿಕೊಂಡಿದ್ದಾನೆ. ಪಾಪ! ಈ ಅವಸ್ಥೆ ಹೇಗೆ ಬಂತೊ?" ಎಂದಳು. ಸಾರ್ವಜನಿಕ ಸ್ಥಳವೂ ನನ್ನ ತಾಲೀಮಿಗೆ ಯೋಗ್ಯವಲ್ಲ ಎಂದುಕೊಂಡೆ.

ಮಲಗುವ ಮೊದಲಾದರೂ ಒಂದಿಷ್ಟು ರೂಢಿ ಮಾಡಿಕೊಳ್ಳೋಣ ಎಂದು ದೀಪ ಆರಿಸಿದವನೇ ಮೂರು ನಾಲ್ಕು ಸಲ ಮ್ಯಾಂವ್ ಮಾಡಿದೆ. ಆಗ ನನಗೆ ಎಲ್ಲ 'ಮ್ಯಾಂವ್'ಗಳೂ ಒಂದೇ ರೀತಿಯವಿರುವುದಿಲ್ಲ ಎಂದು ಹೊಳೆಯಿತು. ಹಾಲು ಬೇಡುವ ಮ್ಯಾಂವೇ ಬೇರೆ, ಮಕ್ಕಳು ಬಾಲ ಜಗ್ಗಿದಾಗ ಮಾಡುವ ಮ್ಯಾಂವೇ ಬೇರೆ, ಹೆಣ್ಣು ಬೆಕ್ಕಿನೊಡನೆ ಸರಸವಾಡುವಾಗ ಮಾಡುವ ಕೋಮಲ ಮ್ಯಾಂವೇ ಬೇರೆ, ಇನ್ನೊಂದು ಬಾವುಗವನ್ನು ಎದುರಿಸುವಾಗ ಗುರುಗುಡುವ ಮ್ಯಾಂವೇ ಬೇರೆ. ನಾನು ಈ ಬೇರೆ ಬೇರೆ ಮ್ಯಾಂವ್‌ಗಳನ್ನಂದು ರೂಢಿ ಮಾ ಕೊಳ್ಳಹತ್ತಿದೆ.

ಆದರೆ ನೆರೆಹೊರೆಯವರು ಕೇಳಬೇಕಲ್ಲ ಮೊದಲು ಗೋವಿಂದರಾಯರು 'ಹುಶ್ ಹುಶ್' ಎಂದರು. ನಾನು ಒಂದಿಷ್ಟು ಹೊತ್ತು ಸುಮ್ನಾಗಿ ಮತ್ತೆ ಶುರು ಮಾಡಿದೆ. ಆಗ ನನ್ನ ಮನೆಯ ಎರಡೂ ಮಗ್ಗಲಿನ ಮನೆಗಳಿಂ ಬೆಕ್ಕನ್ನು ಬಯ್ದು ಬಡಿಗೆಯನ್ನು ನೆಲಕ್ಕಪ್ಪಳಿಸಿ ಧ್ವನಿ ಕೇಳಿಸಿತು. ಬೆಕ್ಕಾದ ಮೇಲೆ ಇವರೆಲ್ಲ ಮನೆಯ ಹಾಲನ್ನೂ ಕುಡಿಯಬೇಕು ಎಂ ನಿರ್ಧಾರ ಮಾಡಿದೆ.

ಮತ್ತೆ ನನ್ನ ತಾಲೀಮು ಶುರುವಾಯಿತು ಕಿಡಕಿಯಿಂದ ಬೆಕ್ಕೊಂದು ಟಣ್ಣನೆ ಜಗಿದ



ಕೋಣೆಯೊಳಗೆ ಬಂತು. ನಾನದನ್ನು ದುರ್ಲಕ್ಷಿಸಿ ಮತ್ತೂ 'ಮ್ಯಾಂವ್' ಮಾಡುತ್ತ ಹೋದಾಗ ಇನ್ನೊಂದು ಬೆಕ್ಕು ಒಳಗೆ ಬಂತು. ಹೀಗೆ ನಾಲ್ಕೈದು ಬೆಕ್ಕುಗಳು ಒಳಗೆ ಬಂದದ್ದು ಕಂಡು ನಾನು ನನ್ನ ಮಾರ್ಜಾಲಪ್ರೇಮವನ್ನು ನಿಯಂತ್ರಿಸಿಕೊಳ್ಳಬೇಕಾಯಿತು.

ಮರುದಿನ ಮುಂಜಾನೆ ಭಯ್ಯಾ ಹಾಲು ತಂದಾಗ ಹಾಲು ತುಂಬಿದ ಅವನ ಡಬ್ಬಿಯನ್ನೇ ನೆಕ್ಕುವ ಮನಸ್ಸಾಯಿತು. ಅದನ್ನು ಹೇಗೋ ನಿಯಂತ್ರಿಸಿಕೊಂಡು 10-30 ಗಂಟೆಗೆ ಕಚೇರಿಗೆ ಹೋದೆ. ಇನ್ನು ಅನೇಕ ದಿನಗಳವರೆಗೆ ಶೋಭಾ ಕುಲಕರ್ಣಿಯೊಂದಿಗೆ ಚಹ ಕುಡಿಯಲು ಸಿಗದು ಎಂಬ ವಿಚಾರ ಬರಲು ಕಚೇರಿ ಬಿಟ್ಟ ಕೂಡಲೆ ಅವಳನ್ನು ಚಹಕ್ಕೆ ಆಮಂತ್ರಿಸಿದೆ. ಫ್ಯಾಮಿಲಿ

ಮಿನಲ್ಲಿ ಕುಳಿತೊಡನೆ ಮಾಣಿ ಬಂದು ಏನು ಲಿ ಎಂದಾಗ ಎರಡು ಬಿಸಿ ಹಾಲು ಎಂದು ಚ್ಚೆ.

ಆಶ್ಚರ್ಯಚಕಿತಳಾದ ಶೋಭಾ ಕುಲಕರ್ಣಿ ಏನಿದು, ನಾವೇನು ಬೆಕ್ಕುಗಳೆ ಹಾಲು ಕುಡಿಯು ಕ್ಕೆ?'' ಎಂದು ಕೇಳಿದಳು.

''ಹೌದು, ಎಂದರೆ ಹೌದು'' ಎಂದು ತತ್ತ್ವ ನಿಯಂತೆ ನುಡಿದೆ.

ಮಾಣಿ ಬೆಪ್ಪನಂತೆ ನಿಂತಿದ್ದನ್ನು ಕಂಡು ೋಭಾ ''ಎರಡು ಕೇಕ್ಸ್ ಎರಡು ಚಹ ತಾ'' ಂದಳು.

ಎರಡು ದಿನಗಳಲ್ಲಿ 40 ರೂಪಾಯಿಗಳನ್ನು ಡಿಸಿದೆ. ಒಂದು ತಿಂಗಳ ರಜೆ ತೆಗೆದುಕೊಂಡೆ. ಫೀಸು ಕೆಲಸಕ್ಕಾಗಿ ತಿಂಗಳ ಮಟ್ಟಿಗೆ ದಿಲ್ಲಿಗೆ ೋಗುತ್ತಿದ್ದೇನೆಂದು ನೆರೆಯವರಿಗೆ ಹೇಳಿದೆ. ಕ್ಕಾಗಿ ತೊಂದರೆಯೆನಿಸಿದರೆ ಒಂದು ತಿಂಗಳ ತರ ಮತ್ತೆ ಮನುಷ್ಯನಾಗಬೇಕು, ಬೇಸರ ರದಿದ್ದರೆ ಹಾಗೆಯೆ ಬೆಕ್ಕಾಗಿರಬೇಕು ಎಂದು ಶ್ಚಯಿಸಿದೆ.

ತೀರ ನಸುಕಿನಲ್ಲಿಯೆ ಮಾಂತ್ರಿಕನ ಮನೆಗೆ ೋದೆ. 40 ರೂಪಾಯಿಗಳನ್ನು (ಹತ್ತು ೊದಲೇ ಕೊಟ್ಟಿದ್ದೇನಲ್ಲ) ಅವನ ಕೈಲಿಟ್ಟು ನಿಮಗೆ ನೆನಪಿರಬೇಕು...''

''ಹೌದು ಹೌದು, ನೀವು ಮಂಗವಾಬೇಕೆಂ ದ್ದಿರಿ.''

''ಛೆ! ಛೆ! ನಾನು ಬೆಕ್ಕಾಗಬೇಕು ಸ್ವಾಮೀ, ಕ್ಕು. ಮಂಗನನ್ನಾಗಿ ಮಾಡಿ ಫಜೀತಿ ಮಾಡ ೇಡಿ. ಚೆನ್ನಾಗಿ ಮ್ಯಾಂವ್ ಮಾಡಲು ಕಲಿತಿ ೇನೆ.''

''ಸರಿ. ಬೆಕ್ಕೇನು ಮಂಗವೇನು? ಎರಡರ ರವೂ ಒಂದೇ.''

ಆತ ಕಪ್ಪು ನಿಲುವಂಗಿ ಧರಿಸಿ ಏನೇನೊ ಂತ್ರ ಪುಟಪುಟಿಸಿ ''ನಡೆಯಿರಿನ್ನು ಆಚೆ ಕಡೆ ೋಣೆಗೆ'' ಎಂದ.

ಆ ಕೋಣೆಯಲ್ಲಿ ಕತ್ತಲು ತುಂಬಿತ್ತು. ಅಲ್ಲಿ ತ ನನಗೆ ನಾಲ್ಕು ಕಾಲಿನ ಮೇಲೆ ಅಂದರೆ ನೆಲಕ್ಕೆ ಕೈಯೂರಿ ನಿಲ್ಲಲು ಹೇಳಿದ. ನಾನು ಹಾಗೆಯೆ ನಿಂತೆ. ಆತ ನನಗೆ ಪ್ರದಕ್ಷಿಣೆ ಹಾಕಿ ದಂತೆ ಅನಿಸಿತು. ಎಲಾ! ಏನಿದು ನನ್ನ ಶರೀರ ಕುಗ್ಗುತ್ತಿದೆ. ಹೌದು ಬಾಲ! ನೆಕ್ಕಿ ನೋಡಿದರೆ ಮೈಮೇಲೆಲ್ಲ ಮೆತ್ತನ್ನ ಕೂದಲು. ಆ ಕತ್ತಲೆ ಯಲ್ಲೂ ನನಗೆ ನಿಚ್ಚಳವಾಗಿ ಕಾಣಿಸಹತ್ತಿತ್ತು.

ಹೊರಗಿನ ಕೋಣೆಗೆ ಬಂದೆವು. ನಿಮ್ಮ ರೂಪ ನೋಡಿಕೊಳ್ಳಿ, ಎಂದಾತ ಕನ್ನಡಿ ಹಿಡಿ ದಾಗ- ವ್ಹಾ ವ್ಹಾ! ನಾನು ಅತ್ಯಂತ ಸುಂದರ ಬೆಕ್ಕಾಗಿದ್ದೆ. ಆಫೀಸಿಲ್ಲ, ಕೆಲಸವಿಲ್ಲ, ದುಡ್ಡಿನ ಚಿಂತೆಯಿಲ್ಲ, ಅಡಿಗೆ ಪಡಿಗೆಯ ಜಂಜಾಟವಿಲ್ಲ. ಇನ್ನು ಒಂದು ತಿಂಗಳು ಕೇವಲ ಸಂತೋಷ- ನಿಶ್ಚಿಂತೆ, ಸ್ವಾತಂತ್ರ್ಯ.

ಜೀದಿಗಿಳಿದೆ. ಇನ್ನು ಮನೆಗೆ ಹೋಗುವುದು ಹೇಗೆ? ಬಸ್ಸಿನಲ್ಲಿ ನನ್ನನ್ನು ಹತ್ತಿಸಿಕೊಳ್ಳುವು ದಿಲ್ಲ. ಏನು ಮಾಡಲಿ? ಅಷ್ಟರಲ್ಲಿ ಖಾಸಗಿ ಕಾರೊಂದು ಬರಲು ಟಣ್ಣನೆ ಜಿಗಿದು ಅದರ ಹಿಂದಿನ ಮಡ್‌ಗಾರ್ಡನ್ನೇರಿದೆ. ಆ ಕಾರು ಬೇರೆ ದಿಕ್ಕಿಗೆ ಹೋಗುತ್ತಿರುವುದು ತಿಳಿಯಲು ಗದ್ದಲ ದಲ್ಲಿ ಅದರ ವೇಗ ಕಡಿಮೆಯಾದಾಗ ಇನ್ನೊಂದು ಕಾರಿನ ಬೆನ್ನಿಗೆ ಜಿಗಿದೆ. ಮನೆ ಬಂದೊಡನೆ ಇಳಿದೆ. ವ್ಹಾ! ಕ್ಯೂ ನಿಲ್ಲುವುದು ಬೇಡ, ರೊಕ್ಕ ಕೊಡುವುದು ಬೇಡ!

ಮನೆಗೆ ಬಂದರೆ ಬಾಗಿಲಿಗೆ ಬೀಗ! ನಾನೇ ಬೀಗ ಹಾಕಿ ಕೈಯನ್ನು ನೆರೆಮನೆಯ ದೇಸಾ ಯಿಯ ಹತ್ತರ ಕೊಟ್ಟಿದ್ದು ನೆನಪಿಗೆ ಬಂತು. ಆದರೆ ಈಗ ಆತ ಅದನ್ನು ನನಗೆ ಕೊಡುವಂತಿರ ಲಿಲ್ಲ. ಏನು- ಅಷ್ಟರಲ್ಲಿ ನನಗೆ ನಾನು ನನ್ನ ಮನೆಯ ಹಿಂದಿನ ಕಿಡಕಿಯ ಬಾಗಿಲನ್ನು ತೆರೆದು ಇಟ್ಟಿದ್ದು ನೆನಪಾಯಿತು. ಈಗ ನಾನು ಬೇರೆಯ ವರ ಮನೆ ಹೊಕ್ಕು ಅಲ್ಲಿಂದ ನನ್ನ ಮನೆಯ ಕಿಡಿಕಿಯ ಮೂಲಕ ಒಳಗೆ ಹೋಗಬೇಕು.

ದೇಸಾಯಿಯ ಮನೆಯನ್ನು ಕಳ್ಳನಂತೆ ಪ್ರವೇ ಶಿಸಿದೆ. ಮುಖದಲ್ಲಿ ಸಂನ್ಯಾಸಿಯಂತೆ ವೈರಾಗ್ಯ ಮೂಡಿಸಿಕೊಂಡಿದ್ದೆ. ಆದರೆ ಸುಡುಗಾಡು ಮನುಷ್ಯರು ಕೇಳಬೇಕಲ್ಲ. ದೇಸಾಯಿ 'ಹಚ್,

ಹಚ್' ಎಂದರು. ಅದನ್ನು ಲೆಕ್ಕಿಸದೆ ಒಳಗೆ ಹೋದೆ. ಕಾಯಿ ಹೆರೆಯುತ್ತ ಕುಳಿತಿದ್ದ ಶ್ರೀಮತಿ ದೇಸಾಯಿ ಒಂದು ಕರಟವನ್ನು ನನ್ನತ್ತ ಒಗೆದಳು. ಅದನ್ನು ತಪ್ಪಿಸಿಕೊಂಡು ಕಿಡಿಕಿಗೆ ಹಾರಿದೆ. ಒಂದು ಗೇಣಗಲದ ಕಿಡಿಕಿ ಕಟ್ಟೆಯ ಮೇಲೆ ನಡೆಯುತ್ತ ನನ್ನ ಮನೆಯ ಕಿಡಿಕಿಯ ಹತ್ತರ ಬಂದೆ. ತೆರೆದ ಕಿಡಿಕಿಯ ಮೂಲಕ ಒಳಗೆ ಜಿಗಿದೆ.

ಈಗ ಹಾಯೆನಿಸಿತು. ಕಪಾಟಿನ ಬಾಗಿಲು ತೆರೆದು ಬಿಸ್ಕಿಟಿನ ಡಬ್ಬಿ ಉರುಳಿಸಿದೆ. ಬಿಸ್ಕಿಟ್ ತಿಂದಾದ ಬಳಿಕ ಹಾಲು. ಅದನ್ನು ಬೆಳಿಗ್ಗೆಯೆ ಕೊಂಡಿಟ್ಟಿದ್ದೆ. ಹಾಲಿನ ಪಾತ್ರೆಗೇ ಬಾಯಿ ಹಚ್ಚಿ ಹೀರಿದೆ.

ವಿಶ್ರಾಂತಿಗಾಗಿ ಮಂಚದ ಮೇಲೆ ಬಿದ್ದುಕೊಂಡು ಕಣ್ಣುಚ್ಚಿದೆ. ಹಾಗೆಯೆ ಜಿಗಿದು ಕುಳಿತೆ. ಎಲಾ! ಎಂಥ ಪ್ರಮಾದ! ನನ್ನ ಮನೆಯ ಹಾಲನ್ನೇ ಕುಡಿಯುವುದಾದರೆ ಬೆಕ್ಕಾಗುವ ಅಗತ್ಯವೇನು? ಸಂಪಾದಿಸಿ ತಿನ್ನುವುದಾಗಲಿ, ಸ್ವತಃ ಕೊಂಡ ಹಾಲನ್ನು ಕುಡಿಯುವುದಾಗಲಿ ಬೆಕ್ಕಿಗೆ ಶೋಭಿಸುವ ಮಾತಲ್ಲ. ಏನೂ ಕೆಲಸ ಮಾಡದೆ, ಸಂಪಾದಿಸದೆ ಮೋಜಿನಿಂದಿರಬೇಕೆಂದಲ್ಲವೆ ನಾನು ಬೆಕ್ಕಾದದ್ದು. ಈಗ ನನ್ನ ಮನೆಯಲ್ಲೆ ಕಳ್ಳತನ ಮಾಡುವುದೆಂದರೆ- ಥೆ! ಥೆ! ಇನ್ನು ಇತರರ ಮನೆಯ ವಸ್ತುಗಳನ್ನೇ ತಿನ್ನಬೇಕು ಎಂದು ನಿರ್ಧರಿಸಿದೆ.

ಒಂದು ತಾಸು ನಿದ್ದೆ ಮಾಡಿರಬೇಕು. ಎಚ್ಚರಾದ ಬಳಿಕ ನಾಲ್ಕೂ ಕಾಲು ನೀಟಾಗಿ ಮಾಡಿ ಆಕಳಿಸಿ ಕಣ್ಣು ತೆರೆದೆ. ಎಲಾ! ಹೆಣ್ಣು ಬೆಕ್ಕೊಂದು ಕುತೂಹಲದಿಂದ ನನ್ನನ್ನೆ ನೋಡುತ್ತ ಮಂಚದ ತುದಿಯಲ್ಲಿ ಕುಳಿತಿತ್ತು. ಹೆಣ್ಣು ಬೆಕ್ಕು ಇಷ್ಟೊಂದು ಸುಂದರವಾಗಿರುತ್ತದೆ ಎಂದು ತಿಳಿದದ್ದು ನನಗೆ ಇದೇ ಮೊದಲು. ಅದರ ಮೋಹಕ ನಯನ, ಕೋಮಲ ಮೀಸೆ... ನಾನು ಎದ್ದು ನಿಂತೆ. ಒಂಟೆಯಂತೆ ಬೆನ್ನನ್ನು ಬಿಲ್ಲನ್ನಾಗಿ ಮಾಡಿಕೊಂಡು ಸ್ನೇಹಪೂರ್ಣ ಆದರೆ ಅವಿಶ್ವಾಸ ದೃಷ್ಟಿಯಿಂದ ನೋಡಿದೆ. ಆ ಹೆಣ್ಣು ಕೂಡ ನನ್ನನ್ನು ಔಪಚಾರಿಕ ಸ್ವಾಗತ ಆದರೆ ಪರಕೀಯ ಭಾವದಿಂದ ನೋಡಿತ

"ಏನು ಬಾವುಗರಾಯರೆ, ಇದೀಗ ಈ ಭಾ ದಲ್ಲಿ ಹೊಸತಾಗಿ ಬಂದಂತಿದೆ" ಎಂ ಕೇಳಿತು.

ವಿಚಾರ ಮಾಡುತ್ತ ಉತ್ತರವಿತ್ತೆ, "ಅಂದ ಹೊಸಬನೇನೂ ಅಲ್ಲ. ಆದರೂ ಹೊಸಬ ಎ ಬಹುದು."

"ಅಪ್ಪಯ್ಯಾ! ಮನುಷ್ಯರು ಬರೆಯುವ ನ ಕಥೆಗಳನ್ನೋದುತ್ತೀರೇನು ನೀವು?"

"ಯಾಕೆ?"

"ಅಂ ಹಂ! ನೀವೇಕೊ ಒಂದಿಷ್ಟು ಗೂ



ರ್ಥದಿಂದ ಮಾತಾಡಿದಿರಿ. ಅದಕ್ಕೇ ಕೇಳಿದೆ. ಮೊದಲು ಎಲ್ಲಿದ್ದಿರಿ?"

"ಈ ಮೊದಲು? ಹಂ, ಓರ್ವ ಪಾಸಿ ಮುದುಕಿಯ ಮನೆಯಲ್ಲಿದ್ದೆ. ಅಲ್ಲಿ ಬೇಸ ಬಂತು. ಆ ಮುದುಕಿಯೂ ಹೆಚ್ಚು ದಿನ ಬ ಕುವ ಲಕ್ಷಣವಿಲ್ಲ. ಈ ಕಡೆ ಬಂದೆ. ಹೇಗಿದೆ ಬಾಳು?"

"ಕೆಟ್ಟದ್ದು ಎನ್ನಲು ಬಾರದಿದ್ದರೂ ಇ ಹೆಚ್ಚಾಗಿ ತಂಗಳ ಉಳಿಯುವುದೇ ಇಲ್ಲ. ನಾನ ಸಮೀಪದ ಮಿಠಾಯಿ ಅಂಗಡಿಗೆ ಹೋಗಿ ಏನ ದರೂ ಕದ್ದು ತಿಂದು ಬರುತ್ತೇನೆ. ನೀವೆ ಇಂದು ಊಟ ಹೊಡೆದಿರಿ?"

"ಇಲ್ಲೇ ಹಾಲು ಕುಡಿದೆ."

''ಅಲ್ಲಾ, ಈ ಕೋಣೆಯ ಒಡೆಯ ತಿಂಗಳೊತ್ತು ರಜೆ ಪಡೆದು ಊರಿಗೆ ಹೋಗಿದ್ದಾನಂತೆ. ಇಳಿನಿಂದ ನಿಮ್ಮ ಗತಿ ಏನು?''

ನನ್ನ ಬಗ್ಗೆ ಬೇರೆ ದೃಷ್ಟಿಕೋಣ ಏನು ಹೇಳುದೆ ಎಂದು ತಿಳಿದುಕೊಳ್ಳಲು ಯೋಗ್ಯ ಸಂಧಿದು. ''ಹೇಗಿದ್ದಾನೆ ಈ ಮನೆ ಮಾಲಕ?'' ಎಂದು ಕೇಳಿದೆ.

''ಇಶ್ಶಿ. ಶುದ್ಧ ಭೋಳೆ ಮನುಷ್ಯ. ಎಷ್ಟೋ ಲ ಕಪಾಟಿನ ಬಾಗಿಲು ಮುಚ್ಚುವುದೇ ಇಲ್ಲ. ಎಷ್ಟೋ ಸಲ ಹಾಲಿನ ಪಾತ್ರೆಯನ್ನು ಮುಚ್ಚುವುಲ್ಲ. ಈತನ ಮರೆವು ಎಂಥಾದ್ದು ಗೊತ್ತೆ? ಹೆಂಡತಿ ಕಿಸೆಯಿಂದ ರೊಕ್ಕ ಹಾರಿಸಿದ್ದು ಇವನಿಗೆ ಳಿಯುವುದೇ ಇಲ್ಲ.''

ಎಲಾ! ನನ್ನ ಮನೆಯಲ್ಲಿ ಹೀಗೂ ನಡೆಯುದೇನು? ಈ ಒಳಗುಟ್ಟೆಲ್ಲ ಬೆಕ್ಕುಗಳಿಗೆ ಹೇಗೆ ಳಿಯುತ್ತದೋ ದೇವರೇ ಬಲ್ಲ. ನಾನು ಕೇಳಿದೆ 'ಮನೂ ಅಕ್ಕ......''

''ಛಿ? ನನಗೆಲ್ಲಾದರೂ ಅಕ್ಕ ಎನ್ನುತ್ತಾರೇನು?''

ಮನುಷ್ಯ ಜನ್ಮದಲ್ಲಿ ಹೆಂಡತಿಯ ಹೊರತಾಗಿ ಬೇರೆ ಸ್ತ್ರೀಯರೊಡನೆ ಮಾತಾಡುವಾಗ ಸ್ವಲ್ಪ ಎಡಿದಂತಾಗುತ್ತದೆ. ಅಂತೇ ಅಲ್ಲಿ 'ಅಕ್ಕಾ ಅವ್ವಾ' ಎನ್ನಬೇಕಾಗುತ್ತದೆ. ಬೆಕ್ಕಿನ ಜನ್ಮದಲ್ಲಿ ಇಂಥ ಕಪಟ ನಾಟಕದ ಅಗತ್ಯವೇನೂ ಇಲ್ಲ. 'ಸರಿ. ಅಕ್ಕ ಎನ್ನುವುದಿಲ್ಲ ಆಯಿತೆ? ಆದರೆ ನಿನಗೆ ಈ ಸಂಗತಿ ತಿಳಿದದ್ದು ಹೇಗೆ?''

''ಮಾಂಜರೇಕರರ ಮನೆಯಲ್ಲಿ ಕರಿ ಬಾವುಗವೊಂದಿದೆ. ಬಲು ಠಕ್ಕು ಪ್ರಾಣಿ ಅದು. ಈ ಮನೆ ಮಾಲಿಕ ಸಿಗರೇಟು ತರಲು ಹೋದ ಎಂದರೆ ಅವನ ಹೆಂಡತಿ ಬಾಗಿಲಲ್ಲಿ ಮಗಳನ್ನು ಕಾವಲಿರಿಸಿ ಅವನ ಕೋಟಿನ ಕಿಸೆಯಿಂದ ರೊಕ್ಕ ಹಾರಿಸುವುದನ್ನು ಆ ಕರೇ ಬಾವುಗವೇ ನನಗೆ ತೋರಿಸಿತು. ಎಲಾ? ಏಳಿ ಏಳಿ, ಓಡಿ.''

ನಾನು ತಟ್ಟನೆ ಎದ್ದು ನಿಂತೆ. ಆದರೆ ಓಡಿ ಹೋಗುವುದು ಯಾಕೆ? ಅತ್ತಿತ್ತ ನೋಡಿದೆ. ಕಿಡಕಿಯಲ್ಲಿ ಆ ಕರೇ ಬಾವುಗ ನಿಂತು ನಮ್ಮನ್ನು ಕಣ್ಣು ಕೆಕ್ಕರಿಸಿ ನೋಡುತ್ತಲಿತ್ತು. ಅದರ ಉಗ್ರ ರೂಪ ಕಂಡು ಓಡಿ ಹೋಗುವುದೇ ಸರಿ ಎನಿಸಿತು. ಅದು ಒಳಗೆ ಹಾರುತ್ತಿರುವ ಸಂಧಿ ಸಾಧಿಸಿ ನಾನು ಕಿಡಕಿಯ ಹೊರಗೆ ಹಾರಿದೆ. ಕಿಡಕಿಯ ಹೊರಭಾಗದ ಗೇಣಗಲದ ಕಲ್ಲುಪಟ್ಟಿಯ ಮೇಲೆ ಬೀಳುವ ಬದಲು ಕೆಳಗೆ ನೆಲಕ್ಕೆ ಬಿದ್ದೆ. ಆದರೆ ನಾನು ನಾಲ್ಕೂ ಕಾಲಗಳನ್ನೂರಿದ್ದರಿಂದ ನನಗೇನೂ ಪೆಟ್ಟಾಗಲಿಲ್ಲ. ಬೆಕ್ಕಾದುದರಿಂದ ಆಗುವ ಒಂದೊಂದೇ ಲಾಭ ನನಗೆ ಪ್ರತೀತವಾಗತೊಡಗಿತ್ತು.

ಪುನಃ ಮಾಳಿಗೆಯೇರಿ ಬಂದಾಗ ಮನು ಕೌತುಕದಿಂದ ನನ್ನನ್ನು ನೋಡುತ್ತ ನಿಂತಿದ್ದು ಕಾಣಿಸಿತು. ಕೃತಾರ್ಥನಾದಂತೆ ನನಗನಿಸಿತು. ಅಷ್ಟರಲ್ಲಿ ಗ್ಯಾಲರಿಯ ಮೂಲೆಯಲ್ಲಿ ಕುಳಿತಿದ್ದ ಪಾಟೀಲ ಮನೆಯ ಹೆಣ್ಣು ಬೆಕ್ಕು ''ಶ್ಯಶ್ಯ'' ಎಂದು ನನ್ನನ್ನು ಕರೆಯಿತು. ನಾನು ಬಾಲವಾಡಿಸುತ್ತ ಅದರ ಬಳಿ ಹೋದೆ. ''ಬನ್ನಿ, ಒಂದಿಷ್ಟು ಬಿಸಿಲಿಗೆ ಮೈಯೊಡ್ಡಿ ಕುಳಿತುಕೊಳ್ಳಿ'' ಎಂದಿತದು.

ಅದು ನನಗೆ ಇನ್ನಿಷ್ಟು ಸಮೀಪ ಸರಿದು ತನ್ನ ಮುಂಗಾಲಿನಿಂದ ನನ್ನ ಬೆನ್ನ ಮೇಲೆ ಮೃದು ಪ್ರಹಾರ ಮಾಡಿ ಹೇಳಿತು, ''ಅಲ್ಲಾ, ಇದೇ ಈಗ ಆ ಕೋಣೆಯ ಮಂಚದ ಮೇಲೆ ಕುಳಿತು ಮನಿಯ ಸಂಗಡ ಸರಸಸಲ್ಲಾಪ ನಡೆಸಿದ್ದಿರಲ್ಲ! ಕಾಳ್ಯಾ ಬಂದೊಡನೆ ಯಾಕೆ ಓಡಿದಿರಿ?''

''ಓಡಿದೆ? ಛೆ! ಮಿಠಾಯಿ ಅಂಗಡಿಯ ನೆನಪಾಗಿ ಓಡಿದೆ ಅಷ್ಟೆ. ನಾನೇನೂ ಎರಡನೆಯವರ



ಮಂಚದ ಮೇಲೆ ಕುಳಿತಿರಲಿಲ್ಲ. ನನ್ನ ಸ್ವಂತ ಮಂಚದ ಮೇಲೆ ಕುಳಿತಿದ್ದೆ.''

''ಹೌದೆ?'' ಅದು ಅವಿಶ್ವಾಸ ಪ್ರದರ್ಶಿಸಿತು. ಆಗ ನನಗೆ ಬೆಕ್ಕುಗಳು ಮಂಚಗಳನ್ನು ಕೊಳ್ಳುವುದಿಲ್ಲ ಎಂಬ ಮಾತು ನೆನಪಿಗೆ ಬಂತು.

ಅಷ್ಟರಲ್ಲಿ ಅದು ''ಏನ್ರಿ, ಆ ಮನಿಯಿಂದ ಒಂದಿಷ್ಟು ದೂರ ಇರಿ, ತಿಳಿಯಿತೇನು? ಅದು ತುಂಬ ಕಾರಸ್ಥಾನಿ ಮತ್ತು ಚಾಡಿಖೋರ ಹೆಣ್ಣು. ಆ ಕಪ್ಪು ಬಾವುಗದೊಡನೆ ಅದರದೇನೊ-''

''ಹೀಗೇನು? ನನಗೆ ಗೊತ್ತಿರಲಿಲ್ಲ.''

''ನನಗೆ ಗೊತ್ತಿದೆ. ಆ ಕಾಳ್ಯಾ ನನ್ನ ಒಂದು ಮರಿಯನ್ನೆ ಹಾರಿಸಿಬಿಟ್ಟಿದೆ.'' ಮರಿಯ ನೆನಪಿನಿಂದ ಅದರ ಕಣ್ಣಲ್ಲಿ ನೀರು ಬಂತು.

''ಪರಮಾತ್ಮನ ಇಚ್ಛೆ, ಯಾರೇನು ಮಾಡಲಾದೀತು? ಬನ್ನಿ, ನಿಮಗೊಂದಿಷ್ಟು ತಿಂಡಿ ಕೊಡುತ್ತೇನೆ,'' ಎಂದೆ.

''ಈಗ? ಈ ಮನೆಯಲ್ಲಿ ಹುಡುಗರು ದೊಡ್ಡವರು ಎಲ್ಲ ಇರುತ್ತಾರೆ.''

''ಬನ್ನಿ ನನ್ನ ಸಂಗಡ. ದಿವಾಡಕರನ ಮನೆಯವರೆಲ್ಲ ಬೆಳಗಿನ ಸಿನೇಮಾಕ್ಕೆ ಹೋಗಿದ್ದಾರೆ.''

ದಿವಾಡಕರನ ಮನೆಯನ್ನು ಕಿಟಕಿಯ ಮೂಲಕ ನುಗ್ಗಿದೆವು. ಹಾಲಿನ ಪಾತ್ರೆ, ಜಾಳಿಗೆಯ ಪೆಟ್ಟಿಗೆಯಲ್ಲಿತ್ತು. ನಾನು ಪೆಟ್ಟಿಗೆಯ ಮೇಲೆ ಹಾರಿದ್ದೆ ತಡ, ಹಾಲಿನ ಪಾತ್ರೆ ಉರುಳಿತು. ಹೆಣ್ಣುಬೆಕ್ಕಿನ ಮೇಲೆ ಪ್ರಭಾವ ಬೀರಲು ಹೋದ ನನಗೆ ನಾಚಿಕೆಯಾಯಿತು. ''ಎಂಥವರು ನೀವು! ತೀರ ಹೊಸಬರಂತೆ ಮಾಡುತ್ತಿದ್ದೀರಿ. ಇರಲಿ. ಬನ್ನಿ, ಬೇಗಬೇಗ ನೆಕ್ಕೋಣ'' ಎಂದಿತು ಹೆಣ್ಣು ಬೆಕ್ಕು. ನಾವು ಹಾಲು ನೆಕ್ಕುತ್ತಿದ್ದಂತೆ ನನಗೆ ಮೀನಿನ ವಾಸನೆ ಬಂತು. ಎಲಾ! ದಿವಾಡಕರ ಬ್ರಾಹ್ಮಣ. ಅವನ ಹೆಂಡತಿ ಉಳ್ಳಾಗಡ್ಡೆ ಕೂಡ ಮುಟ್ಟಳು ಎಂಬಂತೆ ಮಡಿ ಮಾತಾಡುವವಳು. ಇವರು ಕದ್ದು ಮೀನ-ಮಾಂಸ ತಿನ್ನುತ್ತಾರಲ್ಲ!

ಪ್ರಯಾಸಪಟ್ಟು ಮೀನಿನ ಪಾತ್ರೆ ಹುಡುಕಿದವು. ಅದನ್ನು ಸಂಪಾದಿಸುವ ಹವ್ಯಾಸದಲ್ಲಿ ಹಲಗೆಯ ಮೇಲಿದ್ದ ಪಾತ್ರೆ, ಡಬ್ಬಿಗಳೆಲ್ಲ ನಮ್ಮ ಮೇಲೆ ಬಿದ್ದವು. ನಾನು ಹೇಗೋ ತಲೆ ಹೊರಗೆ ಹಾಕಿ ಆ ಹೆಣ್ಣುಬೆಕ್ಕಿನ ಬಾಲ ಹಿಡಿದು ಜಗ್ಗ ಹತ್ತಿದೆ ಅದನ್ನು ಪಾರು ಮಾಡಲು. ಅದು ''ಏನು, ಎಲ್ಲಿಬೇಕಲ್ಲಿ ಮೈ ಮುಟ್ಟುತ್ತೀರಲ್ಲ?'' ಎಂದು ಗದರಿಸಿತು.

ಹುಸು ಪ್ರಯತ್ನ ಮಾಡಿ ಪಾತ್ರೆ, ಡಬ್ಬಿಗಳ ರಾಶಿಯಿಂದ ಹೊರಬಂದು ಯಥೇಚ್ಛವಾಗಿ ಮೀನು ತಿಂದೆವು. ''ನಾನಿಂದು ಪಾವಟಿಗೆ ಏರಿ ಬರುವಾಗ ಆ ಕೇಳಕರನ ಹೆಂಡತಿ ನನ್ನನ್ನು ಒದ್ದಳು. ನಾನು ತಪ್ಪಿಸಿಕೊಂಡೆ- ಆದರೆ ಕಾರಣವಿಲ್ಲದೆ ನನ್ನನ್ನು ಹೊಡೆಯಬಂದ ಅವಳಿಗೆ ಬುದ್ಧಿ ಕಲಿಸೋಣ. ಇಬ್ಬರೂ ಒಂದೊಂದು ಮೀನನ್ನೊಯ್ದು ಅವಳ ಅನ್ನ ಮತ್ತು ಸಾರಿನ ಪಾತ್ರೆಯಲ್ಲಿ ಹಾಕೋಣ'' ಎಂದೆ.

ಕೇಳಕರನ ಹೆಂಡತಿ ಅಡಿಗೆ ಮಾಡುತ್ತಿದ್ದಳು. ನಾವಿಬ್ಬರೂ ಸರ್‍ರನೆ ಒಳಗೋಡಿದೆವು. ನಾನು ಅನ್ನದ ಪಾತ್ರೆಯಲ್ಲಿ, ಆ ಹೆಣ್ಣುಬೆಕ್ಕು ಸಾರಿನ ಪಾತ್ರೆಯಲ್ಲಿ ಮೀನು ಚೆಲ್ಲಿ ಓಡಿದೆವು. ಅದನ್ನು ಕಂಡ ಕೇಳಕರನ ಹೆಂಡತಿ ಚೀರಿದಳು. ಕೈಗೆ ಸಿಕ್ಕ ಎರಡು ಟೊಮೆಟೊಗಳನ್ನು ನಮ್ಮತ್ತ ಒಗೆದಳು. ಯೋಗಾಯೋಗದಿಂದ ಅದೇ ಹೊತ್ತಿಗೆ ಸ್ನಾನ ಮಾಡಿ ತುಳಸೀ ಪೂಜೆಗೆ ಹೊರಟಿದ್ದ ಮೆಹಂದಳೆಯ ಹೆಂಡತಿಗೆ ಆ ಟೊಮೆಟೊಗಳು ಬಡಿದವು. ಅವಳು ರಣಗರ್ಜನೆ ಮಾಡಿದಳು- ಲಕ್ಷ್ಮಿ ಭಾರತಿ ಮೆಹಂದಳೆಬಾಯಿ ಮತ್ತು ಹಿಡಿಂಬಾ ಸ್ವರೂಪಿ ಕೇಳಕರ ಬಾಯಿಯವರಲ್ಲಿ ಝಾಡಾಝಾಡಿ ನಡೆದುಹೋಯಿತು.

ನನಗೆ ಬೆಕ್ಕಿನ ಜೀವನ ಬಲು ಹಿಡಿಸಿತು. ನಿತ್ಯ ಸ್ನಾನ ಮಾಡುವ ಕಟಕಟೆಯಿಲ್ಲದ್ದು ನನಗೆ ಬಹಳ ಹಿತಕರವಾಗಿತ್ತು. ಬೆಕ್ಕುಗಳಿಗೆ ಮಕ್ಕಳು ಮರಿಗಳನ್ನು ಪೋಷಿಸುವ ಜವಾಬ್ದಾರಿಯಿಲ್ಲ. ಮನುಷ್ಯರಿಗೊ, ಶಾಲೆಗೆ ಕಳಿಸು, ಪುಸ್ತಕ ತಾ, ಬಟ್ಟೆ ಕೊಡಿಸು, ಔಷಧಿ ತಾ ಒಂದೇ ಎರಡೇ

ನೂರಾರು ತಾಪತ್ರಯಗಳು.

ಆದರೆ ಈ ಬೆಕ್ಕಿನ ದೇಹಧಾರಣೆ ಮಾಡಿದಾಗಲೂ ನನಗೆ ಒಮ್ಮೊಮ್ಮೆ ಪೇಚು ಬರುತ್ತಿತ್ತು. ಮೊನ್ನೆ ನಾನು ದಾಮಲೆಯವರ ಮನೆಯಲ್ಲಿ ಇದ್ದಾಗ ಚೀಲದ ಮೇಲೆ ಮಲಗಿದ್ದೆ. ಯಾರೋ ಮೈಮೇಲೆ ಕೈಯಾಡಿಸಿದಂತಾಗಿ ಎಚ್ಚತ್ತೆ. ಸಪ್ರೆ ಮನೆಯ ಹೆಣ್ಣುಬೆಕ್ಕು ನನ್ನನ್ನು ಎಬ್ಬಿಸುತ್ತಿತ್ತು. ''ಏನಿದು ಕಿರಿಕಿರಿ?'' ಎಂದೆ.

ಅದು ಕೋಪಗೊಂಡು ''ನನ್ನದು ಕಿರಿಕಿರಿಯಾಯಿತೇನೊ! ಇತರ ಹೆಣ್ಣುಬೆಕ್ಕುಗಳೊಡನೆ ಮಾತ್ರ-''

''ಇರಲಿ ಇರಲಿ, ಏನೆನ್ನುತ್ತಿ?''

ಅದು ಒಂದಿಷ್ಟು ನಾಚಿಕೆಯಿಂದ ''ಇಂದು ನಿಮ್ಮನ್ನು ಊಟಕ್ಕೆ ಕರೆಯಬೇಕೆಂದಿದ್ದೆ. ಪಕ್ವಾನ್ನ ಸಿದ್ಧವಾಗಿದೆ. ಆದರೆ ನಿಮ್ಮದೇ ಪತ್ತೆಯಿಲ್ಲ.''

''ಸರಿ. ನಡಿ ಹೋಗೋಣ.''

ನಳದ ಮೇಲ್ಗಡೆಯ ಕಟ್ಟಿಗೆ ಮಾಡಿನಲ್ಲಿ ನನ್ನನ್ನು ಕೂರಿಸಿ ಅದು ಕಣ್ಮರೆಯಾಯಿತು. ನಿಮಿಷಾರ್ಧದಲ್ಲಿ ಅದು ತಿರುಗಿಬಂದಾಗ ಅದರ ಬಾಯಲ್ಲೊಂದು ಮೃತ ಇಲಿಯಿತ್ತು. ಅದನ್ನು ನನ್ನ ಮುಂದೆ ಚೆಲ್ಲಿ ''ಶುರುಮಾಡಿ'' ಎಂದಳು.

ಬಂತಲ್ಲ ಪೇಚು! ಬೆಕ್ಕಾದ ನಾನು ಇಲಿ ತಿನ್ನಬೇಕಾದ್ದು ಸರಿಯೆ. ಆದರೆ ನನಗಿನ್ನೂ ಮಾನವಜನ್ಮದ ನೆನಪಿದ್ದಿತಾದ್ದರಿಂದ ಇಲಿ ತಿನ್ನಲು ಹೇಸಿಕೆಯಾಯಿತು. ಆದರೆ ಈ ಹೆಣ್ಣಿಗೆ ನನ್ನ ಈ ಮಾತನ್ನು ಹೇಗೆ ತಿಳಿಸಬೇಕು?

ಒಂದು ಯುಕ್ತಿ ಹೊಳೆಯಿತು. '' 'ಹೆಣ್ಣೆ' ನನಗಿಂದು ಉಪವಾಸ'' ಎಂದೆ.

''ಇರಲಿ ಬಿಡಿ. ಇದು ಉಪವಾಸದ್ದೇ ಇಲಿ. ಮೊನ್ನೆ ವಾಮನಭಟ್ಟನ ಮನೆಯ ಬಾವುಗ ಉಪವಾಸಕ್ಕೆ ಇಲಿ ವರ್ಜ್ಯವಲ್ಲ ಎಂದು ಹೇಳಿದೆ.''

''ಆದರೆ ನನ್ನದು ನಿರ್ಜಲ ಏಕಾದಶಿ. ನಾನು ಇಂದು ನೀರು ಕೂಡ ಮುಟ್ಟುವುದಿಲ್ಲ.''

''ಅಂದರೆ ಆಗ ನೀವು ಮತ್ತು ಆ ಜೀಬಾವುಗ ಬಿಸ್ಕೀಟಿನ ಅಂಗಡಿಗೆ ಹೋಗಿದ್ದಿರಲ್ಲ. ನಿರ್ಜಲ ಉಪವಾಸಕ್ಕೆ ಬಿಸ್ಕಿಟ್...''

''ಅಯ್ಯೊ! ನಾವು ಹೋದದ್ದು ತಪಾಸಣೆಗಾಗಿ, ನಾಳಿನ ಪಾರಣೆಯ ವ್ಯವಸ್ಥೆಗಾಗಿ. ನಾಳೆ ಪಾರಣೆಗೆ ನಿನ್ನಲ್ಲಿಗೇ ಬರುತ್ತೇನೆ ಆಯಿತೆ?''

ತುಂಬ ಅಸಮಾಧಾನದಿಂದಲೆ ಅದು ಹೂಂ ಎಂದಿತು. ಮಾರನೆಯ ದಿನ ಅದರ ಬಳಿಗೆ ಸುಳಿಯಲೂ ಇಲ್ಲ ನಾನು. ಮತ್ತೊಮ್ಮೆ ಅದು ಭೆಟ್ಟಿಯಾದಾಗ ''ನನಗೀಗ ವೈರಾಗ್ಯ ಬರತೊಡಗಿದೆ. ನಾನು ಬೇಗನೆ ಸಂನ್ಯಾಸ ಸ್ವೀಕರಿಸುವೆ. ಇಲಿ-ಗಿಲಿ ತಿನ್ನುವುದು ಬಿಟ್ಟಿದ್ದೇನೆ. ಈಗ ನಾನು ಶುದ್ಧ ಶಾಕಾಹಾರಿ'' ಎಂದೆ. ಪಾಪ! ಅದು ನನ್ನ ಮಾತು ನಂಬಿ ಜೋಶಿಯವರ ಮನೆಯಿಂದ ಭಜಿ ಕದ್ದು ತಂದು ತಿನ್ನಿಸಿತು.

ಹೀಗೆ ಒಂದು ತಿಂಗಳು ಕಳೆದದ್ದೇ ಗೊತ್ತಾಗಲಿಲ್ಲ. ಮಾಂತ್ರಿಕನಿಗೆ ಕೊಡಲೆಂದು ನೂರರ ನೋಟೊಂದನ್ನು ಒಂದು ಪುಸ್ತಕದಲ್ಲಿ ಇಟ್ಟಿದ್ದೆ. ತಿಂಗಳು ಮುಗಿಯಲು ಆ ನೋಟು ತರಲೆಂದು ನಾನು ನನ್ನ ಮನೆಗೆ ಹೋದೆ. ಕಿಟಕಿಯೊಳಗಿಂದ ಒಳಗೆ ಹಾರಿದ್ದೇ ತಡ, ಆಶ್ಚರ್ಯದಿಂದ ಥಕ್ಕಾದೆ. ಅಕ್ಕಿ ಆರಿಸುತ್ತ ಕುಳಿತಿದ್ದ ಹೆಂಡತಿಯ ಮೇಲೆ ಜಿಗಿದಿದ್ದೆ ನಾನು. ಮೈಮೇಲೆ ಬೆಕ್ಕು ಬೀಳಲು ಅವಳು ಚಿಟ್ಟೆಂದು ಚೀರಿದಳು. ನಿಜವಾಗಿ ಅವಳು ಇಷ್ಟರಲ್ಲಿಯೇ ಬರಬಹುದೆಂಬ ಕಲ್ಪನೆಯೆ ಇಲ್ಲದ ನಾನೇ ಚೀರಬೇಕಾಗಿತ್ತು.

ಅವಳ ಕೈಲಿದ್ದ ತಾಟು ಕೆಳಗೆ ಬಿತ್ತು. ಓಡುತ್ತಿದ್ದ ನನಗೆ ಅವಳಿಂದ ಬಿದ್ದ ಒದೆತವನ್ನು ಈ ಜನ್ಮದಲ್ಲಿಯಂತೂ ಮರೆಯಲಾರೆ.

ಆ ಒದೆತದಲ್ಲಿದ್ದ ಕಸುವನ್ನು ಕಂಡು ಬೆಕ್ಕಿನ ರೂಪದಲ್ಲಿ ಗಂಡನೇ ಬಂದಿದ್ದಾನೆಂದು ಅವಳ ಅಂತರ್ಯಾಮಿ ಹೇಳಿರಬೇಕೆಂದು ನನಗನಿಸಿತು.

ಹೆಂಡತಿ-ಮಕ್ಕಳಿಂದ ಪೆಟ್ಟು ತಿಂದರೂ ''ಮ್ಯಾಂವ್'' ಎನ್ನಲಾರದವನಾಗಿದ್ದೆ. ದೇವಾ, ಇನ್ನು ಪುಸ್ತಕದಲ್ಲಿದ್ದ ನೋಟು ಸಂಪಾದಿಸುವುದು ಹೇಗೆ?

ಮಾರನೆಯ ದಿನ ಮಧ್ಯರಾತ್ರಿಯ ಸುಮಾ

ರಿಗೆ ಕಳ್ಳಹೆಜ್ಜೆಯಿಂದ ಮನೆ ಹೊಕ್ಕು ಪುಸ್ತಕದ ಶೆಲ್ಫ್ ಸ್ನೇರಿದೆ. ಅಲ್ಲಿಟ್ಟ ಡಬ್ಬಿ ಕೆಳಗೆ ಮಲಗಿದ್ದ ನನ್ನ ಹೆಂಡತಿಯ ಕಾಲ ಮೇಲೆ ಬೀಳಲು ಅವಳು ಕೂಗುತ್ತ ಎದ್ದು ದೀಪ ಹಚ್ಚಿದಳು. ನಾನು ಪುಸ್ತಕವನ್ನು ಹಾಗೆಯೆ ಚೆಲ್ಲಿ ಕೊಟ್ಟು ಓಡಿದೆ. ಓಡುವ ನನ್ನನ್ನು ಕಂಡು ಮಧು ''ಅಮ್ಮಾ, ಇದು ಕಳ್ಳ ಬೆಕ್ಕು'' ಎಂದ.

''ಏನು ಶನಿಯಂತೆ ಕಾಡುತ್ತಿದೆ ಈ ಬಾವುಗ?'' ಎನ್ನುತ್ತ ನನ್ನ ಹೆಂಡತಿ ಪುಸ್ತಕವನ್ನೆತ್ತಿಕೊಂಡಳು. ಅದನ್ನು ಇಡುತ್ತಿದ್ದಾಗ ಅರ್ಧ ಹೊರಗೆ ಬಂದ ನೋಟನ್ನು ಕಂಡಳು. ನನ್ನ ಎದೆ ಝುಲ್ಲೆಂದಿತು. ಅವಳೇನಾದರೂ ಈ ಹಣ ಖರ್ಚು ಮಾಡಿದರೆ ನಾನು ಸಾಯುವವರೆಗೂ ಬೆಕ್ಕಾಗಿಯೆ ಇರಬೇಕಲ್ಲ. ನನ್ನ ಹೆಂಡತಿ ಮಕ್ಕಳಿಂದಲೇ ಒದೆಸಿಕೊಂಡು ಜೀವನ ಸಾಗಿಸಬೇಕಲ್ಲ?

''ನೋಡಿದೆಯಾ ನಿನ್ನ ತಂದೆಯ ಮೂರ್ಖತನ! ಪುಸ್ತಕದಲ್ಲಿ ಯಾರಾದರೂ ನೂರರ ನೋಟು ಇಡುತ್ತಾರೇನು? ಅದನ್ನು ಸುರಕ್ಷಿತ ಸ್ಥಳದಲ್ಲಿ ಇಡಬೇಕು'' ಎಂದು ನನ್ನ ಹೆಂಡತಿ ನೋಟನ್ನು ಗೋದಿಯ ಡಬ್ಬಿಯಲ್ಲಿಟ್ಟಳು.

ಮತ್ತೆ ಎಲ್ಲರೂ ನಿದ್ದೆ ಮಾಡಿದರು. ನಾನೂ ಎರಡು ತಾಸು ಕಿಟಕಿಯ ಹೊರಗಡೆ ನಿದ್ದೆ ಮಾಡಿದೆ. ಬೆಳಗಿನ ಜಾವದಲ್ಲಿ ಎದ್ದು ಒಳಗೆ ಹೋಗಿ ಗೋದಿಡಬ್ಬಿಯಿಂದ ನೋಟು ಹಾರಿಸಿದೆ. ಗೋದಿ ಡಬ್ಬಿ ನನ್ನ ಹೆಂಡತಿಯ ಬೆನ್ನ ಮೇಲೆ ಬಿದ್ದದ್ದು ಆಕಸ್ಮಿಕವೇ ಹೊರತು ಬುದ್ಧಿಪೂರ್ವಕವಲ್ಲ ಎಂದು ಬೆಕ್ಕಿನ ಜಾತಿಗೆ ಶಾಪ ಹಾಕುತ್ತಿದ್ದ ನನ್ನ ಹೆಂಡತಿಗೆ ಹೇಳಬಯಸುತ್ತೇನೆ.

ಮಾಂತ್ರಿಕನಲ್ಲಿಗೆ ಹೋದೆ.

ಹದಿನೈದೇ ಮಿನಿಟುಗಳಲ್ಲಿ ಆತ ನನ್ನನ್ನು ಮನುಷ್ಯನನ್ನಾಗಿ ಮಾಡಿದ. ಅವನ ಮನೆಯಿಂದ ಹೊರಬೀಳುವುದೇ ತಡ, ಹಿಂದಿನ ಸಮಸ್ಯೆಗಳು ನನ್ನ ತಲೆತಿನ್ನಹತ್ತಿದವು. ಬಸ್ಸಿನ ಚಾರ್ಜು? ಬರಿಗೈಯಿಂದ ಮನೆಗೆ ಹೋಗು



ವುದು ಹೇಗೆ? ಎಲ್ಲಿ ಗೆಳೆಯನಲ್ಲಿಗೆ ಹೋಗಿ ಹತ್ತು ರೂಪಾಯಿ ಕೈಗಡ ಇಸಿದುಕೊಂಡ.

ಮನೆಗೆ ಬಂದೆ. ಮಾರನೆಯ ದಿನ ಬೆಳಗ್ಗೆ ನಾನೆದ್ದಾಗ ಎರಡು ಬೆಕ್ಕುಗಳು ನನ್ನ ಮನೆಯಲ್ಲಿ ಠಾಣ್ಯ ಹೂಡಿದ್ದವು. ಎಷ್ಟು ಮಾಡಿದರೂ ಹೊರಬೀಳಲಿಲ್ಲ ಅವು. ಅವೆರಡೂ ನನ್ನ ಬೆಕ್ಕಿನ ಜೀವನದಲ್ಲಿ ನನ್ನ ಸ್ನೇಹ ಬೆಳೆಸಿದ ಹೆಣ್ಣು ಬೆಕ್ಕುಗಳು. ಅವು ನನ್ನನ್ನು ವಿಚಿತ್ರ ದೃಷ್ಟಿಯಿಂದ ನೋಡುತ್ತ ಕುಳಿತಿದ್ದವು. ಎಲಾ, ಎಂದುಕೊಳ್ಳುವಷ್ಟರಲ್ಲಿ ನನ್ನ ಮಗಳು ತನ್ನ ಕೈಯಲ್ಲಿನ ಮರದ ಗೊಂಬೆಯಿಂದ ಅವನ್ನು ಹೊಡೆಯಲು ಅವು ಓಡಿದವು.

ಆಫೀಸಿಗೆ ಹೊರಟಾಗ ಆ ಕರಿಬಾವುಗ ನನ್ನನ್ನು ತಿನ್ನುವಂತೆ ಕ್ರೂರದೃಷ್ಟಿಯಿಂದ ನೋಡುತ್ತ ಮೆಟ್ಟಲುಗಳ ಮೇಲೆ ಕುಳಿತಿತ್ತು. ತೀರ ಕೆಳಗಿನ ಮೆಟ್ಟಲಿನ ಬಳಿ ಮನಿ ಕರುಣ ದೃಷ್ಟಿಯಿಂದ ನನ್ನನ್ನೇ ನೋಡುತ್ತ ಕುಳಿತಿತ್ತು.

ಈಗಲೂ ಕಚೇರಿಯಲ್ಲಿ ಸಾಮಾನ್ಯರಂತೆ ನಡೆಯುವುದು ತ್ರಾಸೆನಿಸುತ್ತದೆ. ಮ್ಯಾನೇಜರ ಅಪ್ಪಣೆ ಮಾಡಿದಾಗ ಮ್ಯಾಂವ್ ಮಾಡಬೇಕು, ಶೋಭಾ ಮುಗುಳ್ನಗುತ್ತ ಸಮೀಪ ಬಂದಾಗ ಅವಳ ಕೈ ನೆಕ್ಕಬೇಕು, ಖುರ್ಚಿಯಲ್ಲಿ ಮೈ ಮುರಿದು ನಿದ್ದೆ ಮಾಡಬೇಕು ಎಂದೆಲ್ಲ ಅನಿಸುತ್ತದೆ. ಬೆಕ್ಕಿನ ಜನ್ಮದ ನೆನಪು ಎಷ್ಟು ಸಿಹಿಯಾಗಿದೆಯೆಂದರೆ ವರ್ಷಕ್ಕೊಮ್ಮೆಯಾದರೂ ಬೆಕ್ಕಾಗಿ ಕೆಲ ದಿನ ಬಾಳಬೇಕು ಎನಿಸುತ್ತದೆ.

ಆದ್ದರಿಂದಲೆ ನಿತ್ಯದ ತಾಪತ್ರಯಗಳಿಗೆ ನೀವು ಬೇಸತ್ತಿದ್ದರೆ - ಒಂದೇ ಉಪಾಯವಿದೆ ಅದರಿಂದ ಪಾರಾಗಲು - ನೀವು ಬೆಕ್ಕಾಗಿ. ●

## -137-

## ಆರಾಮದಿಂದ ಬದನೆಯವರೆಗೆ

ದಿವಂಗತ ಜವಾಹರಲಾಲರು ''ಆರಾಮ ಹರಾಮ ಹೈ'' ಎಂದು ಕರೆ ಕೊಟ್ಟರು. ಈ ವಾಕ್ಯದಲ್ಲಿ ''ಹರಾಮ'' ಶಬ್ದ ಪರಕೀಯವೆಂದು ಮೇಲ್ನೋಟಕ್ಕೇ ತೋರೀತು. ಹೌದು. ''ಹರಾಮ'' ಎಂಬ ಅರಬ್ಬಿ ಶಬ್ದಕ್ಕೆ ವ್ಯಭಿಚಾರಿ, ಲಂಪಟ ಎಂಬರ್ಥಗಳೊಡನೆ ದುಡಿಯದೆ ಉಣ್ಣುವ ಮೈಗಳ್ಳ ಎಂಬ ಅರ್ಥವೂ ಇದೆ. ಒಟ್ಟಿನಲ್ಲಿ ''ಹರಾಮ'' ಎಂದರೆ ಅನಾಚಾರಿ, ಅನಾಚಾರದಲ್ಲಿ ನಿರತನಾದವ. ನೆಹರೂ ಅವರ ಸದಾ ಕಾರ್ಯನಿರತ ಜೀವನದಲ್ಲಿ ಕೆಲಸ ಮಾಡದೆ ಸುಖಪುರುಷನಾಗಿರುವಾತ ಅನಾಚಾರಿ ಎಂಬ ತತ್ವ ಮಾರ್ಗದರ್ಶಕವಾಗಿತ್ತು. ಆದರೆ ''ಆರಾಮ'' ಶಬ್ದ ನಮಗೆ ವಿದೇಶಿ ಅನಿಸುವುದೇ ಇಲ್ಲ. ಇದು ಶುದ್ಧ ಸಂಸ್ಕೃತವೇ ಅನಿಸುತ್ತದೆ. ವಾಸ್ತವಿಕವಾಗಿ ಇದು ಪಾರಸೀಕ ಶಬ್ದ. ಸುಖ, ಚೈನ, ಖುಶಿ, ನಿಶ್ಚಿಂತವಾಗಿರುವುದು ಇತ್ಯಾದಿ ಅರ್ಥಗಳು ಅದಕ್ಕಿವೆ. ನಮ್ಮ ''ಆರಾಮ ಕುರ್ಚಿ'' ಕೂಡ ಇವರದೇ ಕವಲು. ಅಂದಾಕ್ಷಣ ಸಂಸ್ಕೃತದಲ್ಲಿ ಈ ಶಬ್ದ ಇಲ್ಲವೆಂದಲ್ಲ. ಇದೆ. ''ರಮ್''=ಸುಖಪಡು ಎಂಬರ್ಥದ ಸಂಸ್ಕೃತ ಧಾತುವಿನಿಂದ ಹುಟ್ಟಿದ ಆರಾಮ ಶಬ್ದಕ್ಕೆ ಸುಖಕರ, ರಮ್ಯ, ಸುಂದರ ಎಂಬರ್ಥಗಳೊಡನೆ ಹೂದೋಟ, ಆರೋಗ್ಯ, ವಿಶ್ರಾಂತಿ, ಆರಾಮ ಇತ್ಯಾದಿ ಅರ್ಥಗಳಿವೆ. ಅದರಿಂದ ನಮ್ಮ ಮೇಲಿನ ವಾಕ್ಯದಲ್ಲಿ ಬರುವ ''ಆರಾಮ'' ಶಬ್ದವನ್ನು ಸಾಧಿಸುವುದು ಕಷ್ಟವಲ್ಲ. ಮೂಲತಃ ಸಂಸ್ಕೃತದ ಆರಾಮ ಯಾವ ಧಾತುವಿನಿಂದ ಹುಟ್ಟಿತೋ ಆ ಧಾತುವಿನ ಸೋದರ ಧಾತು ಪಾರಸೀಕ ಭಾಷೆಯಲ್ಲಿಯೂ ಇದೆ. ಎರಡೂ ಅಕ್ಕತಂಗಿಯರಂಥ ಭಾಷೆಗಳಾಗಿರುವುದರಿಂದ ಇಲ್ಲಿ ಸೋಜಿಗವೂ ಇಲ್ಲ. ಆದರೆ ಐತಿಹಾಸಿಕ ಸನ್ನಿವೇಶದಲ್ಲಿ ಈ ಅರ್ಥದಲ್ಲಿ ಆರಾಮ ಶಬ್ದ ನಮಗೆ ಬಂದದ್ದು ಪಾರಸೀಕದಿಂದ ಎಂಬುದಷ್ಟೇ ತಥ್ಯ.

★

''ದಸ್ತಗಿರಿ'' ಶಬ್ದ ಬಂಧನ ಎಂಬರ್ಥದಲ್ಲಿ ಸತ್ಯಾಗ್ರಹ ಸಮರ ಕಾಲದಲ್ಲಿ ವೃತ್ತಪತ್ರಿಕೆಗಳಲ್ಲಿ ಬಹಳವಾಗಿ ಪ್ರಯೋಗವಾದದ್ದು. ಇದೂ ಪಾರಸೀಕ ಪದ. ''ದಸ್ತ್'' ನಮ್ಮ ಸಂಸ್ಕೃತದ ''ಹಸ್ತ''ದ ಜ್ಞಾತಿಪದ. ಕೈ, ಹಿಡಿತ ಎಂದರ್ಥ. (''ದಸ್ಕತ್ತು''[ಸಹಿ] ನಿಜವಾಗಿ ''ದಸ್ತ್+ಖತ್''- ಕೈಬರಹ.) ''ಗೀರ್'' ಎಂದರೆ ಹಿಡಿಯುವವ. ಆದರೆ ''ದಸ್ತ+ಗೀರ್'' ಒಂದಾದಾಗ ಉರ್ದುವಿನಲ್ಲಿ ಬಂಧನ ಎಂಬರ್ಥ ಪ್ರಧಾನವಲ್ಲ. ಕೈಯಾಸರೆ ಕೊಟ್ಟು ನೆರವಾಗುವಾತ ಎಂದೇ ಅರ್ಥ. ಹೀಗೆ ''ದಸ್ತಗೀರಿ'' ಎಂದರೆ ಸಹಾಯಕತೆ. ''ದಸ್ತಗೀರ್'' ಎಂಬ ಹೆಸರಿನ ಒಬ್ಬ ಮುಸ್ಲಿಂ ಹಿರಿಯ ಕನ್ನಡ ಲೇಖಕರೇ ಇದ್ದಾರೆ. ಆದರೂ ಪೋಲೀಸ್ ಪರಿಭಾಷೆಯಲ್ಲಿ ಆ ಪದಕ್ಕೆ ಕೆಟ್ಟ ಅರ್ಥವೇ ಪ್ರಧಾನವಾಗಲು ಬಂಧನವೂ ಕೈ ಹಿಡಿದು ವಶಪಡಿಸಿಕೊಳ್ಳುವುದೇ ಆಗಿರುವುದು ಕಾರಣ. ಅಲ್ಲದೆ ''ಗೀರಃ'' ಪದಕ್ಕೆ ಪಾರಸೀಕ ಭಾಷೆಯಲ್ಲಿ ಲೋಹದ ಕೋಳ ಎಂಬರ್ಥವಿರುವುದೂ ಅರ್ಥವ್ಯತ್ಯಾಸಕ್ಕೆ ಕಾರಣವಾಗಿರ

ಬಹುದು. "ಗೀರ್" ಎಂಬುದೂ ಸಂಸ್ಕೃತದ "ಗ್ರಹಣ"ಕ್ಕೆ ಸಂವಾದಿಯಾದ ಪದವೇ. "ದಸ್ತಗಿರಿ"= ಹಸ್ತಗ್ರಹಣ.

ಪೋಲಿಸ್ ಪರಿಭಾಷೆಯಲ್ಲಿ ಈ ದೇಶದಲ್ಲಿ ಶಾಶ್ವತ ಸ್ಥಾನ ಪಡೆದಿರುವ ಇನ್ನೊಂದು ಪದ "ಗೋಳೀಬಾರು." ಇದು ಕನ್ನಡ ಬಾಯಿಗೆ ಸರಿಯಾಗಿ ರೂಪಾಂತರಗೊಂಡ ಪಾರಸೀಕ ಶಬ್ದ. ಮೂಲದಲ್ಲಿ "ಗೋಲಃ ಬಾರೀ". ಇಲ್ಲಿನ "ಗೋಲಃ" ಸಂಸ್ಕೃತ "ಗೋಲ"ಕ್ಕೆ ಸಂಬಂಧಿಯೇ. ದುಂಡಾಗಿರುವಂಥಾದ್ದು-ಭೂಗೋಲದಿಂದ ಹಿಡಿದು ಮಕ್ಕಳಾಟದ ಗೋಲಿಯವರೆಗಿನ ಗುಂಡುಗಳಲ್ಲೆಲ್ಲ ಕಾಣಸುವಂಥಾದ್ದು. "ಬಾರ್" ಅಥವಾ "ವಾರ್" ಎಂದರೆ ಆಕ್ರಮಣ, ಧಾಳಿ. ಗುಂಡುಗಳಿಂದ ಆಕ್ರಮಣವೇ ಗೋಲಾ(ಲಃ)ಬಾರೀ.

★

ಬಂಗಾಲಿಗಳ ಪ್ರೀತಿಯ ಸಿಹಿ ತಿಂಡಿ "ರಸಗುಲ್ಲ"ಕ್ಕೂ ಅದರ ಆಕಾರದಿಂದಲೇ ಹೆಸರು ಬಂದದ್ದು. ಉತ್ತರ ಕರ್ನಾಟಕದ "ಗೋಳಂಬ" ಎಂಬ ಖಾದ್ಯ, "ಗುಳೋರಿಗೆ" ಎಂಬ ಉಬ್ಬಿದ ಭಕ್ಷ್ಯ ಇವೆಲ್ಲ ಆಕಾರಮೂಲವಾಗಿಯೇ ಹೆಸರು ಪಡೆದಿವೆ.

ಇಲ್ಲಿ ಒಂದು ವಿಷಯಾಂತರ ಮಾಡಬಹುದಾದರೆ, ಈ "ಗೋಲ"ದ ವ್ಯಾಪಕತೆ ಆಶ್ಚರ್ಯ ಹುಟ್ಟಿಸುವಂತಿದೆ. ಸಂಸ್ಕೃತದಲ್ಲಿ "ಗೋಲ" ಇದೆ. ಗುಂಡಗಿರುವ ಪದಾರ್ಥ ಗೋಲ. ಭಾಸ್ಕರಾಚಾರ್ಯರ "ಗೋಲಾ"ಧ್ಯಾಯ ಭೂಮಿಯನ್ನು ಒಂದು ಗೋಲವೆಂದು ಸಾಧಿಸಿ ಆ ಗೋಲದ ವರ್ತನೆಯನ್ನು ವಿವರಿಸುತ್ತದೆ. ಪಾರಸೀಕ "ಗೋಲಃ" (ಗೋಲಾ) ಬಗ್ಗೆ ಈಗಾಗಲೇ ಚರ್ಚಿಸಿದೆ. ಚಿಕ್ಕ ಗೋಲವೇ ಗೋಲಿ. ನಮ್ಮ ಮಕ್ಕಳು ಆಡಲು ಬಳಸುವ "ಗೋಲಿ"ಯ ಹೆಸರು ಬಹುಶಃ ಪಾರಸೀಕದಿಂದಲೇ ಬಂದಿರಬೇಕು. ಗೋಲಕ್ಕೆ ಸಂವಾದಿಯಾಗಿ ಇಂಗ್ಲೀಷ್, ಫ್ರೆಂಚ್, ಸ್ಪಾನಿಶ್ ಭಾಷೆಗಳಲ್ಲಿ ಗ್ಲೋಬ್,ಗ್ಲೋಬೋ ಪದಗಳಿವೆ. ಇವು ಲ್ಯಾಟಿನ್ನಿನಿಂದ ಬಂದವುಗಳು. ಲ್ಯಾಟಿನ್ನಿನಲ್ಲಿ "ಗ್ಲೋಬಸ್" ಇದೆ. ಅದರ ಮೂಲ ಅರ್ಥ ಚೆಂಡು ಎಂದು. ಗ್ರೀಕಿನಲ್ಲಿ "ಗ್ಲೋಬಸ್" ಪದಕ್ಕೆ ಬಿಂದು ಎಂದರ್ಥ. ಇದು ಗ್ಲೋಬಸ್ ಎಂಬ ಲ್ಯಾಟಿನ್ ಪದಕ್ಕೆ ಜ್ಞಾತಿ ಹೌದೋ ಅಲ್ಲವೋ ಹೇಳಲಾಸಲ್ಲ. ಗ-ಲ ಎಂಬ ವರ್ಣಗಳ ಸಂಯೋಗದಿಂದಾಗುವ ಇಂಡೋ-ಯುರೋಪಿಯನ್ ಪದಗಳ ಮಾತು ಹೀಗಾದರೆ ಸಂಸ್ಕೃತದಲ್ಲೇ ಇರುವ "ಗುಟಿಕಾ" ಮತ್ತು "ಗುಲಿಕಾ"ಗಳನ್ನು ನೋಡಿ. ಔಷಧ ಮೊದಲಾದವುಗಳ "ಗುಳಿಗೆ"ಗೆ ಈ ಹೆಸರು. ಅದಲ್ಲದೆ ದ್ರಾವಿಡ ಭಾಷೆಗಳಲ್ಲಿ ಕೂಡ ಗುಂಡಗಿರುವ ನೀರಿನ ಬುದ್ಬುದಕ್ಕೆ "ಗುಳ್ಳೆ" ಎನ್ನುತ್ತೇವೆ. ಕಜ್ಜಿ ಮೊದಲಾದವುಗಳ ಬೊಕ್ಕೆಯೂ ಗುಳ್ಳೆಯೇ. "ಲ"ದ ಬದಲು "ಳ" ಬಂದದ್ದು ಬಿಟ್ಟರೆ ಗೋಲಕ್ಕೂ ಇದಕ್ಕೂ ವ್ಯತ್ಯಾಸವೇನಿದೆ? ಕನ್ನಡ, ತುಳುಗಳಲ್ಲಿ "ಗುಳ್ಳ" ಎಂಬ ಹೆಸರು ಗುಂಡಗಿನ ತರಕಾರಿಯಾದ ಬದನೆಗೆ ಸಲ್ಲುತ್ತದೆ.

★

ತೆಲುಗಿನಲ್ಲಿ "ಗುಳ್ಳ" ಎಂದರೆ ದುಂಡಗಿನ ಮೀನು ಚಿಪ್ಪು. "ಗುಡ್ಡೆ" ಎಂಬುದು ತತ್ತಿಗೂ ಕಣ್ಣುಗುಡ್ಡೆಗೂ ಅನ್ವಯಿಸುವ ಕನ್ನಡ ಪದ. ತೆಲುಗಿನಲ್ಲಿ ಇವೇ ಪದಾರ್ಥಗಳಿಗೆ "ಗುಡ್ಡು" ಎಂಬ ಶಬ್ದ ಇದೆ. ದ್ರಾವಿಡ ಭಾಷೆಗಳಲ್ಲಿ ಒಂದಾದ ಕೋಮಿಯಲ್ಲಿ "ಗುಟ್" ಎಂದರೆ ವೃಷಣ. ಕೊಂಡ ಭಾಷೆಯಲ್ಲಿ "ಗುಡು" ಎಂದರೆ ತತ್ತಿ. ಕನ್ನಡ, ತುಳುಗಳಲ್ಲಿ "ಗುಂಡು" ಇದೆ. ಧ್ವನಿಯಲ್ಲಿ ಇವು ಗೋಲಕ್ಕೆ ಸಮೀಪವಾಗಿಲ್ಲವೆ? "ಗು-ಣ್(ಳ್)-ಡು" ಎಂದು ವರ್ಣವಿಭಜನೆ ಮಾಡಿ ನೋಡಿ. ಚಂದ್ರಸೂರ್ಯರ ಸುತ್ತ ಒಮ್ಮೊಮ್ಮೆ ಕಂಡು ಬರುವ ವೃತ್ತಾಕಾರದ ಛಾಯೆಗೆ ಕನ್ನಡದಲ್ಲಿಯೂ ತೆಲುಗಿನಲ್ಲಿಯೂ "ಗುಡಿ" ಎಂಬ ಹೆಸರಿದೆ. (ಗುಡಿ ಕಟ್ಟಿದೆ). ಡ-ಳಗಳು ಒಂದರ ಬದಲು ಇನ್ನೊಂದು ನಿಲ್ಲಬಲ್ಲವು. ಇದನ್ನೆಲ್ಲ ಹೋಲಿಸಿದರೆ ಕೆಲವೊಮ್ಮೆ ಶಬ್ದಗಳನ್ನು ರೂಪಿಸುವಾಗ ಮನುಷ್ಯ ಮನಸ್ಸು ವಿಶಿಷ್ಟವಾದ ಅಲಿಖಿತ ನಿಯಮಗಳನ್ನು ಅನುಸರಿಸುತ್ತಿದೆ ಎನಿಸುವುದಿಲ್ಲವೆ?

**ಪಾವೆಂ.**

# ಪೆಟ್ರೋಲಿನ ಕೊರತೆಗೆ ಜಲಜನಕದ ಪರಿಹಾರ

ಸೊಂದಲಗೆರೆ ಲಕ್ಷ್ಮೀಪತಿ

ಇನ್ನು ಹತ್ತೇ ಹತ್ತು ವರ್ಷಗಳಲ್ಲಿ ಪ್ರಪಂಚದ ಪೆಟ್ರೋಲಿನ ನಿಕ್ಷೇಪಗಳೆಲ್ಲ ಬರಿದಾಗಲಿವೆ - ಅಥವಾ ಆ ವೇಳೆಗೆ ಅಲ್ಲಲ್ಲಿ ಇನ್ನೂ ಅಷ್ಟಿಷ್ಟು ಉಳಿದಿದ್ದರೂ ಅದನ್ನು ನೆಲದಾಳದಿಂದೆತ್ತಿ ಸಂಸ್ಕರಿಸುವುದು ವ್ಯಾವಹಾರಿಕವಾಗಲಿಕ್ಕಿಲ್ಲ. ಅದರ ಬದಲಿಗೆ ಕಲ್ಲಿದ್ದಲನ್ನಾಗಲಿ ಸೌರ ಶಕ್ತಿಯನ್ನಾಗಲಿ ಅಥವಾ ಇನ್ನಾವುದೇ ಶಕ್ತಿ ಮೂಲವನ್ನಾಗಲಿ ಬಳಸುವುದು ಎಷ್ಟೋ ಪ್ರಸಂಗಗಳಲ್ಲಿ ಸಾಧ್ಯವಾಗಲಿಕ್ಕೂ ಇಲ್ಲ. ಹಾಗಾದರೆ ಮುಂದೇನು? ಮೋಟರು, ಟ್ರಕ್ಕು, ಬಸ್ಸು, ಸ್ಕೂಟರು ಮೊದಲಾದ ವಾಹನಗಳಿಗಲ್ಲದೆ ಪೆಟ್ರೋಲನ್ನೇ ಅವಲಂಬಿಸಿರುವ ಯಂತ್ರೋಪಕರಣಗಳಿಗೆ ಮುಂದೆ ಚಿರಂತನ ವಿಶ್ರಾಂತಿಯೆ? ಈ ಇಂಧನ ಕ್ಷಾಮವನ್ನು ಎದುರಿಸದೆಯೆ ಜಗತ್ತಿಗೆ ಬೇರೆ ದಾರಿಯುಂಟೆ?

ವಿಪರ್ಯಾಸವೆಂದರೆ ವಿಜ್ಞಾನಿಗಳು ಈ ಬಗೆಗೆ ತಲೆಕೆಡಿಸಿಕೊಂಡಿದ್ದು ತೀರ ತಡವಾಗಿ - 1970ರಿಂದೀಚೆಗೆ. ತಡವಾದರೂ ಪರವಾಗಿಲ್ಲ, ಅದರ ಸಾಧನೆಗಳು ಆಶಾದಾಯಕವಾಗಿವೆ. ಉದಾಹರಣೆಗೆ ಎಲ್ಲಡೆಗೂ ಎಗ್ಗಳವಾಗಿ ಬೆಳೆಯುವ ಮುಸುಕಿನ ಜೋಳವನ್ನೇ ತೆಗೆದುಕೊಳ್ಳಿ. 1970ರ ಸಮಾರಿಗೆ ಅದನ್ನು ಸಂಸ್ಕರಿಸಿ ಮದ್ಯಾರ್ಕವನ್ನು (Alcohol) ಪಡೆಯಬಹುದೆಂಬುದನ್ನು ವಿಜ್ಞಾನಿಗಳು ಕಂಡುಹಿಡಿದರು. ಆದರೆ ಮದ್ಯಾರ್ಕದಿಂದ ಕಾರುಗಳು ಓಡುವುದಿಲ್ಲ. ಪೆಟ್ರೋಲು ಅವುಗಳಿಗೆ ಬೇಕೇಬೇಕು. ಆದರೆ ಮದ್ಯಾರ್ಕವನ್ನು ಅಗ್ಗದಲ್ಲಿ ತಯಾರಿಸಿ ಶೇಕಡಾ 15-20ರಷ್ಟು ಪೆಟ್ರೋಲಿನಲ್ಲಿ ಬಳಸಿ ಇಂಧನ ಸಾಮರ್ಥ್ಯವನ್ನು ಹೆಚ್ಚಿಸಿಕೊಳ್ಳಬಹುದು. ಮುಸುಕಿನ ಜೋಳ ಬೇಡವೆಂದರೆ ಕಬ್ಬನ್ನು ಬೆಳೆದು ಎಕರೆಗೆ ಎರಡು ಟನ್ನಿನಷ್ಟು ಮದ್ಯಾರ್ಕವನ್ನು ಪಡೆಯಬಹುದು. ಮತ್ತು ಇಂಧನ ಸಾಮರ್ಥ್ಯದ ದೃಷ್ಟಿಯಿಂದ ಈ ಎರಡು ಟನ್ನೆಂದರೂ ಅಷ್ಟೆ, 5.8 ಟನ್ನಿನಷ್ಟು ಕಲ್ಲೆಣ್ಣೆಯೂ

ದರೂ ಅಷ್ಟೆ. ಆದರೆ 1970-80ರ ದಶಕದಲ್ಲಿ ಪ್ರಯೋಗಾಲಯಗಳಿಂದ ಹೊರಹೊಮ್ಮಿದ ಈ ಫಲಿತಾಂಶಗಳು ಅದೇಕೋ ಮಾರುಕಟ್ಟೆಯನ್ನು ಪ್ರವೇಶಿಸಲೇ ಇಲ್ಲ ಬದಲು ಈಗ ಜಲಜನಕವನ್ನು ಹೊಸ ಇಂಧನವಾಗಿ ಬಳಸುವುದರ ಕುರಿತು ಹೆಚ್ಚು ಹೆಚ್ಚಾಗಿ ಕೇಳಿಬರುತ್ತಿದೆ.

ಪ್ರಕೃತಿಯಲ್ಲಿ ಹೇರಳವಾಗಿ ದೊರೆಯುವ ನೀರನ್ನು ಬಳಸಿಕೊಂಡು ಜಲಜನಕವನ್ನು ಉತ್ಪಾದಿಸಬಹುದು. ಜಲಜನಕದ ಉತ್ಪಾದನೆಗೆ ನೀರು ಮೂಲವಸ್ತು. ಇದು ಇಲ್ಲಿ ನೈಜ ಸ್ಥಿತಿಯಲ್ಲಿ ಉಪಯೋಗಕ್ಕೆ ಬಾರದಿದ್ದರೂ ಅದರ ಆವಿ ಈ ಹೊಸ ಇಂಧನದ ಉತ್ಪಾದನೆಗೆ ಸಹಾಯಕವಾಗುವುದು. ಜಲಜನಕವನ್ನು ಇಂಧನವಾಗಿ ಬಳಸುವ ಮುನ್ನ ಅದರ ಸಂಸ್ಕರಣೆಗೆ ಅರ್ಹ ತಂತ್ರಜ್ಞಾನವನ್ನು ಅಭಿವೃದ್ಧಿಪಡಿಸುವುದು ಅಗತ್ಯವಾಗಿದೆ. ಜಲಜನಕವನ್ನು ಕಲ್ಲಿದ್ದಲು, ಕೈಗಾರಿಕಾ ಅನಿಲ, ವಿದ್ಯುತ್ ರಸಾಯನಿಕ ವಿಭಜನೆ (Electrolysis) ಹಾಗೂ ಪರಮಾಣು ರಿಯಾಕ್ಟರು ಮುಂತಾದವುಗಳಿಂದ ಪಡೆಯಬಹುದು. ಸಾಕಷ್ಟು ಪ್ರಮಾಣದಲ್ಲಿ ಈ ಇಂಧನವನ್ನು ಹೇಗೆ ಪಡೆಯಬೇಕೆಂಬ ಸಮಸ್ಯೆ ಮಾತ್ರ ಇನ್ನೂ ಪರಿಹಾರವಾಗಬೇಕಾಗಿದೆ. ವಿದ್ಯುತ್ ರಾಸಾಯನಿಕ ವಿಭಜನೆಯಿಂದ ಆಮ್ಲಜನಕ, ಜಲಜನಕಗಳನ್ನು ಪಡೆಯುವುದು ಒಂದು ವಿಧಾನವಾದರೆ ನೀರನ್ನು ಹೆಚ್ಚು ವೇಗದ ವಿದ್ಯುದ್‌ವಿಸರ್ಜನೆಯನ್ನು ಮಾಡುವ ರಿಯಾಕ್ಟರು ಕೋಣೆಗೆ ಕಡಿಮೆ ಒತ್ತಡದಲ್ಲಿ ಕಳಿಸುವುದು ಇನ್ನೊಂದು ವಿಧಾನ. ಅಲ್ಲಿ ನೀರಿನ ಕಣಗಳು ಎಲೆಕ್ಟ್ರಾನುಗಳನ್ನು ಕಳಚಿಕೊಂಡು ವಿದ್ಯುದ್ವಾಹಿಗಳಾಗಿ ತಮ್ಮ ವಿದ್ಯುತ್ ಕ್ಷೇತ್ರದಿಂದ ವೇಗವನ್ನು ವೃದ್ಧಿಸಿಕೊಂಡು ಒಂದಕ್ಕೊಂದು ಡಿಕ್ಕಿ ಹೊಡೆಯುತ್ತವೆ. ಈ ಡಿಕ್ಕಿಯ ಪರಿಣಾಮವಾಗಿ ಜಲಜನಕ ಮತ್ತು ಆಮ್ಲಜನಕಗಳು ಬೇರೆ ಬೇರೆ ಅಣುಗಳಾಗಿ ಬೇರ್ಪಡುತ್ತವೆ. ಈ ವಿಧಾನವನ್ನು ಬಳಸಿ ಪಡೆವ ಶಕ್ತಿ ಅತ್ಯಾಧುನಿಕ ಯಂತ್ರಗಳನ್ನು ಬಳಸಿ ಪಡೆಯುವುದಕ್ಕಿಂತ ಹತ್ತು ಸಾವಿರ ಪಟ್ಟು ಹೆಚ್ಚಿರುತ್ತದೆ. ಈ ತಂತ್ರಜ್ಞಾನವನ್ನು ಅಭಿವೃದ್ಧಿಪಡಿಸಲು ಪ್ರಯತ್ನಗಳೀಗ ನಡೆಯುತ್ತಿವೆ.

ಜಲಜನಕವನ್ನು ಇಂಧನವಾಗಿ ಪಡೆಯಲು ಮತ್ತೊಂದು ಲಾಭದಾಯಕ ವಿಧಾನಕ್ಕೆ ವಿಜ್ಞಾನಿಗಳು ಕೈಹಾಕಿದ್ದಾರೆ. ಅದೇ ಪ್ಲಾಸ್ಮಾ ರಸಾಯನಿಕ ವಿಧಾನ. ಇದರಲ್ಲಿ ನೀರಿನ ಬದಲಿಗೆ ಕೆಲವು ಕಚ್ಚಾ ಖನಿಜಗಳನ್ನು ಬಳಸಬಹುದು. ಪ್ರಕೃತಿಯಲ್ಲಿ ಹೇರಳವಾಗಿ ಜಲಜನಕದ ಸಲ್ಫೈಡ್ ಮತ್ತು ಕಾರ್ಬನ್ ಮೊನಾಕ್ಸೈಡ್ ದೊರೆಯುತ್ತದೆ. ಮೊದಲು ಕಾರ್ಬನ್ ಮೊನಾಕ್ಸೈಡ್ ಅನ್ನು ವಿಶೇಷ ಯಂತ್ರದ ಮೂಲಕ ಹರಿಸಿದಾಗ ರಾಸಾಯನಿಕ ಕ್ರಿಯೆ ಏರ್ಪಡುತ್ತದೆ. ಈ ಕ್ರಿಯೆಯಲ್ಲಿ ಕಾರ್ಬನ್ ಮೊನಾಕ್ಸೈಡ್ ಆಮ್ಲಜನಕದ ಅಣುವನ್ನು ಆಕರ್ಷಿಸಿ ಇಂಗಾಲಾಮ್ಲವನ್ನು ಉತ್ಪಾದಿಸುತ್ತದೆ. ಹೀಗೆ ಉತ್ಪಾದಿತವಾದ ಇಂಗಾಲಾಮ್ಲವನ್ನು ಪುನಃ ರಿಯಾಕ್ಟರಿನೊಳಗೆ ಕಳುಹಿಸಿದಾಗ ನೀರಿನ ಅಣುವಿನಿಂದ ಜಲಜನಕವು ಬೇರ್ಪಡೆಯಾಗುತ್ತದೆ. ಈ ಜಲಜನಕವನ್ನು ಇಂಧನವಾಗಿ ಉಪಯೋಗಿಸಬಹುದು. ಮೇಲಾಗಿ ತಯಾರಿಕೆಯ ವೆಚ್ಚ ದುಬಾರಿಯಲ್ಲ.

ಭಾರತವೂ ಸೇರಿದಂತೆ ಜಗತ್ತಿನ ಅನೇಕ ರಾಷ್ಟ್ರಗಳು ಜಲಜನಕವನ್ನು ಇಂಧನವನ್ನಾಗಿ ಬಳಸುವ ದಿಕ್ಕಿನಲ್ಲಿ ಆಶಾಭಾವನೆಯನ್ನು ಹೊಂದಿದ್ದು, ಮುಂದಿನ ಶತಮಾನದಲ್ಲಿ ಈ ರಾಷ್ಟ್ರಗಳು ಇಂಧನಕ್ಕಾಗಿ ಜಲಜನಕವನ್ನೇ ಅವಲಂಬಿಸಿದರೆ ಆಶ್ಚರ್ಯವಿಲ್ಲ. ಪೆಟ್ರೋಲ್ ಅಥವಾ ದ್ರವೀಕೃತ ಪೆಟ್ರೋಲ್ ಅನಿಲಕ್ಕಿಂತಲೂ ಮೂರುಪಟ್ಟು ಹೆಚ್ಚು ತಾಪವನ್ನು ಇದು ಹೊರಗೆಡಹುತ್ತದೆ. ವಿದ್ಯುತ್ತನ್ನು ಶೇಖರಿಸಿಡುವಂತೆಯೇ ಇದನ್ನು ದ್ರವರೂಪದಲ್ಲಾಗಲಿ ಅನಿಲರೂಪದಲ್ಲಾಗಲಿ ಶೇಖರಿಸಿಡಬಹುದು.

ಈ ಸ್ಫೋಟಕ ಅನಿಲವನ್ನು 1953ರಲ್ಲಿ ಬಲೂನುಗಳಲ್ಲಿ ಬಳಸಿ ಕೈಸುಟ್ಟುಕೊಂಡ ವಿಜ್ಞಾನಿಗಳು ಅದನ್ನು ಹೇಗೆ ಶೇಖರಿಸುವುದೆನ್ನುವುದು ಗೊತ್ತಿರದ್ದರಿಂದ ಅಲ್ಲಿಗೇ ಕೈ






ಬಿಟ್ಟರು. ಆದರೆ ತುಂಬ ಅಗ್ಗವೂ, ಅಪಾರ ಶಕ್ತಿಯ ಆಕರವೂ, ಕಲ್ಮಶ ರಹಿತವೂ ಆದ ಈ ಇಂಧನ ಇತರ ವಿಧಾನಗಳಿಗಿಂತ - ಅಂದರೆ ಗಾಳಿ, ಸೌರಶಕ್ತಿ, ಸಾಗರದ ಅಲೆಗಳನ್ನು ನಿಯಂತ್ರಿಸಿ ಪಡೆವ ಶಕ್ತಿಗಿಂತ-ತುಂಬಾ ಸರಳವಾದ್ದರಿಂದ ಸಹಜವಾಗಿಯೆ ವಿಜ್ಞಾನಿಗಳ ದೃಷ್ಟಿ ಈ ಕಡೆ ಹರಿದಿದೆ. 1969ರಲ್ಲಿ ಅಮೆರಿಕದ ಇಂಜಿನಿಯರನೊಬ್ಬ ಜಲಜನಕ ಬಳಸಿ ಒಂದು ಇಂಜಿನ್ನು ಹೆಚ್ಚು ಪರಿಣಾಮಕರವಾಗಿ ಕೆಲಸ ನಿರ್ವಹಿಸಿದುದನ್ನು ಪ್ರದರ್ಶಿಸಿದ. ಅದೇ ರೀತಿ ಆಸ್ಟ್ರೇಲಿಯದ ಇಂಜಿನಿಯರನೊಬ್ಬ ಜಲಜನಕ ಬಳಸಿದ ಕಾರಿನ ಇಂಜಿನ್, ಬ್ಯಾಟರೀ ಚಾಲಿತ ಕಾರಿಗಿಂತ ಹೆಚ್ಚು ಉಳಿತಾಯ ಮಾಡಿದುದನ್ನು ಸಾಬೀತುಪಡಿಸಿದ.

ಜಲಜನಕವನ್ನು ಸಾರಿಗೆ ಇಂಧನವಾಗಿ ಬಳಸುವ ನಿಟ್ಟಿನಲ್ಲಿ ಇಂದು ಜಪಾನ್, ಅಮೇರಿಕ, ರಶಿಯ ಹಾಗೂ ಪಶ್ಚಿಮ ಜರ್ಮನಿಗಳು ಪ್ರಯತ್ನಶೀಲವಾಗಿವೆ. ರಶಿಯದಲ್ಲಿ ಈಗಾಗಲೇ ಅನೇಕ ಕಾರುಗಳಲ್ಲಿ ಜಲಜನಕವನ್ನು ಬಳಸಲಾಗುತ್ತಿದೆ. ದ್ರವಜಲಜನಕವನ್ನು ಬಳಸಿ ಮೂರು ಸಾವಿರ ಕಿಲೋಮೀಟರ್‌ವರೆಗೆ ಚಲಿಸಿದರೂ ರಿಪೇರಿಗೆ ಬಾರದಿರುವಂತಹ ಕಾರುಗಳನ್ನು ಜಪಾನಿನ ಮುಸಾಸಿ ತಾಂತ್ರಿಕ ಕೇಂದ್ರ ಅಭಿವೃದ್ಧಿಪಡಿಸಿದೆ. ಪೆಟ್ರೋಲ್ ಕಾರಿಗಿಂತ ಜಲಜನಕದ ಕಾರುಗಳು ಶೇಕಡಾ 25ರಷ್ಟು ಮಿತವ್ಯಯಕರವೆಂದು ಜಪಾನಿನ ಸುಜುಕಿ ಮೋಟಾರ್ ಕಂಪನಿ ಹೇಳುತ್ತದೆ.

ದ್ರವಜಲಜನಕವನ್ನು ಸಂಗ್ರಹಿಸುವ ತಾಂತ್ರಿಕತೆ ಅಭಿವೃದ್ಧಿಗೊಂಡಂತೆಲ್ಲ ಜಲಜನಕದ ಇಂಧನವನ್ನು ವಾಹನಗಳಲ್ಲಿ ಬಳಸುವ ಸಾಧ್ಯತೆ ಹೆಚ್ಚಾಗುತ್ತದೆ. ತೀರಾ ಹಗುರವಾದ ಈ ಜಲಜನಕ ಅನಿಲವನ್ನು ಸ್ಟೀಲ್ ಸಿಲಿಂಡರುಗಳಲ್ಲಿ ಸಂಗ್ರಹಿಸಬಹುದು. ಆದರೆ ಇದು ಸ್ವಲ್ಪ ತೊಡಕಿನ ವಿಧಾನವೇ. ಇದರ ಸಂಗ್ರಹಕ್ಕೆ ಬೃಹತ್ ಗಾತ್ರದ ಟ್ಯಾಂಕುಗಳು ಅವಶ್ಯವಿದ್ದು ಮೂಗಿಗಿಂತ ಮೂಗುತಿ ಭಾರವೆಂಬ ಪರಿಸ್ಥಿತಿ ನಿರ್ಮಾಣವಾಗಬಹುದು. ಆದರೆ ಜಲಜನಕದ ಅನಿಲವನ್ನು ದ್ರವೀಕರಿಸುವ ಮೂಲಕ ಈ ಸಮಸ್ಯೆಯನ್ನು ನಿವಾರಿಸಬಹುದು. ಈಗಾಗಲೆ ಜಲಜನಕದ ಟ್ಯಾಂಕುಗಳನ್ನು ಅಳವಡಿಸಿದ ಕಾರುಗಳು ಅಮೇರಿಕದಲ್ಲಿ ಬಳಕೆಗೆ ಬರುತ್ತಿವೆ. ಅಮೇರಿಕದ ಮಾದರಿಯಲ್ಲೇ ಫ್ರಾನ್ಸ್ ಮತ್ತು ಪಶ್ಚಿಮ ಜರ್ಮನಿ ಪ್ರಯತ್ನಶೀಲವಾಗಿವೆ. ಆದರೆ ಈ ಎಲ್ಲ ರಾಷ್ಟ್ರಗಳನ್ನೂ ಮೀರಿಸಿದ ತಾಂತ್ರಿಕತೆಯನ್ನು ಜಪಾನು ಕೈವಶ ಮಾಡಿಕೊಂಡಿದೆ. ಈ ತಾಂತ್ರಿಕ ವಿಧಾನವೇ 'ಮೆಟಾಲಿಕ್ ಹೈಡ್ರೈಡ್'. ಈ ವಿಧಾನದಲ್ಲಿ ಬಳಸಲ್ಪಡುವ ನಿಕ್ಕಲ್, ಟೆಲ್ಲೂರಿಯಮ್ ಮತ್ತು ಟೆಂಟುಲಮ್‌ಗಳ ಮಿಶ್ರಣವು ಜಲಜನಕವನ್ನು ಹೀರಿಕೊಳ್ಳುವುದು. ಈ ಮಿಶ್ರಣವನ್ನು ಸ್ವಲ್ಪ ಕಾಯಿಸಿದ ಮೇಲೆ ಜಲಜನಕ ಹೊರಬರುತ್ತದೆ. ಅಮೆರಿಕದ ಬಿಇಸಿ, ಫ್ರಾನ್ಸ್‌ನ ಜಿಇಎನ್ ಕಾರ್ಪೊರೇಷನ್, ಪಶ್ಚಿಮ ಜರ್ಮನಿಯ ಡೈಮ್ಲರ್-ಬೆಂಜ್ ಕಂಪನಿಗಳು ತಯಾರಿಸುತ್ತಿರುವ ಕಾರುಗಳಲ್ಲಿ ಈ ವಿಧಾನ

ವನ್ನು ಅಳವಡಿಸಲಾಗುತ್ತಿದೆ. ಜಪಾನು ಈಗ ಮೆಟಾಲಿಕ್ ಹೈಡ್ರೈಡಿನ ಇನ್ನೂ ಸುಧಾರಿತ ವಿಧಾನವನ್ನು ಕಂಡುಹಿಡಿದಿದ್ದು ಅದನ್ನು ತುಂಬಾ ಗೌಪ್ಯವಾಗಿ ಇಟ್ಟಿದೆ. ಹೈಡ್ರೈಡ್ ಸವರಿದ ಒಂದು ತೆಳ್ಳನೆಯ ಬೆಲ್ಟನ್ನು ಸ್ಕೂಟರ್ ಸವಾರನ ಕಾಲಿನಡಿಯಲ್ಲಿ ಇಟ್ಟುಕೊಂಡು 200ರಿಂದ 300 ಕಿಲೋಮೀಟರಿನವರೆಗೆ ಪಯಣಿಸಬಹುದು. ವಿಜ್ಞಾನರಂಗಕ್ಕೆ ಇದೊಂದು ಜಪಾನಿನ ಶ್ರೇಷ್ಠ ಕೊಡುಗೆ. ಅಲ್ಲದೆ ಆ ದೇಶ ದ್ರವಜಲಜನಕವನ್ನು ಇಂಧನವಾಗಿ ಬಳಸಿ ಅತಿವೇಗದಲ್ಲಿ ಚಲಿಸುವ ರೈಲನ್ನೂ ಈಗ ವಿನ್ಯಾಸಗೊಳಿಸಿದೆ.

ಭಾರತ ಈ ನಿಟ್ಟಿನಲ್ಲಿ ಕೈಕಟ್ಟಿ ಕುಳಿತಿಲ್ಲ. ದಿಲ್ಲಿಯಲ್ಲಿರುವ ಐ.ಐ.ಟಿ.ಯ ಪ್ರೊ. ಎಚ್. ಮಾಥುರ್ ಅವರು ಮೆಟಾಲಿಕ್ ಹೈಡ್ರೈಡ್ ಮೇಲೆ ಪ್ರಯೋಗಗಳನ್ನು ನಡೆಸಿದ್ದಾರೆ. ಇವರು ಈ ಹಿಂದೆ ಮದ್ಯಾರ್ಕದಿಂದ ಓಡಬಹುದಾದ ಸ್ಕೂಟರ್ ರಚನೆಗೆ ಕೈ ಹಾಕಿದ್ದವರು ಹಾಗೂ ಪೆಟ್ರೋಲ್ ಇಂಜಿನ್ ಒಂದನ್ನು ಜಲಜನಕದ ಇಂಜಿನ್ನಿಗೆ ಪರಿವರ್ತಿಸಿ ಅದು 600 ಗಂಟೆಗಳವರೆಗೆ ಯಾವುದೇ ತೊಂದರೆ ಇಲ್ಲದಂತೆ ಚಲಿಸುವಂತೆ ಮಾಡಿದವರು. ಭಾರತದ ಹಲವಾರು ವಿಜ್ಞಾನಿಗಳು, ವಿಶ್ವವಿದ್ಯಾನಿಲಯಗಳು ಜಲಜನಕದಿಂದ ವಿದ್ಯುತ್ತನ್ನು ಗಳಿಸುವ ಬಗ್ಗೆ ಪ್ರಯತ್ನಶೀಲರಾಗಿದ್ದಾರೆ. ಈ ಸಾಂಪ್ರದಾಯಿಕವಲ್ಲದ ಶಕ್ತಿಯ ಮೂಲದ ಬಗ್ಗೆ ಅನೇಕ ವಿಶ್ವವಿದ್ಯಾಲಯಗಳು ಹೆಚ್ಚು ಒತ್ತನ್ನು ನೀಡುತ್ತಿವೆ. ಕಾರ್ಖಾನೆ ಮತ್ತು ಪ್ರಯೋಗಾಲಯಗಳಲ್ಲಿ ಜಲಜನಕದ ಬಳಕೆಯಾಗುತ್ತಿದೆ. ನಮ್ಮ ದೇಶದಲ್ಲಿ ಸುಮಾರು 39 ಕಾಸ್ಟಿಕ್ ಸೋಡಾ ಘಟಕಗಳು ವರ್ಷಕ್ಕೆ 65 ಲಕ್ಷ ಘನ ಮೀಟರುಗಳಷ್ಟು ಜಲಜನಕವನ್ನು ಉಪೋತ್ಪನ್ನವಾಗಿ ತಯಾರಿಸುತ್ತಿವೆ. ಮುಂದುವರಿದ ದೇಶಗಳಿಗೆ ಹೋಲಿಸಿದರೆ ನಮ್ಮಲ್ಲಿ ಜಲಜನಕದ ಉತ್ಪಾದನೆ ತೀರಾ ಕಡಿಮೆ.

ಉತ್ಪಾದನೆ ಕಡಿಮೆಯಾದರೂ ಪರವಾ ಇಲ್ಲ, ಆದರೆ ಅದನ್ನು ಪರಿಣಾಮಕರವಾಗಿ ಬದಲಿ ಇಂಧನವಾಗಿ ಬಳಸುವತ್ತ ನಮ್ಮ ವಿಜ್ಞಾನಿಗಳು ಇನ್ನಷ್ಟು ಕ್ರಿಯಾಶೀಲರಾದರೆ ಮುಂದೊಂದು ದಿನ ದೇಶದ ದೈವದ ಬಾಗಿಲು ತೆರೆಯಲೂಬಹುದು. ●






# ಅಸ್ಥಿರತೆ

'ಪ್ರಭಾ'

ಆತ ತುಂಬಾ ಬಡವ. ಬಡವನಾದರೂ ಆತ್ಮಾಭಿಮಾನಕ್ಕೇ ಎಂದೂ ಕೊರತೆ ತಂದು ಕೊಳ್ಳದಿದ್ದವನು. ಬಡವನಾಗಿದ್ದರಿಂದಲೇ ಕೈ ಹಿಡಿದು ಕಾಸು ಬಳಸಿ ಕಾಸು ಕಾಸಿಗೂ ಲೆಕ್ಕ ಇಡುತ್ತಿದ್ದ. ಆತನಿಗೆ ಇಬ್ಬರು ಮಕ್ಕಳು. ಮಕ್ಕಳನ್ನು ಚೆನ್ನಾಗಿ ಓದಿಸಬೇಕು, ವಿದ್ಯೆಬುದ್ಧಿ ಇಲ್ಲದೇ ಹಾಳಾದೆವು ಅಂತ ಅವರೆಂದೂ ಕೊರಗಬಾರದು ಎಂದು ಕಷ್ಟಪಟ್ಟು ಕಾಸಿಗೆ ಕಾಸು ಸೇರಿಸಿ ಅವರಿಗೆ ಒಳ್ಳೇ ವಿದ್ಯಾಭ್ಯಾಸ ನೀಡಿದ. ಇದರಿಂದಾಗಿ ಅವರಿಗೆ ಒಳ್ಳೆಯ ಹುದ್ದೆಗಳೇ ಸಿಕ್ಕವು.

ಮಕ್ಕಳಿಗೆ ಮದುವೆ ಆಯಿತು, ಬೇರೆ ಬೇರೆ ಊರಿನಲ್ಲಿ ಅವರಿಬ್ಬರಿಗೂ ಕೆಲಸ. ಮನೆ ಮಠ ಮಾಡಿಕೊಂಡರು. ಇತ್ತ ಈತನಿಗೂ ಈತನ ಹೆಂಡತಿಗೂ ವಯಸ್ಸಾಯಿತು. 'ವಯಸ್ಸಾದ ನಂತರ ಆಸರೆಗೆ ಎಂದೇ ತಂದೆತಾಯಿಗಳು ಮಕ್ಕಳನ್ನು ಬೆಳೆಸುವುದು? ನೀವು ಯಾಕೆ ಹೋಗಿ ನಿಮ್ಮ ಮಕ್ಕಳ ಮನೆಯಲ್ಲಿ ಇರಬಾರದು? ಅವರಿಗೆ ಏತಕ್ಕೆ ಕಡಿಮೆ ಆಗಿದೆ?' ಎಂದು ಸುತ್ತ ಮುತ್ತಲಿನ ಜನ ಈತನನ್ನು ಹುರಿದುಂಬಿಸಿದರು. 'ಈ ಜನ ಹೇಳುವುದು ಸರಿ' ಎಂದು ಮುದುಕ-ಮುದುಕಿ ಮೊದಲು ಹಿರಿಯ ಮಗನ ಮನೆಗೆ ಹೊರಟರು. ಆತನ ಮನೆ ತಲುಪಿದ್ದಾಯಿತು. ಮಗ-ಸೊಸೆ ಆದರದಿಂದ ಬರಮಾಡಿಕೊಂಡು, 'ನೀವು ಇಲ್ಲೇ ಇರಿ; ಎಂದು ಒತ್ತಾಯಿಸಿದರು. ಹಾಗೇ ಮಾಡಲು ತಾವು ಅಲ್ಲಿಗೆ ಬಂದಿದ್ದಾಗಿ ಮುದುಕ-ಮುದುಕಿ ಹೇಳಿದರು. ಮಗ-ಸೊಸೆಗೆ ಸ್ನೇಹಿತರು ಜಾಸ್ತಿ. ಅವರು ಬಂದಾಗ ಜಾಗ ಸಾಲದೆಂದು ಈ ವೃದ್ಧ ದಂಪತಿಗಳು ಅಡಿಗೆ ಮನೆಯಲ್ಲೋ ಹಿತ್ತಲಿನಲ್ಲೋ ಅಡಗಿಕೊಳ್ಳುತ್ತಿದ್ದರು. ಸ್ನೇಹಿತರು ಹೋದ ನಂತರ ಮನೆ ಒಳಗೆ ಬರುತ್ತಿದ್ದರು. ಒಂದೆರಡು ಸಲ ಹೀಗೆ ನಡೆದ ನಂತರ ಮಗನಿಗೆ ಬೇಸರ ಆಯಿತು. 'ಸ್ವಲ್ಪ ದಿವಸ ತಮ್ಮನ ಮನೇಲಿ ಇರಿ' ಅಂತ ಹಿರಿಯ ಮಗ ಅವರನ್ನು ತಮ್ಮನ ಮನೆಗೆ ಸಾಗ

ಹಾಕಿದ.

ತಮ್ಮನ ಮನೇಲೂ ಇದೇ ನಾಟಕ ಮತ್ತೆ ಮತ್ತೆ ನಡೆಯಿತು. 'ನಾವು ಹಾಯಾಗಿರುವ ಕಾಲದಲ್ಲಿ ಈ ಮುದುಕರನ್ನು ಹೇಗ್ರೀ ನೋಡಿ ಕೊಳ್ಳೋದು? ನಿಮ್ಮಣ್ಣ ಹಾಯಾಗಿರ್‍ತಾನೆ. ಆತಂಗೂ ಜವಾಬ್ದಾರಿ ಬೇಡವೇ? ಬೇಕಾದರೆ ಇಬ್ಬರೂ ನೋಡಿಕೊಳ್ಳೋಣ,' ನಮಗೊಬ್ಬ ರಿಗೇ ಏಕೆ ಜವಾಬ್ದಾರಿ?... ಅಂತ ಚಿಕ್ಕ ಮಗನ ಹೆಂಡತಿ ಈ ಅತ್ತೆ-ಮಾವರಿಗೆ ಕೇಳಿಸುವಂತೆಯೇ ಗೊಣಗಿದಳು. ಮಗ ಅಪ್ಪನ ಹತ್ತಿರ ಬಂದು, 'ಅಪ್ಪ, ನೀನೋ ಅಮ್ಮನೋ ಇಲ್ಲಿರಿ. ಮತ್ತೊಬ್ಬರು ಅಣ್ಣನ ಮನೇಲಿರ್‍ಲಿ,' ಅಂದ.

ವಯಸ್ಸಾದ ತಂದೆಗೆ ಕೋಪ ಬಂದರೂ ಆಡುವ ಹಾಗಿಲ್ಲ, ಆಡದೇ ಇರುವ ಹಾಗಿಲ್ಲ! ಹೆಂಡತಿಯ ಕಡೆ ದೃಷ್ಟಿ ಹಾಯಿಸಿದ. ಆಕೆ ತಲೆ ತಗ್ಗಿಸಿ ಕೂತಿದ್ದಳು. 'ಆಗಲಪ್ಪ, ನಾಳೆ ಹೇಳ್ತೀವಿ ಯಾರು ಅಲ್ಲಿಗೆ ಹೋಗೋದು ಅಂತ..' ತಂದೆ ಹೇಳಿದ.

ಬೆಳಿಗ್ಗೆ ಆಗೋ ಹೊತ್ತಿಗೆ ವಯಸ್ಸಾದ ಅಪ್ಪ-ಅಮ್ಮ ಇಬ್ಬರೂ ಮನೆಯಿಂದ ಕಾಣೆಯಾಗಿದ್ದರು! ತಮ್ಮ ಗಾಬರಿಯಿಂದ ಅಣ್ಣನ ಮನೆಗೆ ಓಡಿದ. ಅಲ್ಲಿಗೂ ಅವರು ಬಂದಿರಲಿಲ್ಲ. ಅವರು ಎಲ್ಲಾದರೂ ಹೋಗಿ ತಮ್ಮ ಮೇಲೆ (ಅಪ)ಪ್ರಚಾರ ಮಾಡಿದರೆ ತಮ್ಮ ಮರ್ಯಾದೆ ಹೋಗುತ್ತೆ, ಜೊತೆಗೆ ತೇಜೋವಧೆ ಆಗುತ್ತೆ. ಇದು ತಪ್ಪಿಸೋಕ್ಕೆ ಏನು ಮಾಡೋದು? ಅಂತ ಅಣ್ಣ-ತಮ್ಮ ಚಿಂತಿಸಿದರು. ಅಣ್ಣನ ತಲೆಗೆ ಐಡಿಯಾ ಹೊಳೆಯಿತು..

ಎರಡು ದಿನದ ನಂತರ ಪತ್ರಿಕೆಯಲ್ಲಿ ಒಂದು ಜಾಹೀರಾತು ಬಂತು. ವಯಸ್ಸಾದ ಮುದುಕ-ಮುದುಕಿಯ ಫೋಟೋದ ಕೆಳಗೆ, 'ತಲೆ ಸ್ಥಿಮಿತದಲ್ಲಿಲ್ಲದ ಮೇಲಿನ ಫೋಟೋದಲ್ಲಿನ ಗಂಡ ಹೆಂಡತಿ ಆರು ದಿನದಿಂದ ಕಾಣೆಯಾಗಿದ್ದಾರೆ. ಕಂಡವರು ತಿಳಿಸಿ. ಸೂಕ್ತ ಬಹುಮಾನ ಉಂಟು...'

ನಾಲ್ಕೈದು ದಿನದ ನಂತರ ಅಣ್ಣ-ತಮ್ಮಂದಿರಿಗೆ ಒಂದು ಪತ್ರ ಬಂತು: ''ಅಪ್ಪಾ, ನಿಮ್ಮ ಜಾಹೀರಾತು ನೋಡಿದೆವು. ತಲೆ ಸ್ಥಿಮಿತದಲ್ಲಿ ಇದ್ದದ್ದರಿಂದಲೇ ಕೈಯಲ್ಲಿ ಆದಷ್ಟು ಕಾಸು ಕೂಡಿಸಿದ್ದು. ಈಗ ವೃದ್ಧಾಶ್ರಮದಲ್ಲಿ ಇಬ್ಬರೂ ಸಾವು ಎದುರು ನೋಡ್ತಾ ಇದೀವಿ. ನಮ್ಮನ್ನು ದಯವಿಟ್ಟು ಹುಡುಕಿಸಬೇಡಿ. ದೇವರು ನಿಮ್ಮನ್ನು ಚೆನ್ನಾಗಿಡಲಿ - ಇಂತು ನಿಮ್ಮ ತಂದೆ ತಾಯಿ,''



# ವೃದ್ಧಾಶ್ರಮ

ಹುಳು ಹೊಡೆದು
ಮುಪ್ಪಡರಿ ನಿಂತ ಆಲಗಳು!
ಬಲವಾಗಿ ಊರಲಾಗದೆ ಕಾಲ
ಬದುಕ ಸಂಜೆಯಲಿ ಬಾಗಿ
ಕಳಕೊಂಡ ಪಡಕೊಂಡ ಅನುಭವಗಳ
ಬಿಡಿಕ್ಷಣಗಳಿಗೆ ಲಕ್ಷಣ ನಿರೂಪಿಸಿದ
ಗಳಿಗೆಗಳ ಎಣಿಕೆ ಹಾಕುತ್ತ
ಮರೆಯಲೆತ್ನಿಸಿದಷ್ಟೂ ಮರುಕಳಿಸುವ
ನೂರಾರು ನೆನಪುಗಳ ತುಂಬಿ
ಮಬ್ಬುಕಂಗಳಲಿ
ಕೊನೆಯ ಪಯಣಕೆ ಸನ್ನದ್ಧರಾಗಿ
ಸಾವಿನಾ ನಿರೀಕ್ಷೆಯಲಿ ನಿಂತವರು
ಸೋತ ಬದುಕಿನ ಸಂಕೇತಗಳು!

ಜೀವನಕ್ಕೆ ದೂರ
ಗೋರಿಗೆ ಹತ್ತಿರವಾದವರ ಕಂಡಾಗ
ಬದುಕಲಿ ಉಸಿರು ತುಂಬಿದವರು
ಉಸಿರಡಗಿ ಬರಿದೇ
ನೆನಪಾಗಿ ಉಳಿವ
ಆಧರಿಸಿ ಹಿಡಿದ ಆತ್ಮೀಯತೆಯ
ಎಳೆಗಳು ಹರಿದು ಚಿಂದಿಯಾಗುವ
ಖಿನ್ನತೆಯ ಭಾವದಲಿ
ಮಿಥ್ಯ ಬದುಕಿನ ವಾಸ್ತವಿಕ
ಪ್ರಜ್ಞೆಯಲಿ ಕವಲೊಡೆಯುವ
ನೋವಿನಲಿ ನರಳುತ್ತವೆ
ಭ್ರಮೆ ಕಳಚಿದಾಮನದ
ಭಾವನೆಗಳು!

— ಸುವರ್ಣ ಚಂದ್ರಶೇಖರ್

ಕೀನ್ಯಾ ದೇಶದ ಕಥೆ

# ಬಲಿಪಶು

ಬುಡಕಟ್ಟಿನ ಗುರಿಕಾರ ತನ್ನ ಮನೆಯ ಬಾಗಿಲಿನಿಂದ ಇನ್ನೂ ದೂರವೇ ಇದ್ದ. ಅಷ್ಟರಲ್ಲಿ ಅವನ ಮಗಳು ಓಗಾಂಡಾ ಅವನತ್ತ ಓಡಿ ಬಂದಿದ್ದಳು. ಸಮೀಪಿಸುತ್ತಿದ್ದಂತೆ ಏದುಸಿರು ಬಿಡುತ್ತಾ ಕೇಳಿದಳು- ''ಅಪ್ಪಾ ಅಪ್ಪಾ... ಏನು ಸಮಾಚಾರ....? ಮಳೆ ಯಾವಾಗ ಬರುತ್ತೆ...? ಹಳ್ಳಿಗರೆಲ್ಲಾ ಇದನ್ನು ತಿಳಿಯಲು ಕಾತರದಿಂದ ಕಾಯುತ್ತಿದ್ದಾರೆ.ಹೇಳಪ್ಪಾ. ಯಾವಾಗ ಬರುತ್ತೆ ಮಳೆ?''

ಗುರಿಕಾರ ಲಾಜೋಂಗೊ ತನ್ನ ಮಗಳ ಕೈಯನ್ನು ಹಿಡಿದುಕೊಂಡ ಅಷ್ಟೆ, ಬಾಯಿಂದ ಮಾತು ಹೊರಬರಲಿಲ್ಲ. ಮಗಳ ತಲೆ ನೇವರಿಸುತ್ತಲೇ ಮನೆಯತ್ತ ಹೆಜ್ಜೆ ಹಾಕಿದ. ಸರದಾರ ಊರಿಗೆ ಬಂದ ಸುದ್ದಿ ಆಗಲೇ ಎಲ್ಲರಿಗೆ ತಿಳಿದಿತ್ತು.

ಹಳ್ಳಿಯಲ್ಲಿ ಎಲ್ಲೆಲ್ಲೂ ಚಿಂತೆ ಆವರಿಸಿಕೊಂಡಿತ್ತು. ಈ ಬಾರಿ ಹಿಂದೆಂದೂ ಕಾಣದ ಭೀಕರ ಬರಗಾಲ. ಹನಿ ಮಳೆಗಾಗಿ ಕಾತರಿಸಿ ಮುಗಿಲು ನೋಡುವುದೇ ಅನುದಿನದ ಕೆಲಸವಾಗಿತ್ತು ಆ ಊರಿನವರಿಗೆ. ಯಾವಾಗ ಮಳೆ

ಮೂಲ: ಗ್ರೇಸ್ ಆಗ್ರೋವ್
ಅನುವಾದ: ಶೇಖರ್ ಕತ್ತಿಗೆ

ಬಂದೀತು? ತಮ್ಮ ಗುರಿಕಾರನನ್ನು ಕೇಳು
ದ್ದುದು ಇಷ್ಟೇ. ''ಕೊಟ್ಟಿಗೆಯಲ್ಲಿ ಕಟ್ಟಿರು
ನಮ್ಮ ಜಾನುವಾರುಗಳು ಕೊನೆಯುಸಿರ
ಯುತ್ತಿವೆ, ಮುಂದಿನ ಸರದಿ ನಮ್ಮ ಮ
ಳದ್ದು. ನಂತರ ನಾವೆಲ್ಲರೂ ಸಾಯುವ ಕಾ
ಬಂದಂತಿದೆ. • ಹೇಳಪ್ಪ ಯಜಮಾ
ನಾವೇನು ಮಾಡಬೇಕು ನಾವು ಪ್ರಾಣ ಉ
ಕೊಳ್ಳುವ ಉಪಾಯ ಏನು. ಬೇಗ ಹೇಳು.

ಗುರಿಕಾರ ಏನು ತಾನೇ ಹೇಳಿಯಾನು?

ಲಾಜೋಂಗೊ ನಿತ್ಯವೂ ದೇವರನ
ಪ್ರಾರ್ಥಿಸುತ್ತಿದ್ದ. ಆದರೆ ಆ ಕರುಣಾಳುವಿ
ಹಸಿವೆಯಿಂದ ಚಡಪಡಿಸುತ್ತಿರುವ ಈ ಅಪ
ಯಕರ ಮೇಲೆ ಕರುಣೆ ಬಂದಿರಲಿಲ್ಲ. ಒಂದ
ಒಂದು ಹನಿ ಮಳೆಯೂ ಬಂದಿರಲಿಲ್ಲ.

ಈ ಹೊತ್ತು ಅವನು ಮಾಂತ್ರಿಕರ ಬ
ಸಲಹೆ ಕೇಳಲು ಹೋಗಿದ್ದ. ಅಲ್ಲಿಂದ ಹಿ
ರುಗಿದವನು ತನ್ನ ಮನೆಯುವರನ್ನು ಭೇ
ಯಾಗಲಿಲ್ಲ. ಹೆಂಡತಿ ಮಕ್ಕಳೊಂದಿಗೆ ಮಾ
ಡಲಿಲ್ಲ. ನೇರವಾಗಿ ತನ್ನ ಗುಡಿಸಿಲಿಗೆ ಹೋ
ಕದ ಹಾಕಿಕೊಂಡು ಕುಳಿತು ಬಿಟ್ಟಿದ್ದ.

ಅವನು ಮಾಂತ್ರಿಕರಲ್ಲಿಂದ ಹಿಂದಿರು
ದಾಗ ಮಗಳು ಓಗಾಂಡಾ ಎದುರಾಗಿದ್ದಳ
ಅವಳ ಎಡಕಿವಿಯಲ್ಲಿ ಚಿನ್ನದ ಉಂಗು
ಇತ್ತು. ಸೊಂಟದಲ್ಲಿ ಹಳದಿ ಬಗ್ಗಿದ ಡಾ

ಗೋಳಿಸುತ್ತಿತ್ತು: 'ಅಯ್ಯೋ ದೇವರೇ, ಗಾದರೆ ಈಗ ಓಗಾಂಡಾ ಸಾಯಲೇ ಕೇ? ತನ್ನ ಬುಡಕಟ್ಟಿನ ಜನರನ್ನು ವಂತ ಉಳಿಸಲು, ಬರಗಾಲ ಕೊನೆಗಾ ಲು, ಮಳೆ ಸತತ ಸುರಿಯಲು ಮಗಳು ಾಂಡಾ ಬಲಿಯಾಗಲೇಬೇಕೆ.....?'

ತಾನು 'ಲೂ ಓ' ಬುಡಕಟ್ಟಿನ ಸರದಾರ ಗುವುದನ್ನು ಕೆಲವು ಕ್ಷಣ ಮರೆತುಬಿಟ್ಟ. ಗವನ ಆತ್ಮ ವಿಲಿವಿಲಿ ಒದ್ದಾಡುತ್ತಿತ್ತು. ತ್ತಲ್ಮ ತಳಮಳಗೊಳ್ಳುತ್ತಿತ್ತು. 'ಇಲ್ಲಿ ಷ್ಟೊಂದು ಮನೆಗಳಿವೆ. ಅನೇಕ ಹುಡುಗಿ ರಿದ್ದಾರೆ. ಇಷ್ಟಾಗಿಯೂ ಹಿರಿಯರು ನನ್ನ ಗಳನ್ನೇ ಬಲಿಯಾಗಿ ಏಕೆ ಆರಿಸಿದರು? ಕ್ಕೆ ಮಗಳ ಬಲಿಯಾಗದೇ ಪಿತೃಗಳ ಆತ್ಮಕ್ಕೆ ಂತಿ ಸಿಗುವುದಿಲ್ಲವೇ? ಪಾಪ, ನನ್ನ ಪ್ರಾಣ ಮಗಳು....'

ಗುರಿಕಾರನ ಕಣ್ಣೀರು ಕೋಡಿಯಾಗಿ ಹರಿ ಯುತ್ತಿತ್ತು. ಬುಡಕಟ್ಟಿನ ಸರದಾರನಾದಾಗ ಜೋಂಗೊ ಪ್ರತಿಜ್ಞೆ ಮಾಡಿದ್ದ. "ನನ್ನ ನರನ್ನು ಕಾಪಾಡಲು ನನ್ನ ಹಾಗೂ ನನ್ನ ರಿವಾರದ ಪ್ರಾಣವನ್ನು ಬಲಿಕೊಡಲು ಸದಾ ದ್ಧನಿದ್ದೇನೆ...." ಅದನ್ನು ನೆನಪಿಸಲೆಂದೇ ರಬೇಕು.... ಹಿರಿಯರು ಈ ಸಂದರ್ಭ ನ್ನು ಸೃಷ್ಟಿಸಿರುವುದು!

ತಾರುಣ್ಯದಲ್ಲಿಯೇ ಇವನಿಗೆ ಗುರಿಕಾರನಿಗೆ ಟ್ಟಿ ಸಿಕ್ಕಿತ್ತು. ಆಗ ಅವನಿಗೆ ಒಬ್ಬಳೇ ಂಡತಿ. ಸುಖವಾಗಿ ಸಂಸಾರ ನಡೆಸಿದ್ದ. ರ್ಷಗಳು ಗತಿಸಿದವು. ಆದರೆ ಅವನಿಗೆ ಣ್ಣುಮಕ್ಕಳೇ ಹುಟ್ಟಲಿಲ್ಲ, ಜನರ ಪಿಸು ಮಾತುಗಳು ಕಿವಿಗೆ ಬೀಳಲಾರಂಭಿಸಿದವು. ದರಿಂದ ಅವನು ಎರಡನೆ ಮದುವೆ ಮಾಡಿ ಂಡ. ಮೂರನೆಯವಳನ್ನು ವರಿಸಿದ, ಲ್ಕನೆಯವಳನ್ನೂ ಮದುವೆಯಾದ. ಎಲ್ಲ ಬಲೂ ಗಂಡು ಮಕ್ಕಳು ಹುಟ್ಟಿಯೇ ಟ್ಟಿದರು. ಯಾರೂ ಹೆಣ್ಣು ಹೆರಲೇ ಇಲ್ಲ!

ಬೇಸರ ಪಟ್ಟುಕೊಂಡ ಲಾಜೋಂಗೊ ಕೊನೆಯ ಪ್ರಯತ್ನವೆಂಬಂತೆ ಮತ್ತೊಂದು ಮದುವೆಯಾದ. ಈ ಐದನೆಯ ಹೆಂಡತಿ ಅವನಿಗೆ ಒಂದು ಮುದ್ದಾದ ಹೆಣ್ಣು ಮಗುವನ್ನು ಹಡೆದುಕೊಟ್ಟಳು. ಮಗುವಿಗೆ 'ಓಗಾಂಡಾ' ಎಂದು ಹೆಸರಿಡಲಾಯಿತು. ಇಪ್ಪತ್ತು ಜನರ ಕುಟುಂಬದಲ್ಲಿ ಇವಳೊಬ್ಬಳೇ ಹೆಣ್ಣು ಮಗಳು. ಸರದಾರನ ಮುದ್ದು ಕುವರಿ. ಓಗಾಂಡಾಳ ಮಲತಾಯಿಯರೆಲ್ಲ ನೋಡಿ ಕರುಬುವಷ್ಟು ಮುದ್ದಾಗಿದ್ದಳು. ಲಾಜೋಂಗೊ ತನ್ನ ಮಗಳನ್ನು ಅರೆಕ್ಷಣವೂ ಬಿಟ್ಟಿರಲಾರ. 'ಎಷ್ಟಾದರೂ ಹುಡುಗಿಯಲ್ಲವೇ... ಮದುವೆ ಮಾಡಿಕೊಂಡು ಗಂಡ ಮನೆಗೆ ಹೋಗುತ್ತಾಳೆ.' ಎಂದು ಗೊಣಗಿಕೊಂಡು ಮಲತಾಯಿಯರು ಸುಮ್ಮನಾಗಿ ಬಿಡುತ್ತಿದ್ದರು.

ಗುರಿಕಾರ ಲಾಜೋಂಗೊನ ಜೀವನದಲ್ಲಿ ಅವನ ನಿಷ್ಠೆಯನ್ನು ಪರೀಕ್ಷಿಸುವ ಕಾಲ ಇಂದು ಒದಗಿಬಂದಿತ್ತು. ಮಾಂತ್ರಿಕರು ನೀಡಿದ್ದ ಆದೇಶವನ್ನು ಉಲ್ಲಂಘಿಸಿದರೆ ಮಳೆ ಬರುವುದಿಲ್ಲ, ಬುಡಕಟ್ಟಿನ ಜನರು ಸಾಯುವ ಕಾಲ ಬರುತ್ತದೆ. ಬುಡಕಟ್ಟಿನ ಒಳಿತಿಗಾಗಿ ಓಗಾಂಡಾ ಬಲಿಯಾದರೆ ಲಾಜೋಂಗೊ ತನ್ನ ಮುದ್ದಿನ ಮಗಳನ್ನು ಕಳೆದುಕೊಳ್ಳಬೇಕಾಗುತ್ತದೆ. ಮಗಳಿಲ್ಲದ ಬಾಳು ಬದುಕಿಯೂ ಸತ್ತಂತೆ.

ಗುರಿಕಾರನ ಕಿವಿಗಳಲ್ಲಿ ಮಾಂತ್ರಿಕನ ಮಾತುಗಳು ಪ್ರತಿಧ್ವನಿತವಾಗುತ್ತಿದ್ದವು. "ಯೋಪ್ ಯಜಮಾನ... ಸರಿಯಾಗಿ ಕೇಳಿಕೋ. ನಿನ್ನೆ ಕನಸಿನಲ್ಲಿ ನಿನ್ನ ಪಿತೃಗಳು ಕಡ್ಡಿ ಮುರಿಯುವಂತೆ ಹೇಳಿ ಹೋಗಿದ್ದಾರೆ. ನೀನು ಸರೋವರದ ದೇವತೆಗೆ ಒಬ್ಬ ಹುಡುಗಿಯನ್ನು ಬಲಿಕೊಡುವ ತನಕ ನಿನ್ನ ಊರಿನಲ್ಲಿ ಒಂದು ತೊಟ್ಟು ಮಳೆಯೂ ಬೀಳುವುದಿಲ್ಲ..... ನಾನು ಕನಸಿನಲ್ಲಿ ಸರೋವರದ ದಂಡೆಯಲ್ಲಿ ಆಡ್ತಾಡುತ್ತಿದ್ದ ಒಬ್ಬ ಹುಡುಗಿಯನ್ನು ನೋಡಿದೆ. ಅವಳ ಎಡಗಿವಿಯಲ್ಲಿ



ಚಿನ್ನದ ಉಂಗುರವಿದೆ. ಸೊಂಟದಲ್ಲಿ ಮಿರುಗುವ ಡಾಬು ಇದೆ. ಅದೇ ಹುಡುಗಿಯನ್ನು ಸರೋವರದ ದೇವತೆಗೆ ಬಲಿ ಕೊಡು. ಅದೇ ದಿನ ಮಳೆ ಸುರಿಯುತ್ತದೆ. ಸತತವಾಗಿ ಮಳೆ ಸುರಿಯುತ್ತದೆ. ಆ ದಿನ ಎಲ್ಲರನ್ನೂ ಮಳೆಯಲ್ಲಿಯೇ ಇದ್ದು ಜಿಡುವಂತೆ ಹೇಳು......''

ಗುರಿಕಾರ ಹನಿಗೆರೆಯುತ್ತಿದ್ದ ಕಣ್ಣುಗಳನ್ನು ಒರೆಸಿಕೊಂಡ. ಮನಸ್ಸನ್ನು ಗಟ್ಟಿ ಮಾಡಿಕೊಂಡ. ಗುಡಿಸಿಲಿನಿಂದ ಹೊರಬಂದ. ನಗಾರಿ ಬಾರಿಸುವ ಸೇವಕರನ್ನು ಕರೆಯದೇ ತಾನೇ ನಗಾರಿಯ ಬಳಿ ಧಾವಿಸಿ ಅದನ್ನು ಬಾರಿಸಿದ. ಕೆಲವೇ ಕ್ಷಣಗಳಲ್ಲಿ ಮನೆಯ ಮುಂದಿನ ಮರದ ಕೆಳಗೆ ಹಳ್ಳಿಯವರೆಲ್ಲ ಕಲೆತರು. ಮಗಳು ಓಗಾಂಡಾಳನ್ನು ಸ್ವಲ್ಪ ಹೊತ್ತು ಅಜ್ಜಿಯ ಮನೆಯಲ್ಲಿ ಹೋಗಿ ಇರುವಂತೆ ಆದೇಶಿಸಿದ, ಮಾತಾಡಲೆಂದು ಎದ್ದು ನಿಂತಾಗ ಕಂಠ ಕಂಪಿಸುತ್ತಿತ್ತು. ಮಾತು ಹೊರಬರಲೇ ಇಲ್ಲ. ಲಾಜೋಂಗೊನ ಯಾತನೆಯನ್ನು ಗಮನಿಸಿ ಯಾವುದೋ ಭಯಂಕರ ವಿಷಯವೇ ಇರಬೇಕು ಎಂದವನ ಹೆಂಡದಿರು ಯೋಚಿಸಿದರು.

ಲಾಜೋಂಗೊ ಮಾತನಾಡಲೇಬೇಕಿತ್ತು.

ಬೇರೆ ಮಾರ್ಗವಿರಲಿಲ್ಲ. ಗಂಭೀರವ
ಮಾತು ಆರಂಭಿಸಿದ- ''ನಾನು ತುಂ
ಪ್ರೀತಿಸುವ ನನ್ನ ಮಗಳು ಓಗಾಂಡಾ ಸಾ
ಬೇಕಾಗಿದೆ. ಮಳೆ ಬರಿಸಲು ಒಬ್ಬ ಯು
ಯನ್ನು ಸರೋವರದ ದೇವತೆಗೆ ಬಲಿ ಕೊ
ಬೇಕಂತೆ. ಆ ಯುವತಿ ನನ್ನ ಮಗಳು ಓಗ
ಡಾಳೇ ಆಗಬೇಕೆಂದು ಪಿತೃ ದೇವತೆಗ
ಅಪ್ಪಣೆ ಮಾಡಿದ್ದಾರೆ....''

ಸ್ಮಶಾನ ಮೌನ ಆವರಿಸಿತು. ಹಠಾತ್ತಾ
ಎರಗಿದ್ದ ಸಿಡಿಲಿಗೆ ಓಗಾಂಡಾಳ ತಾಯಿ ಎಚ
ದಪ್ಪಿ ಬಿದ್ದಳು. ಅವಳನ್ನು ಹೊತ್ತು ಕೆಲವ
ಗುಡಿಸಿಲಿಗೆ ತೆರಳಿದರು ಶುಶ್ರೂಷೆಗಾ
ಲಾಜೋಂಗೊನ ಮಾತುಗಳು ಅವನಿಗ
ಕೇಳಿಸಿದಷ್ಟು ಕ್ಷೀಣವಾಗಿ, ನಿಧಾನವ
ಮುಂದುವರೆದವು. ಮಾತು ಮುಗಿದೊಡ
ತುಂಡರಿಸಿದ ಮರ ನೆಲಕ್ಕಪ್ಪಳಿಸುವಂತೆ ಗ
ಕಾರ ಕೂತುಬಿಟ್ಟ.

''ಅಬ್ಬ! ಓಗಾಂಡಾ ಎಷ್ಟು ಭಾಗ್ಯಶಾಲಿ
ಎನ್ನುತ್ತಿದ್ದರು. ಕೆಲವು ಮಹಿಳೆಯ
''ಕೇರಿಯ ಒಳಿತಿಗಾಗಿ ಬಲಿಯಾಗುವುದೆಂ
ಎಷ್ಟೊಂದು ಪುಣ್ಯ ಮಾಡಿರಬೇಕು....
ಅವರೆಲ್ಲ ನರ್ತಿಸಲು ಶುರು ಮಾಡಿದರು.

ಅತ್ತ ಕಡೆ ಓಗಾಂಡಾ ತನ್ನ ಅಜ್ಜಿಯ ಡಿಸಿಲಿನಲ್ಲಿ ಕುಳಿತು ಏನೇನೋ ಯೋಚಿಸು ದ್ದಳು. ತನ್ನನ್ನು ಸಭೆಯಿಂದ ದೂರ ಏಕೆ ಟ್ಟಿರು ಎನ್ನುವುದು ಆಕೆಗೆ ಅರ್ಥವಾಗಿರ ಲ್ಲ. ಆಗಲೇ ಅವಳಿಗೆ ಒಂದು ವಿಚಾರ ಳೆದು, ಅರಿವಿಲ್ಲದಂತೆಯೇ ನಸುನಕ್ಕಳು- ಅವರೆಲ್ಲ ಅಲ್ಲಿ ನನ್ನ ಮದುವೆಯ ಬಗ್ಗೆ ಾತುಕತೆ ನಡೆಸಿರಬೇಕು. ಹೀಗೆಂದೇ ನಾನು ಲ್ಲಿಗೆ ಹೋಗದಂತೆ ತಡೆದದ್ದಿರಬೇಕು...'' ೇ ಬುಡಕಟ್ಟಿನಲ್ಲಿ ಮದುವೆಯ ಮಾತುಕತೆ ಸು ನಡೆಯುವಾಗ ಮದುವೆಯ ಹೆಣ್ಣನ್ನು ೂರ ಇಡುವುದು ಸಂಪ್ರದಾಯ!)

ಓಗಾಂಡಾಳ ಯೋಚನೆಗಳು ಈಗ ೇರೊಂದು ದಿಕ್ಕಿನಲ್ಲಿ ಹರಿಯಲಾರಂಭಿಸಿ ವು, "ಮದುವೆ....! ನನ್ನ ಗಂಡನಾಗುವವ ಾರಿರಬಹುದು.....? ಆ ನೆರೆ ಊರಿನ ಜ್ ಇರಬಹುದೇ.....? ಅವನೇನೋ ್ರದ್ರೂಪಿ. ಕಣ್ಣುಗಳಂತೂ ಮುದ್ದಾಗಿವೆ. ದರೆ ಕುಳ್ಳ..... ನಾವು ಗಂಡ ಹೆಂಡತಿ ಟ್ಟಿಗೆ ನಿಂತಾಗ ತಾನು ಅವನ ಹತ್ತಿರ ಾತಾಡಬೇಕೆಂದರೆ ಬಾಗಿ ಮಾತಾಡಬೇಕಾಗು ದೆ. ಇದು ಚೆನ್ನಾಗಿರೋಲ್ಲ. ಹಾಗಾದರೆ ಮೋ ಆದರೆ ಹೇಗಿರಬಹುದು? ಡಿಮೋ ನ್ನನ್ನು ಪ್ರೀತಿಸುತ್ತಾನೆ. ಮದುವೆಯಾ ೀಯಾ ಅಂತ ಆಗಾಗ ಛೇಡಿಸ್ತಾನೆ, ತುಂಬಾ ತ್ತರವಾಗಿ ದಪ್ಪನಾಗಿ ಇದ್ದಾನೆ, ಧೈರ್ಯ ಲಿ ಕೂಡಾ. ಹೆಸರಾಂತ ಪೈಲವಾನ ೇರೆ..... ಛೇ ಅವನು ಸದಾಕಾಲ ಮಾರಾ ಾರಿಗೆ ಸಿದ್ಧನಾಗಿಯೆ ಇರುತ್ತಾನೆ. ಒಳ್ಳೆ ಂಡನಾಗಲಾರ. ಅವನು ಮಾತ್ರ ಬೇಡಪ್ಪಾ.''

ಅವಳಿಗೆ ಈಗ ಓಸಿಂಡಾನ ನೆನಪು ಬಂತು. ಡಲೇ ಮುಖ ಅರಳಿತು. ಅವಳ ಕೈ ರಳುಗಳು ಸೊಂಟದಲ್ಲಿದ್ದ ಡಾಬಿನ ಮೇಲೆ ಡಲಾರಂಭಿಸಿದವು. ಈ ಡಾಬಿನೊಂದಿಗೆ ವನ ಮಧುರ ನೆನಪುಗಳು ಸೇರಿಕೊಂಡಿ ವು. ಓಗಾಂಡಾ ಡಾಬನ್ನು ಸವರಿಕೊಳ್ಳುತ್ತಾ ಓಸಿಂಡಾನ ನೆನಪುಗಳಲ್ಲಿ ಮುಳುಗಿದಳು. ಈಗಲೇ ಬಂದು ಓಸಿಂಡಾ ತನ್ನನ್ನು ಜೊತೆ ಯಲ್ಲಿ ಕರೆದುಕೊಂಡು ಹೋದರೆ ಎಷ್ಟು ಚೆನ್ನಾಗಿರುತ್ತದೆ.....!

ಗುಡಿಸಲ ಬಾಗಿಲಲ್ಲಿ ಪೆಚ್ಚು ಮೋರೆ ಹಾಕಿ ನಿಂತಿದ್ದ ಅಜ್ಜಿಯನ್ನು ನೋಡಿದಳು. ಆಶ್ಚ ರ್ಯವಾಯಿತು. "ಅಜ್ಜಿ ಅಜ್ಜಿ ಬೇಗ ಹೇಳು.... ಅಲ್ಲೇನು ಮಾತು ನಡೀತಾ ಇದೆ... ನನ್ನ ಮದುವೆ ವಿಷಯ ತಾನೇ....? ಹುಡುಗ ಯಾರು? ನೀವು ನೋಡಿರುವ ಯಾವ ಹುಡುಗರನ್ನು ನಾನು ಮದುವೆಯಾಗ ಲಾರೆ..... ಹೇಳಜ್ಜಿ ಯಾಕೆ ಮಾತನಾಡು ತ್ತಿಲ್ಲ.....'' ಅಜ್ಜಿ ಮಾತನಾಡಲೇ ಇಲ್ಲ. ಆ ವೇಳೆಗೆ ಕುಣಿಯುತ್ತಾ ಬಂದ ಮಹಿಳಾವೃಂದ ಗುಡಿಸಿಲಿಗೆ ಹತ್ತಿರವಾಯಿತು. ಓಗಾಂಡಾಳಿಗೆ ಮತ್ತಷ್ಟು ಆಶ್ಚರ್ಯ. ಕಡೆಗೊಮ್ಮೆ ಅವರೆಲ್ಲ ನಿಧಾನವಾಗಿ ಓಗಾಂಡಾಳ ಬಳಿ ಬಂದರು. ಅವಳ ಕಾಲ ಬಳಿ ಬಹುಮಾನಗಳನ್ನಿಟ್ಟು ಹೇಳಿದರು- "ನೀನು ಮಹಾಪುಣ್ಯವಂತೆ ಓಗಾಂಡಾ..... ನೀನು ಮಳೆಗಾಗಿ ನಮಗೋ ಸ್ಕರ ಬಲಿಯಾಗುತ್ತಿರುವೆ......''

ಅವರ ಮಾತುಗಳನ್ನು ಕೇಳಿ ಓಗಾಂಡಾ ಬೆಚ್ಚಿಬಿದ್ದಳು- "ಬಲಿ.....!!'' ಇದೆಲ್ಲಾ ಏನು..... ಇಲ್ಲೇನು ನಡೀತಾ ಇದೆ..... ಆಗಲೇ ಅವಳು ತನ್ನ ಅಜ್ಜಿ ದಾರಿಗೆ ಅಡ್ಡ ವಾಗಿ ನಿಂತಿರುವುದನ್ನು ಗಮನಿಸಿದ್ದು. ಓಗಾಂಡಾ ಸಿಟ್ಟಿನಿಂದ ಉದ್ರೇಕದಿಂದ ನಡಗು ತ್ತಿದ್ದಳು. "ಹಾಗಾದರೆ ಇದು ಮದುವೆಯ ಮಾತುಕತೆ ಅಲ್ಲವೇ ಅಜ್ಜಿ..... ಇವರೆಲ್ಲರ ಮಾತಿನ ಅರ್ಥವಾದರೂ ಏನು.....?!''

ಅವಳು ಹಸಿದ ಬೆಕ್ಕಿನ ಕೈಯಲ್ಲಿ ಸಿಕ್ಕು ಬಿದ್ದ ಇಲಿಯಂತೆ ಒದ್ದಾಡಿದಳು. ಅಲ್ಲಿಂದ ಓಡಿ ಹೋಗುವ ದಾರಿಗಾಗಿ ಹುಡುಕಾಡಿ ದಳು. ಆದರೆ ಆ ಗುಡಿಸಲಿಗೆ ಇದ್ದುದು ಒಂದೇ ಬಾಗಿಲು. ಆ ಬಾಗಿಲಿನಲ್ಲಿ ಅಜ್ಜಿ ಅಡ್ಡಲಾಗಿ ನಿಂತಿದ್ದಳು.

★

ಬಹಳ ಹೊತ್ತಿನವರೆಗೂ ಗುಡಿಸಲಲ್ಲಿ ಮೌನ ಆವರಿಸಿಕೊಂಡಿತ್ತು. ಯಾರೊಬ್ಬರೂ ತುಟಿ ಪಿಟಿಕ್ಕೆಂದಿರಲಿಲ್ಲ. ಎಲ್ಲರೂ ಸಮಾನ ದುಃಖಿಗಳೇ. ಏನು ಮಾತನಾಡುವುದು? ಮೂರು ಕಲ್ಲುಗಳ ಮೇಲೆ ಇಟ್ಟಿರುವ ಪಾತ್ರೆಯ ಕೆಳಗಿನ ಒಂದು ಕಲ್ಲನ್ನು ತೆಗೆದಂತೆ....

ಗುಡಿಸಲಿನ ಹೊರಗಡೆಯ ದೃಶ್ಯ ತುಂಬಾ ಭಿನ್ನವಾಗಿತ್ತು. "ಮಳೆಗಾಗಿ ಒಗಾಂಡಾಳನ್ನು



ಬಲಿ ಕೊಡಲಾಗುವುದು...." ಎನ್ನುವ ಮಾತು ಕಾಡ್ಗಿಚ್ಚಿನಂತೆ ಸುತ್ತಲಿನ ಹಳ್ಳಿಗಳಲ್ಲಿ ಹಬ್ಬಿತ್ತು. ಕೆಲವೇ ಗಂಟೆಗಳಲ್ಲಿ ಗುರಿಕಾರನ ಮನೆ ಜನರಿಂದ ತುಂಬಿ ಹೋಯಿತು. ಊರು ಕಿಕ್ಕಿರಿಯಿತು. ಬಂದ ಜನರೆಲ್ಲರೂ ಒಗಾಂಡಾಳಿಗೆ ಬಳುವಳಿಗಳನ್ನು ತಂದಿದ್ದರು. ರಾತ್ರಿಯಿಡೀ ಹಾಡುತ್ತಾ, ಕುಣಿಯುತ್ತಾ ಬೆಳಗಿನ ಬೀಳ್ಕೊಡುವ ಸಮಾರಂಭದ ಸಲುವಾಗಿ ಜೋರಾದ ಸಿದ್ಧತೆ ನಡೆಸಿದ್ದರು. 'ಸಮಾಜಹಿತಕ್ಕಾಗಿ ಬಲಿಕೊಡುವುದು ಅಭಿಮಾನದ ಸಂಗತಿ' ಎಂದು ಅವರು ಗುರಿಕಾರನ ಮನೆಯವರಿಗೆ ಹೇಳುತ್ತಿದ್ದರು.

ಒಗಾಂಡಾಳ ತಾಯಿ ಮಾತ್ರ ದುಃಖ, ಚಿಂತೆ ಹಾಗೂ ವಿವಶತೆಗಳಿಂದಾಗಿ ತೊಳಲಾಡುತ್ತಿದ್ದಳು. "ಊರಿನಲ್ಲಿ ಇಷ್ಟೊಂದು ಹೆಣ್ಣು ಮಕ್ಕಳಿದ್ದಾರೆ. ಅವರನ್ನೆಲ್ಲಾ ಬಿಟ್ಟು ನನ್ನ ಒಬ್ಬಳೇ ಒಬ್ಬ ಮಗಳನ್ನು ಏಕೆ ಆರಿಸಿಕೊಂಡರು ಈ ಪಿತೃ ದೇವತೆಗಳು.....?!" ಎಂದವಳ ಮನಸ್ಸು ಆಕ್ರೋಶದಿಂದ ಕನಲುತ್ತಿತ್ತು.

ರಾತ್ರಿಯ ಶುಭ್ರ ಆಕಾಶದಲ್ಲಿ ಮೋಡಗಳ ಸುಳಿವೇ ಇರಲಿಲ್ಲ. ಚಂದ್ರ ಫಳಫಳ ಗುಟ್ಟುತ್ತಿದ್ದ. ಅಸಂಖ್ಯ ತಾರೆಗಳು ಮಿನುಗುತ್ತಿದ್ದವು. ಎಲ್ಲಾ ವಯಸ್ಸಿನ ಹೆಣ್ಣು-ಗಂಡುಗಳು ಒಗಾಂಡಾಳ ಮುಂದೆ ನರ್ತಿಸುತ್ತಿದ್ದವು. ಒಗಾಂಡಾ ತನ್ನ ತಾಯಿಗೆ ಆತು ಕುಳಿತು ಕಣ್ಣೀರಧಾರೆ ಹರಿಸಿದ್ದಳು. ಹುಟ್ಟಿನಿಂದ ಪರಿಚಿತರಾದ ಈ ಜನ, ಈ ಮನೆ, ಈ ವಾತಾವರಣ ಏಕಾಏಕಿ ಅಪರಿಚಿತವಾಗಿ ಬಿಟ್ಟಿತ್ತು. "ಇವರ್ಯಾರೂ ನನಗೆ ನೆರವಾಗುತ್ತಿಲ್ಲವೇಕೆ? ತಾರುಣ್ಯದಲ್ಲಿಯೇ ಸಾಯಬೇಕಾಗಿರುವ ನನ್ನ ಹೃದಯದ ನೋವು ಇವರಿಗೇಕೆ ಅರ್ಥವಾಗುತ್ತಿಲ್ಲ?"

ತನ್ನ ಓರಗೆಯವರು ಹೊರಗೆ ಕುಣಿಯುವುದನ್ನು ನೋಡಿ ಒಗಾಂಡಾಳ ಅಳು ಇನ್ನೂ ಹೆಚ್ಚಾಯಿತು. "ಇವರೂ ತಾರುಣ್ಯದಲ್ಲಿಯೇ ಇದ್ದಾರೆ. ಇವರೂ ಸುಂದರಿಯರೇ, ನಾಳೆ ಇವರೆಲ್ಲ ಮದುವೆಯಾಗುತ್ತಾರೆ. ಮಕ್ಕಳನ್ನು ಹೆರುತ್ತಾರೆ. ನಾ.....ನು...." ಒಗಾಂಡಾಳ ಕೈಗಳು ಸೊಂಟದ ಹಾಚಿನ ಕಡೆ ಹೋದವು. ಅದನ್ನು ಸವರುತ್ತಾ ನಿಂತವು. ಸವಿನೆನಪುಗಳು ಜಾಗೃತವಾದವು. "ಈ ಗುಂಪಿನಲ್ಲಿ ನನ್ನ ಒಸಿಂಡಾ ಇದ್ದಿದ್ದರೆ.....! ನನ್ನನ್ನು ಸಾಯಿಸುವ ಈ ಜನರನ್ನು ಸದೆ ಬಡಿಯುತ್ತಿದ್ದ, ಚಿನ್ನದ ಹೂವಿನಂತೆ ಜೋಪಾನವಾಗಿ ಎತ್ತಿಕೊಂಡು ಹೋಗಿ ರಕ್ಷಿಸುತ್ತಿದ್ದ. ಅಳು ಹೆಚ್ಚಾಯಿತು. ಓ!...... ಒಸಿಂಡಾ!"

ಬೆಳಗಿನ ಹೊತ್ತಿಗೆ ವಿವಿಧ ಭಕ್ಷ್ಯಗಳು ಸಿದ್ಧವಾದವು. ಸತ್ತ ಮೇಲೆ ಉಣ್ಣಲು, ಕುಡಿ

ಯಲು ಏನೂ ಸಿಗುವುದಿಲ್ಲವಂತೆ. ಸಾಯುವ ಮೊದಲು ತಿನ್ನಲಿ ಎಂದೇ ಒಗಾಂಡಾಳಿಗೆ ಇಷ್ಟವಾದ ತಿನಿಸನ್ನು ರಾಶಿ ಮಾಡಿದ್ದರು. ಆದರೆ ಒಗಾಂಡಾ ಏನನ್ನೂ ಮುಟ್ಟಲಿಲ್ಲ. ಆಕೆಗೆ ಏನೂ ಬೇಕಾಗಿರಲಿಲ್ಲ ಆಗ.

ಸರೋವರದ ದಿಕ್ಕಿನಲ್ಲಿ ಪ್ರಸ್ಥಾನದ ಮುಹೂರ್ತ ಸಮೀಪಿಸುತ್ತಿತ್ತು. ಸರೋವರ ಇಲ್ಲಿಂದ ಒಂದು ರಾತ್ರಿ, ಹಾಗೂ ಒಂದು ಇಡೀ ಹಗಲಿನ ದೂರದಲ್ಲಿತ್ತು. ದಟ್ಟಡವಿಯ ಹಾದಿಯನ್ನು ಕ್ರಮಿಸಬೇಕಾಗಿತ್ತು. ಒಂದೇ ಒಂದು ಬಾರಿ ಓಸಿಂಡಾ ಇಲ್ಲಿಗೆ ಬರಬಾರದೇ? ಆದರೆ ಓಸಿಂಡಾ ಬರಲಿಲ್ಲ. ಈ ಕೊನೆಯ ಆಸೆಯೂ ಕೈಗೂಡುವ ಸೂಚನೆಗಳು ಇರಲಿಲ್ಲ....

★

ಒಗಾಂಡಾಳನ್ನು ಬೀಳ್ಕೊಡಲು ಊರಿಗೆ ಊರೇ ಊರಬಾಗಿಲಿನಲ್ಲಿ ಸೇರಿತ್ತು. ತಾಯಿ ಅವಳ ಹೆಗಲ ಮೇಲೆ ತಲೆ ಇಟ್ಟುಕೊಂಡು ಗಾಯಗೊಂಡ ಹುಲಿಯಂತೆ ರೋದಿಸುತ್ತಿದ್ದಳು. ಲಾಜೋಂಗೊ ಸೂತಕದ ವಸ್ತ್ರಗಳನ್ನು ಧರಿಸಿ ಬರಿಗಾಲಿನಲ್ಲಿ ಗುಂಪಿನ ಮಧ್ಯೆ ನಿಂತಿದ್ದ. ಮುಂಗೈಗೆ ಕಟ್ಟಿಕೊಂಡಿದ್ದ ಸರಪಳಿಯನ್ನು ಮಗಳ ಕೈಗೆ ಕಟ್ಟುತ್ತಾ ತುಂಬಿ ಬಂದ ಕಂಠದಿಂದ ಹೇಳಿದ- "ಮಗೂ..... ನೀನು ಯಾವಾಗಲೂ ನಮ್ಮ ಮಧ್ಯೆ ಇರುವೆ. ನಮ್ಮ ಪಿತೃಗಳ ಆತ್ಮಗಳು ನಿನ್ನನ್ನು ಕಾಯುತ್ತವೆ."

ಒಗಾಂಡಾ ತಾನು ಹುಟ್ಟಿ ಬೆಳೆದ ಮನೆ ಕಡೆ ಕೊನೆಯ ಬಾರಿ ಕಣ್ಣು ಹಾಯಿಸಿದಳು. ಅವಳು ಬಾಲ್ಯದಿಂದಲೂ ಅವಳೊಟ್ಟಿಗೇ ಬೆಳೆದು ಬಂದಿದ್ದ ಕನಸುಗಳು ನುಚ್ಚುನೂರಾಗಿದ್ದವು. ರಭಸದಿಂದ ಹೊಡೆದುಕೊಳ್ಳುತ್ತಿದ್ದ ಎದೆಯನ್ನು ತಹಬಂದಿಗೆ ತಂದುಕೊಳ್ಳಲು ಪ್ರಯತ್ನಿಸುತ್ತಾ ಕೊನೆಯ ಬಾರಿಗೆ ರೋದಿಸುತ್ತಿದ್ದ ತನ್ನ ತಾಯಿಯತ್ತ ನೋಡಿದಳು. ಕಡೆಗೊಮ್ಮೆ ಸರೋವರದ ಕಡೆಗೆ ಹೋಗುವ ಹಾದಿಯಲ್ಲಿ ಮುನ್ನಡೆದಳು. ಅವಳ ಅಸ್ಪಷ್ಟ ಆಕೃತಿ ದಟ್ಟಡವಿಯಲ್ಲಿ ಮರೆಯಾಗುವ ತನಕ ತಂದೆ, ತಾಯಿ, ಬಂಧುಬಳಗ ಎವೆಯಿಕ್ಕದೇ ದೃಷ್ಟಿಸಿದ್ದರು.

★

ಪಶ್ಚಿಮ ದಿಗಂತದಲ್ಲಿ ಮುಳುಗುತ್ತಿದ್ದ ಸೂರ್ಯನ ಹೊಂಬಣ್ಣದ ಕಿರಣಗಳು ಒಗಾಂಡಾಳನ್ನು ತಾಕಿದವು. ಅವಳು ಒಂದೇ ಸಮನೆ ನಡೆದಿದ್ದಳು. ಸಂಜೆ ಕಳೆಯಿತು.... ರಾತ್ರಿ ಆವರಿಸಿತು. ಒಗಾಂಡಾ ನಡೆಯುತ್ತಲೇ ಇದ್ದಳು. ಕಾಲು ನೋವಾದಾಗ ಮರದ ಕಾಂಡವೊಂದಕ್ಕೆ ಒರಗಿದಳು.... ನಿದ್ದೆ ಹಾಗೆಯೇ ಆವರಿಸಿಕೊಂಡಿತು.

ಕಣ್ಣು ತೆರೆದಾಗ ಸೂರ್ಯ ಬಹಳ ಮೇಲೆ ಬಂದು ಬಿಟ್ಟಿದ್ದ. ಅವಳು ಮತ್ತೆ ನಡೆಯಲು ಆರಂಭಿಸಿದಳು. ಅನೇಕ ಗಂಟೆಗಳ ದಾರಿ ಸವೆಯಿತು. ಕಡೆಗೂ ದಟ್ಟಡವಿಯಿಂದ ಹೊರಬಿದ್ದು ನಿಷಿದ್ಧ ಪ್ರದೇಶದ ಅಂಚನ್ನು ತಲುಪಿದಳು. ಅಲ್ಲಿಯೂ ಅವಳನ್ನು ಬೀಳ್ಕೊಡಲೆಂದೇ ಕೆಲವು ಜನ ಕಾಯುತ್ತಾ ನಿಂತಿದ್ದರು. ಅವರಲ್ಲೊಬ್ಬ, ಪುಟ್ಟ ಹುಡುಗಿ ಒಗಾಂಡಾಳ ಬಳಿ ಓಡಿ ಬಂದಳು. ಅವಳ ಅಕ್ಕ ಕಳೆದ ವಾರವಷ್ಟೇ ಸತ್ತು ಹೋಗಿದ್ದಳು. "ಅಕ್ಕಾ.... ಅಕ್ಕಾ.... ನೀನು ಹೇಗಿದ್ದರೂ ಮೃತ್ಯುಲೋಕಕ್ಕೆ ಹೋಗುತ್ತಿದ್ದೀಯ..... ಅಲ್ಲಿ ನನ್ನ ಅಕ್ಕ ಸಿಗುತ್ತಾಳೆ. ಇದೋ! ಈ ಕಿವಿಯುಂಗುರವನ್ನು ಅವಳಿಗೆ ಕೊಟ್ಟು ಬಿಡು. ಇದಿಲ್ಲದೆ ಅವಳ ಕಿವಿ ಬಣಗುಟ್ಟುತ್ತಿರಬಹುದು....." ಎಂದು ತೊದಲಿದಳು ಆ ಪುಟ್ಟ ಹುಡುಗಿ!

ಎಷ್ಟೋ ಜನ ತಮ್ಮ ಮೃತ ಬಂಧುಗಳಿಗೆ ಒಗಾಂಡಾಳ ಮೂಲಕ ಸಂದೇಶ ಕಳುಹಿಸ ಬಯಸಿದ್ದರು. ಆದರೆ ಈ ಮುಗ್ಧ ಹುಡುಗಿಯನ್ನು ಉಳಿದು ಯಾರೂ ಬಳುವಳಿಯನ್ನು ಕಳುಹಿಸುವ ಸಾಹಸ ಮಾಡಿರಲಿಲ್ಲ!

ಎಲ್ಲೆಯನ್ನು ದಾಟಿದ ಕೂಡಲೇ ಪವಿತ್ರ ಲೋಕ ಸಿಗುತ್ತಿತ್ತು. ಅಲ್ಲಿಗೆ ಹೋದ ಯಾರೊಬ್ಬನೂ ಹಿಂದಿರುಗುತ್ತಿರಲಿಲ್ಲ. ಅದಕ್ಕೆಂದೇ ಅದು ಜನಸಾಮಾನ್ಯರಿಗೆ ನಿಷಿದ್ಧ



ಕ್ಷೇತ್ರವಾಗಿತ್ತು. ಒಗಾಂಡಾ ಆ ಎಲ್ಲೆಯನ್ನು ದಾಟಿ ಪವಿತ್ರ ಲೋಕದಲ್ಲಿ ಕಾಲಿರಿಸಿದಳು. ವಿಚಿತ್ರ ಭ್ರಮೆ ಅವಳನ್ನು ಆವರಿಸಿಕೊಂಡಿತು. ಯಾವ್ಯಾವುದೋ ಅಪರಿಚಿತ ಧ್ವನಿಗಳು ಕೇಳಲಾರಂಭಿಸಿದವು. ಭಯದಿಂದ ಕಂಪಿಸುತ್ತಿದ್ದಳು ಒಗಾಂಡಾ. ಒಂದು ಬಾರಿಯಂತೂ ಇಲ್ಲಿಂದ ಹಿಂತಿರುಗಿ ಬಿಡಲೇ ಎನ್ನಿಸಿಬಿಟ್ಟಿತು. ಆದರೆ ಊರಿಗೆ ಮಳೆ ಬರಿಸಲು ಅವಳ ಬಲಿ ಆಗಲೇ ಬೇಕಿತ್ತಲ್ಲ! ನಡೆಯುತೊಡಗಿದಳು...

ಯಾರೋ ತನ್ನನ್ನು ಹಿಂಬಾಲಿಸಿ ಬರುತ್ತಿರುವಂತೆ ಒಗಾಂಡಾಳಿಗೆ ಭಾಸವಾಯಿತು. ಆದರೆ ಹಿಂದಿರುಗಿ ನೋಡುವ ಧೈರ್ಯ ಬರಲಿಲ್ಲ. ಈ ಇಡೀ ಪ್ರದೇಶ ಸರೋವರದ ದೇವತೆಗೆ ಸೇರಿದ್ದು, ಅವನೇ ತನ್ನ ಹಿಂದೆ ಬರುತ್ತಿರಬಹುದೆಂದುಕೊಂಡಳು ಒಗಾಂಡಾ!

ಅವಳ ಕಾಲುಗಳೇನೋ ಮುಂದೆ ಮುಂದೆ ಚಲಿಸುತ್ತಿದ್ದವು. ಎದೆ ಮಾತ್ರ, ಡಬ್ ಡಬ್ ಎಂದು ಹೊಡೆದುಕೊಳ್ಳುತ್ತಿತ್ತು. ಪ್ರತಿ ರೋಮವೂ ಭಯದಿಂದ ಕಂಪಿಸುತ್ತಿತ್ತು. ಮೇಲಿಂದ ಮೇಲೆ ಬೆವತು ಹೋಗುತ್ತಿದ್ದಳು.

ಕೊನೆಗೊಮ್ಮೆ ಓಡಲಾರಂಭಿಸಿದಳು ಒಗಾಂಡಾ. ಈಗ ಅವಳಿಗೆ ತನ್ನ ಬೆನ್ನು ಹತ್ತಿ ಹಿಂದೆ ಬಿದ್ದಿರುವ ಆಕೃತಿಯೂ ಓಡಿ ಬರುತ್ತಿರುವಂತೆ ಭಾಸವಾಯಿತು. ಒಗಾಂಡಾ ಮತ್ತೂ ಜೋರಾಗಿ ಓಡಿದಳು. ಸೂರ್ಯ ಮುಳುಗುವ ಮುನ್ನವೇ ಅವಳು ಸರೋವರದಲ್ಲಿ ಧುಮುಕಬೇಕಾಗಿತ್ತು. ಆಗ ಮಾತ್ರ, ಅವಳ ಬಲಿ ಸಾರ್ಥಕವಾಗುತ್ತಿತ್ತು. ಮಳೆ ಬರುತ್ತಿತ್ತು. ಅವಳಿನ್ನೂ ಸರೋವರದ ಅಂಚನ್ನು ತಲುಪಿರಲಿಲ್ಲ. ಆಗಲೇ ಹಿಂದೆ ಬರುತ್ತಿದ್ದ ಆಕೃತಿ ತನ್ನನ್ನು ಬಾಚಿ ಹಿಡಿದಿಟ್ಟುಕೊಂಡಂತೆ ಭಾಸವಾಯಿತು ಒಗಾಂಡಾಳಿಗೆ. ಬಾಯಿಂದ ಚೀತ್ಕಾರ ಹೊರಟಿತು. ಪ್ರಜ್ಞೆ ತಪ್ಪಿತು. ದೇಹ ನೆಲದ ಮೇಲೆ ಉರುಳಿಬಿತ್ತು.

★

ತಂಗಾಳಿಯ ತಂಪು ಒಗಾಂಡಾಳನ್ನು ಎಚ್ಚರಿಸಿತು. ಯಾರೋ ತನ್ನ ಮೇಲೆ ಬಗ್ಗಿರುವಂತೆ ಅನಿಸಿತು. ಅವಳ ಕಣ್ಣುಗಳು ಪೂರ್ತಿಯಾಗಿ ತೆರೆದುಕೊಂಡಿರಲಿಲ್ಲ. ಏನೋ ಹೇಳಲು ಹೊರಟಳು. ಅಲುಗಾಡಿದ ತುಟಿಗಳಲ್ಲಿ ಶಬ್ದ ಹೊರಡಲಿಲ್ಲ.

ಬಾಯಿಯಲ್ಲಿ ಅಮೃತಮಯ ನೀರು ಬಿದ್ದಾಗ ಒಗಾಂಡಾ ಪೂರ್ಣ ಎಚ್ಚರಗೊಂಡಳು. ಆಕೆಗೆ ಆಶ್ಚರ್ಯ ಕಾದಿತ್ತು- ''ಅರೆ!



ಓಸಿಂಡಾ.....! ಓಸಿಂಡಾ.... ನೀನು.... ಇಲ್ಲಿ.... ಬೇಡ..... ನನ್ನನ್ನು ಮುಟ್ಟ ಬೇಡ......!! ಓಸಿಂಡಾ ನಾನು ...... ನಾ..... ನಾನು ಸಾಯಬೇಕಂತೆ...... ನನ್ನನ್ನು ಸಾಯಲು ಬಿಡು......ನಾನು ಬಲಿ ಯಾಗಬೇಕು... ಮಳೆ ಬರಬೇಕು...''

ಓಸಿಂಡಾ ತನ್ನ ಇನಿಯಳ ತಲೆ ಸವರಿದ. ಹಾಬನ್ನು ನೇವರಿಸಿದ. ''ಓಗಾಂಡಾ..... ನಿನ್ನನ್ನು ಸಾಯಲು ಬಿಡಲಾರೆ...... ನಾವು ಮರಳಿ ಆ ಊರಿಗೆ ಹೋಗುವುದೇ ಬೇಡ... ಬೇರೆಲ್ಲಾದರೂ ಓಡಿ ಹೋಗೋಣ. ನೀನಿಲ್ಲದೇ ನಾನಿರಲಾರೆ..... ಓ.....ಓಗಾಂಡಾ...''

ಓಸಿಂಡಾ ಎರಡು ನಿಲುವಂಗಿಗಳನ್ನು ತಂದಿದ್ದ. ಇಬ್ಬರೂ ವೇಷ ಮರೆಸಿಕೊಂಡು ತಪ್ಪಿಸಿಕೊಳ್ಳಲು. ದೂರ ದೂರ..... ಪ್ರೇಮ ಜೀವನಕ್ಕೆ...... ಯಾವ ಅಡ್ಡಿ ಆತಂಕಗಳಿಲ್ಲದ ನಾಡಿಗೆ ಓಡಿ ಹೋಗಲು.

ಓಗಾಂಡಾಳಲ್ಲಿ ಮತ್ತಷ್ಟು ಧೈರ್ಯ ತುಂಬುತ್ತಾ ಆತ ಹೇಳಿದ-

''ಓಗಾಂಡಾ...... ನೀನು ಭಯಪಡ ಬೇಡ..... ನಮಗ್ಯಾವ ಅನಿಷ್ಟವೂ ಆಗುವುದಿಲ್ಲ. ಮಳೆಯಾಗುವುದಕ್ಕೂ ಬಲಿಗೂ ಯಾವುದೇ ಸಂಬಂಧವೂ ಇಲ್ಲ. ಸೂರ್ಯಾಸ್ತಕ್ಕೆ ಮುನ್ನ ನಾವಿಲ್ಲಿಂದ ಹೊರಡಬೇಕು. ಏಳು ಓಗಾಂಡಾ.. ಓ! ನನ್ನ ಓಗಾಂ ಡಾ.''

ಕಡಗೂಮ್ಮೆ ಅವರು ಎಲ್ಲೆ ದಾಟಿದಾಗ ಕೆಂಪು ಸೂರ್ಯ ಸರೋವರದ ನೀರನ್ನು ಸ್ಪರ್ಶಿಸುತ್ತಿದ್ದ. ಓಗಾಂಡಾ ಅಳುತ್ತಲೇ ಇದ್ದಳು ಹೆದರಿಕೆಯಿಂದ. ಆನಂದದಿಂದ ಓಸಿಂಡಾ ಅವಳನ್ನು ಅಪ್ಪಿ ಧೈರ್ಯ ಹೇಳುತ್ತಲೇ ಇದ್ದ. ದೂರದಲ್ಲಿ ದಿಗಂತದಲ್ಲಿ ಎಲ್ಲೋ ಮಿಂಚು ಸಳ್ ಎಂದಿತು. ಆ ದಿನ ರಾತ್ರಿ ಮಳೆ ಸುರಿಯಿತು, ಸತತವಾಗಿ, ಧಾರಾಕಾರವಾಗಿ ಮಳೆ ಹುಯ್ಯಿತು. ಆ ಶತಮಾನದಲ್ಲಿಯೇ ಕಂಡರಿಯದಂಥ ಮಳೆ ಕೇಳರಿಯದಂಥ ಮಳೆ! ●

*ತಂಜಾವೂರಿನ ಬೃಹದೀಶ್ವರ ದೇವಸ್ಥಾನದ ಭವ್ಯ ಕಟ್ಟಡ, ಅಲ್ಲಿಯ ಬೃಹತ್ ಈಶ್ವರಲಿಂಗಗಳು ಪ್ರವಾಸಿಗರನ್ನು ಆಕರ್ಷಿಸುತ್ತವೆ. ಈ ದೇವಾಲಯದ ಉತ್ತರ ಭಾಗದ ವಿಮಾನ ಗೋಪುರದಲ್ಲಿ ಒಂದರ ಕೆಳಗೊಂದರಂತೆ ನಾಲ್ಕು ಮನುಷ್ಯಾಕೃತಿಗಳಿವೆ. ಅತಿ ಕೆಳಗಿರುವ ಮನುಷ್ಯಾಕೃತಿಯಲ್ಲಿ ನಾವು ಪಾಶ್ಚಾತ್ಯ ಉಡುಪು ತೊಟ್ಟ, ಮುಖ್ಯವಾಗಿ ಹ್ಯಾಟ್ ಧರಿಸಿರುವ ವಿದೇಶೀಯನನ್ನು ಕಾಣಬಹುದು.*

*ಸ್ವಾರಸ್ಯವೆಂದರೆ ಇಂಡೋಚೀನಾದ ಇತಿಹಾಸ ತಜ್ಞರು ಈ ಕೆತ್ತನೆಯು ವೆನಿಸ್‌ನಿಂದ ಪೂರ್ವಾರ್ಧ ಗೋಲದಲ್ಲಿ ಸಂಚರಿಸಿದ ಮಾರ್ಕೋ ಪೋಲೋನದೆಂದು ತೀರ್ಮಾನಿಸಿದ್ದಾರೆ.*

**- ಕೋಳಿವಾಡ ಕೃಷ್ಣಮೂರ್ತಿ**

# 'ಓಂ'ಕಾರದ ರಹಸ್ಯ

ವಿಶ್ವವು ಶಬ್ದಮಯವಾಗಿದೆ. ಅರ್ಥಾತ್ ಅದು ಸದಾ ಸರ್ವತ್ರ ನಾದ, ಕಂಪನಗಳಿಂದ ವ್ಯಾಪ್ತವಾಗಿದೆ. ಸೃಷ್ಟಿಪೂರ್ವದಲ್ಲಿ ತಮಸ್ಸಿನ ಮೇಲೆ ತಮಸ್ಸು ಕವಿದಿತ್ತು; ಅನಂತರ ಅಲ್ಲಿ ಮೊದಲು ಶಬ್ದ ಉದ್ಭವವಾಯಿತು ಎಂದೂ ಈ ದೈವೀಶಬ್ದ ಸಾಧಕರಿಗೆ ಅನುಭವಗಮ್ಯವಾಗಿರುವುದೆಂದೂ ಬೈಬಲ್ ಹಾಗೂ ಇತರ ಧರ್ಮ ಗ್ರಂಥಗಳು ಹೇಳುತ್ತವೆ.

ಆದರೆ ಜ್ಞಾನಯೋಗದಲ್ಲಿ ಸೃಷ್ಟಿಯ ರಹಸ್ಯವನ್ನೆಲ್ಲ ವಿಶ್ಲೇಷಿಸಲಾಗಿದೆ. ಜ್ಞಾನಯೋಗಿಗಳನ್ನು ಸಿದ್ಧಪುರುಷರೆಂದು ಕರೆಯಲಾಗುತ್ತಿದೆ. ಈ ಸಿದ್ಧಪುರುಷರು ಶ್ರವಣ, ಮನನ ಹಾಗೂ ನಿಧಿಧ್ಯಾಸಗಳ ಮೂಲಕ ಅನೇಕ ವರ್ಷ ತಪಸ್ಸು ಮಾಡಿ ಆಧ್ಯಾತ್ಮಿಕ ಜ್ಞಾನವನ್ನು ಕರಗತ ಮಾಡಿಕೊಂಡು ಅದನ್ನು ಶಬ್ದಮುಖೇನ ಶಿಷ್ಯರಿಗೆ ಉಪದೇಶಿಸಿದ್ದಾರೆ. ಈ ಶಿಷ್ಯರಾದರೂ ಈ ಮಂತ್ರಮಯ ಶಬ್ದಗಳ ಶ್ರವಣ, ಮನನ, ನಿಧಿಧ್ಯಾಸಗಳ ಮೂಲಕ ಗುರುಗಳ ಜ್ಞಾನವನ್ನು ತಾವೂ ಪಡೆದುಕೊಂಡರು. ಹೀಗೆ ಅವಗತವಾದ ಜ್ಞಾನವನ್ನು ವೇದಗಳಲ್ಲಿ ಕಾಯ್ದಿರಿಸಲಾಗಿದೆಯಲ್ಲದೆ ತಲೆತಲಾಂತರಗಳಿಂದ ಅದನ್ನು ಉಳಿಸಿಕೊಂಡು ಬರಲಾಗಿದೆ. ಇದೇ ಇಂದು ಹಿಂದೂ ಧರ್ಮವೆಂದು ಗುರುತಿಸಲ್ಪಡುವ ಸನಾತನ ಧರ್ಮದ ಮೂಲ.

ಬೈಬಲ್, ಖುರ್‌ಆನ್, ತಾಲ್ಮುದ್ ಹಾಗೂ ವೇದಗಳಂತಹ ಎಲ್ಲ ಪವಿತ್ರ ಗ್ರಂಥಗಳೂ ಶಬ್ದಮಯವಾಗಿವೆ. ರಾಮ, ಕೃಷ್ಣ, ಕ್ರಿಸ್ತ ಮೊದಲಾದ ಕೆಲವು ಶಬ್ದಗಳು ಮನಸ್ಸಿನ ಮೇಲೆ ಅಪಾರ ಪ್ರಭಾವ ಬೀರುತ್ತವೆ. ಈ ಎಲ್ಲ ಶಬ್ದಗಳು ಸಾಂಕೇತಿಕವಾಗಿದ್ದರೂ ಸಕಲ ಸೃಷ್ಟಿಗೂ ಮೂಲಾಧಾರವಾದ ಓಂಕಾರವೊಂದೇ ಅತ್ಯಂತ ಪವಿತ್ರವೆಂದು ವೇದಗಳು ಏಕಕಂಠದಿಂದ ಘೋಷಿಸುತ್ತವೆ.

ಓಂಕಾರವೇ ಬ್ರಹ್ಮ. ಅದು ಆದಿ ವ
ಶಬ್ದ.

ಹಾಗಾದರೆ ಓಂಕಾರದಿಂದಲೆ ಎಲ್ಲ
ಗಳೂ ಶಬ್ದಗಳೂ ಉದ್ಭವಿಸಿದವೆ?
ಜಿಜ್ಞಾಸೆ ಇಲ್ಲಿ ಸ್ವಾಭಾವಿಕವಾಗಿಯೆ ವ್ಯಕ್ತ
ತ್ತದೆ.

ಓಂಕಾರದ ಗುಣಗಳನ್ನು ವೈಜ್ಞಾನಿಕ
ಗ್ರಹಿಸಲು ಪ್ರಯತ್ನಿಸಿದರೆ ಆ ಮೂಲಕ
ರದ ಗುಣಗಳನ್ನು ತಿಳಿದುಕೊಳ್ಳಲು ಸುಲ
ಗುವುದು. ಓಂಕಾರದಲ್ಲಿ **ಅ ಉ ಮ**
ಮೂರು ಅಕ್ಷರಗಳಿದ್ದು ಅವು ಸೃಷ್ಟಿ,
ಲಯಗಳನ್ನು ಪ್ರತಿನಿಧಿಸುವವು. ಹಿಂದೂಧ
ದಲ್ಲಿ ಈ ಕಾರ್ಯಗಳ ಅಧಿದೈವತಗ
ಬ್ರಹ್ಮ, ವಿಷ್ಣು, ಮಹೇಶ್ವರರೆಂದು ಗುರುತಿ
ಗಿದೆ. ಈ ಮೂರು ಅಕ್ಷರಗಳು ಒಂದಾಗಿ ಅ

ಡಾ. ದಿನಕರ ಬಿ.ರೈ

ದನಾದ ಓಂಕಾರ ಜನ್ಮ ತಾಳುತ್ತದೆ. ಅಥಾ
ಒಂದೇ ತತ್ವವು ಮೂರಾಗಿ, ಮೂರೂ ಒ
ಗುತ್ತದೆ.

ನಾವು ಬಾಯ್ತೆರೆದು ನಿಃಶ್ವಸಿಸುವಾಗ
ಸ್ವರ ಉದ್ಭವವಾದರೆ ಬಾಯಿ ಮುಚ್ಚಿದ
'ಮ' ಸ್ವರ ಹುಟ್ಟುತ್ತದೆ. ಗಂಟಲಿನಿಂದ
ಯವರೆಗೆ ಅಕಾರವು ಹೊರಹೊಮ್ಮುವ ಮ
ತರ ಸ್ವರವೇ ಉ ಎನ್ನಿಸಿಕೊಳ್ಳುತ್ತದೆ. ಇ
ಒಂದು ಸೃಷ್ಟಿಕಲ್ಪದ ಕಾಲಾವಧಿಯಾಗಿದೆ. ಆ
ನಿಕ ಭೌತಶಾಸ್ತ್ರಜ್ಞರು ಕಾಲವು ಸಾಪೇಕ್ಷವಾ
ಯೆಂದು ಸಿದ್ಧಮಾಡಿದ್ದಾರೆ.

ವ್ಯಾಕರಣಶಾಸ್ತ್ರಜ್ಞರ ಪ್ರಕಾರ ಅಕಾರ
ಮೂಲ ಸ್ವರ. ಉಳಿದೆಲ್ಲ ಸ್ವರಗಳು ಅ
ವಿಕಾರರೂಪಗಳು. ಬಾಯಿಯಲ್ಲಿನ ವಿ
ಸ್ಥಾನಗಳಿಗೆ ಉಸಿರಿನ ಸ್ಪರ್ಶವಾಗುವುದರಿ
ವಿವಿಧ ಸ್ವರಗಳು ಉದ್ಭವಿಸುತ್ತವೆ. ಭಾಷೆಗೆ

ನಗಳೇ ಮೂಲ. ಪರಿಸ್ಥಿತಿ ಹೀಗಿರುವಾಗ ಭಾಷೆಗಳೂ ಓಂಕಾರವೆಂಬ ಸಾಂಕೇತಿಕ ನಾದದಿಂದ ಹುಟ್ಟಿವೆಯೆಂದು ಹೇಳ ಬಲ್ಲವೆ?

**ಓಂ ಅಥವಾ ಅ, ಉ, ಮ**
**ಅದು ನನ್ನ ತಾಯಿಯಲ್ಲಿದೆ**
**ಅದು ನನ್ನ ತಂದೆಯಲ್ಲಿದೆ**
**ಅದು ಆದ್ಯಕ್ಷರದಲ್ಲಿದೆ, ಅಂತ್ಯಾಕ್ಷರದಲ್ಲಿದೆ**
**ಅ ದಿಂದ ಕ್ಷದವರೆಗಿನ ಅಕ್ಷರಮಾಲೆ ಯಲ್ಲಿದೆ**
**ಭೃಂಗದ ಝೇಂಕಾರದಲ್ಲಿ ಅದರದೇ ಘರ್ಷಣೆ**
**ಸಾಗರದ ತೆರೆತೆರೆಗಳಲ್ಲಿಯೂ ಅದರದೇ ಗರ್ಜನೆ**
**ಅದೇ ಮರಮರಗಳ ಮರ್ಮರದಲ್ಲಿದೆ**
**ಓಂಕಾರವೇ ವೇದ; ಓಂಕಾರವೇ ನಾದ**
**ಓಂಕಾರವೇ ವಾದ, ಓಂಕಾರವೇ ಶಬ್ದ**
**ಅದುವೆ ಅಪ್ರತಿಹತ ಸ್ಪರ್ಶ, ರೂಪ, ರಸ**
**ಹಾಗೂ ಸರ್ವವ್ಯಾಪಿ ಗಂಧ.''**

ದೂ ಓಂ, ಇದೂ ಓಂ, ಓಂದಿಂದ ಓಂ ಯಿಸುತ್ತದೆ. ಓಂದಿಂದ ಓಂ ಕಳೆದರೆ ರವೇ ಉಳಿಯುತ್ತದೆ. ಇದನ್ನೇ ಈಶಾವಾ ಪನಿಷತ್ತಿನ ಶಾಂತಿಮಂತ್ರ ಸುಂದರವಾಗಿ ಹೇಳುತ್ತದೆ:

**''ಓಂ ಪೂರ್ಣಮದ ಪೂರ್ಣಮಿದಂ**
**ಪೂರ್ಣಾತ್ ಪೂರ್ಣಮುದಚ್ಯತೇ।**
**ಪೂರ್ಣಸ್ಯ ಪೂರ್ಣಮಾದಾಯ**
**ಪೂರ್ಣಮೇವಾವ ಶಿಷ್ಯತೇ।।''**

ಓಂ ಅದು ಪೂರ್ಣವಾಗಿದೆ. ಇದು ಪೂರ್ಣ ದೆ. ಪೂರ್ಣದಿಂದ ಪೂರ್ಣವು ಉದಯಿ ಪೂರ್ಣದಿಂದ ಪೂರ್ಣವನ್ನು ಕಳೆದರೆ ರ್ಣವೇ ಉಳಿಯುವುದು.)

ಾರತದ ಗಣಿತಜ್ಞರು ಈ ಮಂತ್ರವನ್ನು ಾಗ, ಶೂನ್ಯತತ್ವವನ್ನು ಗ್ರಹಿಸಿದಾಗ ನವಕುಲಕ್ಕೆ ಜ್ಞಾನದ ದ್ವಾರವೇ ತೆರೆಯಿತು. ಗಣಿತಜ್ಞರು ಶೂನ್ಯತತ್ವವನ್ನು ಸೊನ್ನೆ (0) ರು ಸಂಕೇತಿಸಿದರು. ಮೊದಲು ಈ ಶೂನ್ಯ ಬರಿ ಚುಕ್ಕೆಯಿಂದ ಗುರುತಿಸಲಾಗುತ್ತಿತ್ತು. ಅನಂತರ ಅದು ವರ್ತುಲದ ಆಕಾರವನ್ನು ತಾಳಿತು. ಇದು ಎಲ್ಲ ರೂಪಗಳಿಗೂ ಶೂನ್ಯವೇ ಮೂಲವೆಂಬ ಕಲ್ಪನೆಗೆ ಕಾರಣವಾಯಿತು.

ಇದನ್ನು ಪ್ರತಿಪಾದಿಸುವ ಶೂನ್ಯವಾದಿಗ-ಳೆಂಬ ತತ್ವಜ್ಞಾನಿಗಳನ್ನು ಅಣುವಿನಿಂದ ವಿಶ್ವವು ಉದ್ಭವಿಸಿದೆಯೆಂದು ಪ್ರತಿಪಾದಿಸುವ ಆಧುನಿಕ ಭೌತಶಾಸ್ತ್ರಜ್ಞರಿಗೆ ಹೋಲಿಸಬಹುದು. ಆದರೆ ಶೂನ್ಯವಾದಿಗಳು ಆಧುನಿಕ ಭೌತಶಾಸ್ತ್ರಜ್ಞರಿಗಿಂತ ಒಂದು ಹೆಜ್ಜೆ ಮುಂದೆ ಹೋಗಿ ಅಣುವೂ ಶೂನ್ಯವಾಗಿದೆಯೆಂದು ವಾದಿಸುತ್ತಾರೆ. ಪ್ರತಿಯೊಂದು ಜಡವಸ್ತುವು ದೇಶ-ಕಾಲಗಳಿಂದ ಸೀಮಿತವಾಗಿದೆಯೆಂದು ಐನ್‌ಸ್ಟೈನ್ ವಾದಿಸುವಾಗ ಈ ಶೂನ್ಯವಾದದ ಹೊಳಹು ಪಡೆದಂತೆ ಅನಿಸುತ್ತದೆ.

'ಶೂನ್ಯ' ಸಂಕೇತ ಸೃಷ್ಟಿಯ ಮಹತ್ವವನ್ನು ಎಷ್ಟು ಹೇಳಿದರೂ ಅತಿಶಯೋಕ್ತಿಯಾಗುವುದಿಲ್ಲ. ಅದು 'ನಿರ್ವಾಣ'ವನ್ನು ಸಚೇತನಗೊಳಿಸಿತಂತೆ. ''ಗಣಿತದ ಬುಧ್ಯಾತ್ಮಕ ಪ್ರಗತಿಗೆ 'ಶೂನ್ಯ'ದಷ್ಟು ಉಳಿದ ಯಾವ ಉತ್ಪತ್ತಿಯೂ ಕಾರಣವಾಗಿಲ್ಲ,'' ಎಂದು ಪ್ರೊ. ಹಾಲ್‌ಸ್ಟೆಡ್ ಹೇಳುತ್ತಾರೆ.

ಓಂಕಾರವು ತನ್ನ ಪರಿಪೂರ್ಣ ಸ್ವರೂಪದಲ್ಲಿ ಯಾವುದೇ ಒಂದು ಶಬ್ದವಾಗುವುದಿಲ್ಲ. ಆದರೂ ಅದರಲ್ಲಿ ಭೂತ, ವರ್ತಮಾನ ಹಾಗೂ ಭವಿಷ್ಯತ್ತಿನ ಎಲ್ಲ ಶಬ್ದಗಳೂ ನಿಹಿತವಾಗಿವೆ.

ಮಾಂಡೂಕ್ಯೋಪನಿಷತ್ತಿನ ಪ್ರಕಾರ ಸಮಗ್ರ ಜಗತ್ತೇ ಓಂಕಾರ ಸ್ವರೂಪ. ಭೂತ, ವರ್ತಮಾನ, ಭವಿಷ್ಯತ್ತೂ ಅದೇ. ತ್ರಿಕಾಲಾತೀತವಾದದ್ದೂ ಓಂಕಾರವೇ.

**''ಓಂ ಇತ್ಯೇಕಾಕ್ಷರಮಿದಂ ಸರ್ವಂ**
**ತಸ್ಯೋಪವ್ಯಾಖ್ಯಾನಂ**
**ಭೂತಂ ಭವದ್ ಭವಿಷ್ಯದಿತಿ ಸರ್ವಮೋಂ ಕಾರ ಏವ**
**ಯಚ್ಚಾನ್ಯತ್ ತ್ರಿಕಾಲಾತೀತಂ ತದಪಿ ಓಂಕಾರ ಏವ.''**

**ಕಸ್ತೂರಿ**

ಅನಿರ್ವಚನೀಯವಾದ ಓಂಕಾರವೇ ಆತ್ಮ. ಅದೇ ಬ್ರಹ್ಮ, ಅದರಲ್ಲಿಯೇ ಪ್ರಪಂಚವು ಲಯವಾಗುತ್ತದೆ. ಅದು ಶಿವವೂ ಅದ್ವೈತವೂ ಆಗಿದೆ.

**"ಅವ್ಯವಹಾರ್ಯ: ಪ್ರಪಂಚೋಪಶಮ:**
**ಶಿವ: ಅದ್ವೈತ: ಏವಂ ಓಂಕಾರ ಆತ್ಮೈವ"**

ಕಪಿಲರಿಂದ ಪ್ರವರ್ತಿತವಾದ ಸಾಂಖ್ಯ-ದರ್ಶನವು ವಿಶ್ವವು ಕೇವಲ ನಾಮರೂಪವೆಂದು ಹೇಳುತ್ತದೆ. ಈ ತತ್ವವನ್ನು ವ್ಯಕ್ತಿರೂಪವಾದ ಪಿಂಡಾಂಡಕ್ಕೂ ಮಾನವ ಮನಸ್ಸಿಗೂ ಅನ್ವಯಿಸಿದರೆ ನಾಮರೂಪಗಳಿಲ್ಲದೆ ಯಾವುದೇ ವಿಚಾರ ಹುಟ್ಟುವುದಿಲ್ಲವೆನ್ನುವುದನ್ನು ಕಂಡುಕೊಳ್ಳುತ್ತೇವೆ. ಎಲ್ಲ ವಿಚಾರಗಳಿಗೆ ನಾಮವೇ ಬೀಜ, ರೂಪವೇ ಬಹಿರಂಗ. ವ್ಯಕ್ತಿಗೆ ಈ ತತ್ವ ಅನ್ವಯಿಸುತ್ತಿದ್ದರೆ ವಿಶ್ವಕ್ಕೂ ಬ್ರಹ್ಮಾಂಡಕ್ಕೂ ಇದೇ ತತ್ವ ಅನ್ವಯಿಸಬೇಕು. ಅಂದರೆ ಈ ಎಲ್ಲ ವಿಶ್ವದ ಹಿಂದೆ ಒಂದು ವಿಚಾರ, ಸಂಕಲ್ಪ, ಅರ್ಥ ಇದ್ದು ಅದರಿಂದಲೇ ಉಳಿದೆಲ್ಲ ವಿಚಾರ, ಸಂಕಲ್ಪ, ಅರ್ಥಗಳೂ ಉದ್ಭವಿಸುತ್ತವೆ.

ಇಲ್ಲಿ **ಸ್ಫೋಟವಾದ** ಪ್ರಸ್ತುತವಾಗುತ್ತದೆ. ಮೀಮಾಂಸಾಶಾಸ್ತ್ರವು ಸ್ಫೋಟವನ್ನು ಓಂಕಾರದಿಂದ ಅಭಿನ್ನವೆಂದು ಪ್ರತಿಪಾದಿಸುತ್ತದೆ.

ಇಲ್ಲಿ ನಾವು ಚರ್ಚಿಸುತ್ತಿರುವ ನಾದವು ಬಾಹ್ಯಕಾರಣಗಳಿಂದ ಉದ್ಭವವಾಗುವಂತಹುದಲ್ಲ. ಉದಾಹರಣೆಗೆ, ನಾವು ಎರಡು ಅಂಗೈಗಳನ್ನು ಜೋರಾಗಿ ತಟ್ಟಿದರೆ ಚಪ್ಪಾಳೆಯ ಸದ್ದು ಉಂಟಾಗುತ್ತದೆ. ಆದರೆ ಈ ಸದ್ದು, ಈ ನಾದ ನಮ್ಮ ವ್ಯಕ್ತಿತ್ವದಲ್ಲಿ ಸ್ವರೂಪತಃ ಮೊದಲೇ ಇತ್ತು. ಚಪ್ಪಾಳೆ ತಟ್ಟಿದ್ದರಿಂದ ಅದು ಅಭಿವ್ಯಕ್ತವಾಯಿತು ಅಷ್ಟೆ. ಇಂಥ ಎಲ್ಲ ಬಾಹ್ಯಕಾರಣಗಳನ್ನೂ ತೆಗೆದು ಹಾಕಿದಾಗ ಘನವಾದ ಮೌನದ ನೆಲೆಗೆ ನಾವೆಲ್ಲ ತಲುಪುತ್ತೇವೆ. ಆ ಮೌನದಲ್ಲಿ ನಾವು ಧ್ಯಾನಮಗ್ನರಾದಾಗ 'ಸ್ಫೋಟ'ವನ್ನು ಕೇಳುತ್ತೇವೆ. ನಮ್ಮಲ್ಲಿ ಯಾರೂ ಈ ಸ್ಫೋಟವನ್ನು ಕೇಳದಿದ್ದರೂ ನಮ್ಮಲ್ಲಿ ಕೆಲವರಿಗಾದರೂ ಅದರ ಮಿಂಚಿನ ಹೊಳಹು ಕ್ಷಣಮಾತ್ರವಾದರೂ ದೊರಕಿರುತ್ತದೆ. ಆ ಕ್ಷ
ನಮಗೆ ಬಾಹ್ಯಪ್ರಜ್ಞೆ ಇರದಿರಬಹುದು.
ನಾವಾಗ ಪ್ರಜ್ಞಾಹೀನರಾಗಿರುವುದಿಲ್ಲ.
ಸ್ಫೋಟದಿಂದಲೆ - ಬಾಹ್ಯಕಾರಣ
ಉದ್ಭೂತವಾಗುವ ಅಥವಾ ಬಾಹ್ಯ
ಗಳನ್ನೇ ನಿಯಮಿಸುವ ಶಬ್ದಗಳು -
ವರ್ತಮಾನ, ಭವಿಷ್ಯತ್ತಿನ ಸಮಸ್ತ ಶಬ್
ಉದ್ಭವವಾಗುತ್ತವೆ.

ಸ್ಫೋಟಕ್ಕೂ ಮೂಲವಾದ ನಾ
ಓಂಕಾರ. ವಿಚಾರ ಹಾಗೂ ಶಬ್ದಗಳು ಅ
ಅರ್ಥ ಹಾಗೂ ಶಬ್ದಗಳು ಅವಿಭಾಜ
ದ್ದರೂ ವಿಚಾರಕ್ಕೆ ಅನೇಕ ಶಬ್ದಸಂಕೇತಗ
ಹುದು. ಹೀಗಾಗಿ ವಿಶ್ವಕ್ಕೆ ಕಾರಣವಾದ
ಅಥವಾ ಸಂಕಲ್ಪಕ್ಕೆ ಓಂಕಾರ ಪ್ರಾತಿನಿಧಿಕ
ಲಿಕ್ಕೂ ಇಲ್ಲ ಎಂದು ಯಾರಾದರೂ
ಬಹುದು.

ಈ ಎಲ್ಲ ಆಕ್ಷೇಪಕ್ಕೆ ಭಾರತೀಯ ತತ್ವ
ಹೀಗೆ ಉತ್ತರಿಸುತ್ತದೆ:

"ಸರ್ವವ್ಯಾಪ್ತವಾದದ್ದು ಓ
ಮಾತ್ರವೆ. ಸ್ಫೋಟವೇ ಎಲ್ಲ ಶಬ್ದಗ
ಉಪಾದಾನಕಾರಣವಾಗದಿದ್ದರೂ
ಯಾವುದೇ ಒಂದು ವ್ಯಕ್ತ ಶಬ್ದವಲ್ಲ. ಶ
ಗಿರುವ ಎಲ್ಲ ವಿಶಿಷ್ಟ ಗುಣಗಳನ್ನು ತೆಗೆದು
ಡರೆ ಉಳಿಯುವುದೇ ಮೂಲ ನಾದ.
ನಾದಬ್ರಹ್ಮ. ಎಲ್ಲ ನಾದಗಳೂ ಒಂದು ಮ
ನಾದದ ರೂಪಾಂತರಗಳು ಮಾತ್ರ.
ರೂಪಗಳನ್ನು ತೆಗೆದುಹಾಕಿದರೆ ಉಳಿಯು
ನಿತ್ಯನಾದ ಮಾತ್ರ. ಎಲ್ಲ ಮಹಾಪುರು
ಅವತಾರಿಗಳು, ವಿಜ್ಞಾನಿಗಳು, ಸಂಗೀತಕಾ
ಕಲಾವಿದರು ಆ ಮೌನದಲ್ಲಿ ಮುಳುಗಬಲ್ಲ
ಆ ಅಂತರಾಳದಿಂದಲೇ ತತ್ವಜ್ಞಾನ, ಆದ
ಕಲ್ಪನೆ ಹೀಗೆ ಸ್ಫೋಟವನ್ನು ಒಂದಿಲ್ಲೊ
ರೂಪದಲ್ಲಿ ಅಭಿವ್ಯಕ್ತಿಗೊಳಿಸಬಲ್ಲರು.
ವಾಗಿಯೆಂದರೆ ಈ ಎಲ್ಲ ಬಾಹ್ಯಾಭಿವ್ಯಕ್ತಿಗ
ಓಂಕಾರವೆ. ಆದ್ದರಿಂದಲೆ **ಓಂ ತತ್**
ಅರ್ಥಾತ್ **ಓಂ** ಎಂದರೆ **ಸತ್ಯ** ಎಂದು ಹಿರಿಯ
ಹೇಳಿರುವುದು."

# ಸೊಹನಿ-ಮಹಿವಾಲ್:

# ಅಪೂರ್ವ ಪ್ರಣಯಿಗಳು



ವೃಷಭೇಂದ್ರಯ್ಯ

ಪಂಜಾಬಿನ ಚಿನಾಬ್ ನದಿ ತೀರದ ಗುಜರಾತ್ ಜಿಲ್ಲೆಯಲ್ಲೊಬ್ಬ ಕುಂಬಾರ. ಹೆಸರು ತೊಲಾ. ಕುಶಲ ಕುಂಭಕಲಾಕಾರ. ನೆರೆಮನೆಯಿಂದ ಮೊದಲ್ಗೊಂಡು ಅರಮನೆಯವರೆಗೂ ಆತನ ಕಲೆಗೆ ಮನ್ನಣೆಯ ಮಣೆ.

ಸೊಹನಿ ಆತನ ಏಕಮಾತ್ರ ಪುತ್ರಿ. ಪರಮ ಸುಂದರಿ. ''ಮನೆಯ ಬೆಳಕು'' ಆಕೆ ತಂದೆಯ ಪಾಲಿಗೆ. ಸುತ್ತಲಿನ ಹತ್ತೂರು ದಾಟಿ ಹೋದರೂ ಸೌಂದರ್ಯಕ್ಕೆ ಅವಳದೆ ಉಪಮೆ. ತೊಲಾನ ಹೆಸರು-ಸಿರಿವಂತಿಕೆ ಹೆಚ್ಚಲು ಸೊಹನಿಯ ಸೌಂದರ್ಯ ನೀಡಿದ ವಂತಿಗೆ ದೊಡ್ಡದು. ದೂರ ದೂರದ ಊರುಗಳಿಂದ ಗಿರಾಕಿಗಳು ವ್ಯಾಪಾರಕ್ಕೆಂದು ತೊಲಾನ ಮನೆಗೆ ಬರತೊಡಗಿದರು. ಸೊಹನಿಯ ಸೌಂದರ್ಯ ದರ್ಶನಲಾಭ ಪಡೆಯುವುದು ಅವರ ಒಳಗಿನ ಉದ್ದೇಶ.

ಏಳು ವರ್ಷದ ಎಳವೆಯಲ್ಲೆ ಕುರಾನ್-ಶರೀಫ್ ಓದತೊಡಗಿದ್ದಳು ಸೊಹನಿ. ಆ ಬಾಲ ಪ್ರತಿಭೆಗೆ ಮಾರುಹೋಗಿದ್ದರು ಮೌಲವಿಗಳು. ಹದಿನಾಲ್ಕನೆಯ ವಯಸ್ಸಿಗೆಲ್ಲ ಸೊಹನಿ ಮನೆಯ ಜವಾಬ್ದಾರಿಯನ್ನು ಹೊರಲು ಸಮರ್ಥಳಾದಳು. ಅಪ್ಪ-ಅಮ್ಮಂದಿರಿಗೆ ಇದಕ್ಕಿಂತ ದೊಡ್ಡ ಸಮಾಧಾನ ಇನ್ನಾವುದು?

★

ಬುಖಾರಾ ಎಂಬೊಂದು ನಗರದಲ್ಲಿ ಅಲಿ ಮಿರಜಾ ಎಂಬ ಸಿರಿವಂತನೊಬ್ಬನಿದ್ದ. ಅಷ್ಟೈಶ್ವರ್ಯಗಳ ಒಡೆಯನಾದರೂ ಸಂತಾನಶ್ರೀಯ

*'ಸೊಹನಿ-ಮಹಿವಾಲ್' ಪಂಜಾಬಿನ ಅತಿ ಪ್ರಸಿದ್ಧ ಲೋಕಕಥೆ. ಇದನ್ನು ಅಲ್ಲಿಯ ಜಾನಪದ ಕವಿಗಳನೇಕರು ತಮ್ಮ ಲೆಕ್ಕಣಿಯ ಶ್ರೀಮಂತಿಕೆ ಹೆಚ್ಚಿಸಿಕೊಳ್ಳಲು ಬಳಸಿಕೊಂಡಿದ್ದಾರೆ. ಅಂತೆಯೆ ಸೊಹನಿ-ಮಹಿವಾಲರ ಪ್ರಣಯದ ಕಥೆಯ ಅನೇಕ ಅವತರಣಿಕೆಗಳು ದೊರೆಯುತ್ತವೆ. ಈ ಪೈಕಿ ಫಜಲ್‌ಶಾಹ್ ಎಂಬವನಿಂದ ಹೇಳಲ್ಪಟ್ಟ ಕಥೆ 'ತುಂಬ ಪ್ರಾಮಾಣಿಕ'ವೆಂದು ಮಾನ್ಯವಾಗಿದೆ. ಸುಮಾರು ನೂರೈವತ್ತು ವರ್ಷಗಳ ಹಿಂದೆ ಫಜಲ್‌ಶಾಹ್ ಹೇಳಿದ ಸೊಹನಿ-ಮಹಿವಾಲರ ಕಥೆಯನ್ನಾಧರಿಸಿದ್ದು ಈ ಲೇಖನ.*

ಕೊರತೆಯಿಂದ ಕೊರಗಿದವ. ತನ್ನ ಪಶ್ಚಾತ್ ಯಾರು ಈ ಸಿರಿವಂತಿಕೆಯನ್ನು ಸಂಬಾಳಿಸುವವರು? ಇದೇ ಚಿಂತೆಯಲ್ಲಿ ಆತ ಊರೂರು ಅಲೆಯತೊಡಗಿದ. ಫಕೀರನೊಬ್ಬನ ದರ್ಶನ-ಆಶೀರ್ವಾದದ ಫಲವಾಗಿ ಮಿರಜಾನ ಪತ್ನಿ ಗಂಡುಮಗುವೊಂದಕ್ಕೆ ಜನ್ಮವಿತ್ತಳು. ಇಜ್ಜತ ಬೇಗ್ ಎಂದು ಹೆಸರಿಟ್ಟು ಅಚ್ಚೆಯಿಂದ ಮಗನನ್ನು ಬೆಳೆಸಿದ ಅಲಿ ಮಿರಜಾ. ಓದು-ಬರೆಹದಲ್ಲಿ ಮಾತು-ಕತೆಯಲ್ಲಿ ಇಜ್ಜತ ಬೇಗ್ ತುಂಬ ನಿಷ್ಣಾತನೆನಿಸಿದ. ಕುರಾನ್ ಅನ್ನು ಬಾಯಿಪಾಠದಿಂದ ಹೇಳುತ್ತಿದ್ದ ಹುಡುಗ. ವಾದ-ಚರ್ಚೆಗಳ ಸಂದರ್ಭದಲ್ಲಿ ಇಜ್ಜತ ಬೇಗನಿಗೇ ಮೊದಲ ಬಹುಮಾನ. ಬಿಲ್ಗಾರಿಕೆಯಲ್ಲಿ ಬಲ್ಲಿದ, ಕುದುರೆ ಸವಾರಿಯಲ್ಲಿ ಖ್ಯಾತ, ಈಟಿಯೆಸೆತದಲ್ಲಿ ಈತ ಅಸಮ.

ಭಾರತದ ಅನೇಕ ವೀರರ ಕಥೆಗಳನ್ನು ಬಾಲ್ಯದಲ್ಲೇ ಕೇಳಿದ್ದ. ಆ ದೇಶವನ್ನೊಮ್ಮೆ ನೋಡುವ ಇಚ್ಛೆಯನ್ನು ಬೆಳೆಸಿಕೊಂಡ ಇಜ್ಜತ ಬೇಗ್. ವ್ಯಾಪಾರನಿಮಿತ್ತ ಭಾರತಕ್ಕೊಮ್ಮೆ ಭೆಟ್ಟಿ ಕೊಡುವ ತನ್ನಿಂಗಿತವನ್ನು ತಂದೆಯೆದುರು ಹೇಳಿಕೊಂಡ. ಅವಶ್ಯಕ ಸಾಮಗ್ರಿಗಳನ್ನೂ, ಅನೇಕ ಕಾಣಿಕೆಗಳನ್ನೂ, ಅಪಾರ ಧನರಾಶಿಯನ್ನೂ ಒಂಟೆಗಳ ಮೇಲೆ ಹೇರಿ, ಅವನ್ನೆಲ್ಲ ಮಗನ ಸುಪರ್ದಿಗೊಪ್ಪಿಸಿ ''ಯಶಸ್ವಿಯಾಗಿ ಮರಳು'' ಎಂದು ಆಶೀರ್ವದಿಸಿ ಅವನನ್ನು ಬೀಳ್ಕೊಟ್ಟ ಅಲಿ ಮಿರಜಾ.

★

ದಿಲ್ಲಿ ಮೊದಲಾದ ಪ್ರದೇಶಗಳನ್ನೆಲ್ಲ ಸುತ್ತಿ ಲಾಹೋರದೆಡೆ ಹೊರಟಿತು ಇಜ್ಜತ ಬೇಗನ ಕಾರವಾನು. ಚಿನಾಬ್ ನದಿತೀರ ಪ್ರದೇಶದ ಅತಿಥಿಗೃಹವೊಂದರಲ್ಲಿ ಆತ ಬೀಡುಬಿಟ್ಟ. ಭಾರತೀಯ ಸಂಗೀತದ ಬಗ್ಗೆ ಇಷ್ಟರಲ್ಲೇ ಇಜ್ಜತ ಬೇಗನಿಗೆ ಆಸಕ್ತಿಯುಂಟಾಗಿತ್ತು. ತಾನಿದ್ದಲ್ಲೇ ಒಂದು ಸಂಗೀತಗೋಷ್ಠಿಯನ್ನೇರ್ಪಡಿಸಿದ. ಮರುದಿನದಿಂದ, ಅಲ್ಲಿ ಹಾಜರಿದ್ದ ಸಂಗೀತಗಾರರಿಗಿಂತ ಆ ಗೋಷ್ಠಿಯನ್ನೇರ್ಪಡಿಸಿದ್ದ ಇಜ್ಜತ ಬೇಗನೇ ಎಲ್ಲರ ಮನೆಮಾತಾಗಿ ಬಿಟ್ಟ. ಚಿನಾಬ್ ಹರಿಯುವೆಡೆಯಲ್ಲೆಲ್ಲ ಇಜ್ಜತ ಬೇಗನ ಹೆಸರು ಕೇಳಿಬರತೊಡಗಿತು. ಆತನನ್ನು ಭೆಟ್ಟಿಯಾಗಲು ಬರುವವರ ಸಂಖ್ಯೆಯೂ ಹೆಚ್ಚಾಗತೊಡಗಿತು. ಅವರನ್ನೆಲ್ಲ ಇಜ್ಜತ ಬೇಗ್ ಆ ಪ್ರದೇಶದ 'ಪ್ರಸಿದ್ಧಿ'ಗಳ ಕುರಿತು ಕೇಳುತ್ತಿದ್ದ. ತೊಲಾ ಕುಂಬಾರನ ಕುಶಲ ಕುಂಭ ಕಲೆಯ ಬಗ್ಗೆಯೂ ಇಜ್ಜತನಿಗೆ ಗೊತ್ತಾಯಿತು. ಕೂಡಲೇ ಆತ ತನ್ನ ಸೇವಕನೊಬ್ಬನನ್ನು ತೊಲಾನ ಬಳಿ ಕಲಾತ್ಮಕ ಮಡಕೆಗಳ ಖರೀದಿಗೆಂದು ಕಳಿಸಿದ.

ಆ ಸೇವಕ ಬಂದಾಗ ತೊಲಾ ಕೆಲಸದಲ್ಲಿದ್ದ. ಓಗಾಗಿ ಮಗಳು ಸೊಹನಿಯನ್ನು ಕರೆದು ಬಂದಾತನಿಗೆ ಮಡಕೆಗಳನ್ನು ತೋರಿಸಲು ಹೇಳಿದ. ಆಗಂತುಕ ಅಚ್ಚರಿಗೊಂಡ, ಮಡಕೆಗಳನ್ನು ಕಂಡು. ವಿಸ್ಮಯಗೊಂಡ ಈ ಸುಂದರ ಬೊಂಬೆಯನ್ನು ಕಂಡು. ಬಹಳ ಹೊತ್ತಿನವರೆಗೂ ಮಡಕೆ ಪಾತ್ರೆಗಳನ್ನು ನೋಡಿ, ಪ್ರಶಂಸಿಸಿದ ಆತ ಕೊನೆಗೊಂದು ಸುಂದರ ಸುರಾಪಾತ್ರೆ

---

'ಕಾದಂಬಿನಿ'ಯಿಂದ ಸಾಭಾರ

---

ಯನ್ನು ಖರೀದಿಸಿ ಒಡೆಯನ ಬಳಿಗೋಡಿದ.

ಆ ಸುರಾಪಾತ್ರೆಯನ್ನು ಕಂಡ ಇಜ್ಜತನಿಗೆ ಅದು ಸುರಲೋಕದ್ದೆಂಬ ಭ್ರಮೆಯುಂಟಾಯಿತು. ಅಬ್ಬಾ! ಅದನ್ನು ತಿರುಗಿಸಿ, ಮುಟ್ಟಿ, ತಟ್ಟಿ, ಮುದ್ದಿಸಿ ನೋಡಿಯೇ ನೋಡಿದ: "ವಾಹ್, ನಿಜವಾಗಿಯೂ ಕುಶಲಿ ಈ ಸುರಾಪಾತ್ರೆಯನ್ನು ಸೃಷ್ಟಿಸಿದಾತ. ಆತನನ್ನೊಮ್ಮೆ ಕಾಣಲೇಬೇಕು ನಾನು" ಎಂದ.

ಆಗ ಸೇವಕ, "ಒಡೆಯ, ತೊಲಾ ಸೃಷ್ಟಿಸಿದ ಅತ್ಯಂತ ಸುಂದರವಾದ ಇನ್ನೊಂದು ವಸ್ತು ಆತನ ಮನೆಯಲ್ಲಿದೆ. ನೀವು ಅದನ್ನು ಮಾತ್ರ ನೋಡಲೇಬೇಕು," ಎಂದ.

"ಒಗಟಿನಂತೆ ಹೇಳಬೇಡ. ಏನದು, ಬಿಡಿಸಿ ಹೇಳು."

"ಒಡೆಯ. ಅದೊಂದು ಅವರ್ಣನೀಯ ಸೌಂದರ್ಯದ ಜೀವಂತ ಗೊಂಬೆ. ನೋಡಿಯೇ ಅರಿಯಬೇಕು - ಅಳೆಯಬೇಕು ಆ ಲಾವಣ್ಯವನ್ನು."

ಇಜ್ಜತ ಬೇಗನಿಗೀಗ ಕಾತರ ಹೆಚ್ಚಿತು. "ಸರಿ, ನಾನೇ ಹೋಗುತ್ತೇನೆ," ಎಂದವನೇ ತೊಲಾನ ಮನೆಯನ್ನು ತಲುಪಿದ. ಆ ಸಮಯದಲ್ಲಿ ತೊಲಾ ಭಟ್ಟಿ ಹೊತ್ತಿಸುವ ಗಡಿಬಿಡಿಯಲ್ಲಿದ್ದ. ಬಂದ ಗಿರಾಕಿಯನ್ನು ವ್ಯಾಪಾರಿಗಳೆಂದೂ ಹಾಗೆಯೆ ಕಳಿಸುವುದಿಲ್ಲ. ಸೊಹನಿಯೆ ಮತ್ತೆ ಪಾತ್ರೆಗಳನ್ನು ತೋರಿಸಲಣಿಯಾದಳು.

ಅಂಗಡಿಯಲ್ಲಿ ಕೂತಿದ್ದ ಇಜ್ಜತ ಬೇಗ. ಆ ಕುಂಭಕಲಾಸಾಮ್ರಾಜ್ಯದ ಯಾವ ವಸ್ತುವೂ ಅದ್ಭುತ ಅನಿಸಲಿಲ್ಲ ಅವನಿಗೆ. ತನ್ನ ಸೇವಕ ಬಣ್ಣಿಸಿದ್ದ ಸುಂದರಿಯ ವಿವಿಧ ರೂಪಗಳನ್ನಾತ ಊಹಿಸುತ್ತಿದ್ದಂತೆಯೇ ಮೋಡಗಳ ಮರೆಯಿಂದ ಕಂಡ ಪೂರ್ಣಚಂದ್ರನನ್ನು ನೋಡಿದಂತೆ ಅವಾಕ್ಕಾಗಿ ಕುಳಿತುಬಿಟ್ಟ ಆತ. ತೆರೆದ ಬಾಯಿ ತೆರೆದಂತೆಯೆ ಇತ್ತು; ಕಣ್ಣುಗಳು ಮಿಟುಕದ ಹಾಗೆ ಅದೇ ಆ ತನ್ನೆಡೆ ಸಾಗಿ ಬರುತ್ತಿರುವ ಸುಂದರಿಯನ್ನು ಸೆರೆಹಿಡಿಯುತ್ತಲಿದ್ದವು.

"ಏನು ಬೇಕು? ಹೂಜಿಯೆ, ಹರಿವಾಣವೆ, ಧೂಪದ ತಟ್ಟೆಯೆ?" ಬಂದಾತನನ್ನು ಕೇಳಿದಳು ಸೊಹನಿ.

ಆತನಿಗೆಲ್ಲಿ ಕೇಳೀತು?

ಆಕೆ ಮತ್ತೆ ಕೇಳಿದಳು.. ಮತ್ತೆ..

ಇಜ್ಜತ ಬೇಗ್ ಈಗ ಎಚ್ಚೆತ್ತ. ಸೊಹನಿ ಆತನ ಈ ಮೈಮರೆತನಕ್ಕೆ ನಕ್ಕಳು. ಆಕೆಯ ನಗು ಆತನಿಗೂ ಆಪ್ಯಾಯಮಾನ.

"ಹೂಂ ಏನು ಬೇಕು ಹೇಳಿ.." ಎಂದೆನ್ನುತ್ತ ಒಂದೊಂದೇ ಪಾತ್ರೆಯನ್ನು ತೆಗೆದು ತೋರಿಸತೊಡಗಿದಳು. ಈಗಲ್ಲಿ ಮಾತಿಗೆ ಕೆಲಸವೇ ಇರಲಿಲ್ಲ. ಆತ ಏನೊಂದು ಮಾತನಾಡದೆ ಆಕೆ ತೋರಿಸಿದ ಪಾತ್ರೆಗಳನ್ನೆಲ್ಲ ಖರೀದಿಸಿಬಿಟ್ಟ. ಅಷ್ಟೇ ಅಲ್ಲ ಆಕೆ ಹೇಳಿದ ಮೂಲ್ಯವನ್ನಾತ ಜಿಕೇರಿಮಾಡದೆಯೆ ಆಕೆಗೆ ಒಪ್ಪಿಸಿದ.

ತನ್ನ ವಾಸಸ್ಥಳಕ್ಕೆ ವಾಪಸಾದ ಇಜ್ಜತ ಬೇಗನಿಗೆ ತಾನು ಖರೀದಿಸಿ ತಂದ ಪಾತ್ರೆಗಳಲ್ಲೆಲ್ಲ ಸೊಹನಿಯ ಮುಖವೆ ಕಾಣತೊಡಗಿತು. ಈಗಾತನ ಪಾಡು ನೀರಿನಿಂದ ಹೊರಬಿದ್ದ ಮೀನಿನಂತೆ. ರಾತ್ರಿಯಿಡಿ ಮಗ್ಗಲು ಬದಲಿಸುವುದರಲ್ಲಿಯೆ ಕಳೆಯಿತು. ಕಣ್ಣಿಗೆ ಕಣ್ಣು ಹತ್ತುವ ಮಾತಂತೂ ದೂರವೆ.

ಬೆಳಗಾಗೆದ್ದು ಇಜ್ಜತ ಮತ್ತೆ ತೊಲಾನ ಅಂಗಡಿಗೆ ಹೋದ. ಮತ್ತೆ ಕೆಲವು ಪಾತ್ರೆಗಳನ್ನು ಖರೀದಿಸಿದ. ತಾನು ತನ್ನ ನಾಡನ್ನು ಬಿಟ್ಟು ಭಾರತಕ್ಕೆ ಬಂದ ಉದ್ದೇಶವೆ ಆತನಿಗೆ ಮರೆತು ಹೋಗಿತ್ತು. ವ್ಯಾಪಾರಕ್ಕೆಂದು ಬಂದಿದ್ದಾತ ಈಗ ತೊಡಗಿದ್ದು ಪ್ರೇಮವ್ಯಾಪಾರದಲ್ಲಿ. ನಿತ್ಯವೂ ತೊಲಾನ ಅಂಗಡಿಗೆ ಬರಬೇಕು, ಪಾತ್ರೆಗಳನ್ನು ಖರೀದಿಸಬೇಕು, ಖರೀದಿಸಿದ್ದನ್ನೆಲ್ಲ ತನ್ನ ವಾಸಸ್ಥಳದಲ್ಲಿ ಬಚ್ಚಿಡಬೇಕು... ನಿತ್ಯವೂ ಬರುವ ಈ ಗಿರಾಕಿಯ ಬಗ್ಗೆ ತೊಲಾ ಮೊದಮೊದಲು ಅಚ್ಚರಿಪಟ್ಟ, ನಂತರ 'ಹುಚ್ಚನಿರಬೇಕು ಪಾಪ' ಎಂದುಕೊಂಡ. ಏನಾದರೇನಂತೆ - ಅವನಿಗೆ ಕೇಳಿದಷ್ಟು ಬೆಲೆ ದೊರೆಯುತ್ತಿತ್ತಲ್ಲ. ಹೀಗಾಗಿ ಸುಮ್ಮನಾಗಿಬಿಟ್ಟ. ಇಜ್ಜತನ ಹುಚ್ಚು ಎಂಥದೆಂಬುದು ಆತನಿಗೆ ಗೊತ್ತಾಗಲೇ ಇಲ್ಲ.



"ಸ್ವಲ್ಪ ಸಾವಕಾಶ ಹೊಡಿ ಮಾರಾಯಾ. ಅಪೆಂಡಿಕ್ಸ್ ತೊಂದರೆ ಇದೆ.."

ಕೊಂಡ ಪಾತ್ರೆಗಳದ್ದೇ ಒಂದು ಅಂಗಡಿಯನ್ನು ತೆಗೆದ ಇಜ್ಜತ ವ್ಯಾಪಾರವನ್ನಾರಂಭಿಸಿದ. ಅತ್ಯುತ್ತಮ ಕಲಾವಸ್ತುಗಳೆನ್ನಬಹುದಾದ ಆ ಮಣ್ಣಿನ ಪಾತ್ರೆಗಳ ಬೆಲೆಯೆಷ್ಟು ಗೊತ್ತೆ? ತನ್ನ ಅಂಗಡಿಯಲ್ಲಿ ತೊಲಾ ಕುಂಬಾರ ಹೇಳಿದ್ದರ ಹತ್ತು ಪಟ್ಟು ಕಡಿಮೆ! ತಾವು ಕೊಂಡ ಪಾತ್ರೆಯನ್ನೇ, ಇಜ್ಜತ, ತೊಲಾನ ಅಂಗಡಿಯಲ್ಲಿ ಅಬ್ಬಾ ಎನ್ನುವಷ್ಟು ಬೆಲೆ ತೆತ್ತು ತಂದಿರುವ ವಿಚಾರ ಗೊತ್ತಾದ ಗಿರಾಕಿಗಳ ದೃಷ್ಟಿಯಲ್ಲೂ ಈತ 'ಹುಚ್ಚ'ನೆ ಆದ.

ಇಜ್ಜತ ತನ್ನ ದೇಶದಿಂದ ಬರುವಾಗ ಒಂಟೆಗಳ ಮೇಲೆ ಹೇರಿ ತಂದಿದ್ದ ಹಣ ಗಂಟೆಗಳೊಳಗೆ ಕರಗಿತು. ಆತನ ಬಳಿಯ ಮುತ್ತು ರತ್ನಗಳೂ ಕಡಿಮೆ ಬೆಲೆಯಲ್ಲಿ ಅನ್ಯರ ಪಾಲಾದವು. ಜತೆಗೆ ಬಂದವರು ಕೂಡ "ಈ ಹುಚ್ಚನ ಜತೆಗಿನ್ನೇನು ಕೆಲಸ?"ವೆಂದು ದೂರವಾದರು. ಇಜ್ಜತ ಬೇಗ್ ಸಾಲ ಮಾಡದೇ ವಿಧಿಯಿರಲಿಲ್ಲ. ಅವನಿಗೆ ಯಾರು ಸಾಲ ಕೊಟ್ಟಾರು? ಅವನಿಗೆ ಗೊತ್ತಿದ್ದ ಸಿರಿವಂತನೆಂದರೆ ತೊಲಾ ಕುಂಬಾರನೊಬ್ಬನೆ. ತಾನು ಹೇಳಿದ ಮೂಲ್ಯವನ್ನು ತೆತ್ತು ಪಾತ್ರೆಗಳನ್ನು ಖರೀದಿಸುತ್ತಿದ್ದ ಈ ಹುಡುಗ ಬಂದು ಸಾಲ ಕೇಳಿದಾಗ ತೊಲಾನಿಗೆ ಇಲ್ಲ ಎನ್ನಲಾದರೂ ಮನಸ್ಸಾದೀತೆ?

ಮೈತುಂಬ ಸಾಲದ ಹೊರೆಯಾಯಿತು ಇಜ್ಜತ ಬೇಗನಿಗೆ. ಅದನ್ನು ತೀರಿಸುವುದೆಂದು? ಕೊನೆಗೆ ತೊಲಾ ಕುಂಬಾರನಿಗೆ "ನಿಮ್ಮ ಬಳಿ ಜೀತಕ್ಕಿರುವೆ"ನೆಂದ ಇಜ್ಜತ ಬೇಗ್.

ಇದೀಗ ಮನೆಯಲ್ಲಿ ಆಳಾಗಿ ಬಂದಾತ ತನ್ನ ಮಗಳನ್ನು ತುಂಬ ಇಷ್ಟಪಡುವ ಹುಡುಗ ಎಂಬ ವಿಷಯ ತೊಲಾನಿಗೆ ಹೇಗೆ ಗೊತ್ತಾಗಬೇಕು? ಸೊಹನಿಗೇ ಅದು ಗೊತ್ತಿರಲಿಲ್ಲವಲ್ಲ. ಮನೆಯ ಎಲ್ಲ ಕೆಲಸಗಳನ್ನೂ ಮಾಡುತ್ತಿದ್ದ ಇಜ್ಜತ ಬೇಗ್. ತನ್ನಿಷ್ಟದ ಹುಡುಗಿಯ ಸಾಮೀಪ್ಯ ಆತನಿಗೆ ಈ ಎಲ್ಲ ಶ್ರಮ-ಋಣ ಭಾರದ ಹೊರೆಗಳನ್ನು ಮರೆಸುತ್ತಿತ್ತಲ್ಲ. ತೊಲಾನಿಗೆ ಮಣ್ಣು ಕಲಿಸಿಕೊಡುತ್ತಿದ್ದ, ಅದನ್ನು ಹದವಾಗಿ ಕಾಲಿನಿಂದ ನಾದುತ್ತಿದ್ದ, ತಿಗರಿ ತಿರುಗಿಸುತ್ತಿದ್ದ, ನೀರು ಹೊರುತ್ತಿದ್ದ ಇಜ್ಜತ.

ತೊಲಾ ಆತನ ಕೆಲಸ, ನಯ-ವಿನಯದ ನಡವಳಿಕೆಗಳನ್ನು ಮೆಚ್ಚಿದ. ಅಂತೆಯೆ ಸ್ವಲ್ಪ ಅಲ್ಪಶ್ರಮದ ಕೆಲಸ ಕೊಡಬೇಕೆಂದು ಯೋಚಿಸಿದ. ಇಜ್ಜತ ಮರುದಿನದಿಂದ ಮಣ್ಣಿನೊಂದಿಗೆ ಮೈಹೊಲಸು ಮಾಡಿಕೊಳ್ಳಲಿಲ್ಲ, ತೊಲಾನ ಎಮ್ಮೆಗಳನ್ನು ಮೇಯಿಸಲು ಊರ ಹೊರಗೆ ಹೋಗತೊಡಗಿದ. ಆತನನ್ನು ಪ್ರೀತಿಯಿಂದ "ಮಹಿವಾಲ್" (ಮಹಿಷಪಾಲಕ=ದನಗಾಹಿ) ಎಂದು ಕರೆಯತೊಡಗಿದ ತೊಲಾ.

ಯಾರ ಪ್ರೇಮಕ್ಕಾಗಿ ಇಜ್ಜತ ಬೇಗ್ ಮಹಿಪಾಲನಾಗಿದ್ದನೋ ಆ ಸುಂದರಿ ಸೊಹನಿಯೊಂದಿಗೆ ಒಂದು ಮಾತನ್ನೂ ಆಡುವ ಅವಕಾಶ ಅವನಿಗೆ ಇದುವರೆಗೆ ಸಿಕ್ಕಿರಲಿಲ್ಲ. ಒಂದು ದಿನ ಅದು ತಂತಾನೇ ಒದಗಿಬಂತು. ತನ್ನ ಹೃದಯವನ್ನಾತ ಆಕೆಯೆದುರು ಬಿಚ್ಚಿಟ್ಟ. ಅವಳೋ, ತನಗಾಗಿ ಹುಚ್ಚನಾಗಿರುವ ಈ ಹುಡುಗನ ಉದ್ದೇಶವನ್ನು ಈ ಮೊದಲೇ ಅರಿತುಕೊಂಡ ಜಾಣೆ. ಮಹಿವಾಲನ ಮನದನ್ನೆಯಾಗಿಬಿಟ್ಟಳಾಕೆ.

ಲಜ್ಜೆಯ ಮುಸುಕೀಗ ಸರಿದಿತ್ತು. ಕೈ-ಕೈ ಮಿಲಾಯಿಸಿಕೊಂಡ ಆ ತರುಣ ಜೋಡಿ ಬಹಳ ಹೊತ್ತಿನವರೆಗೆ ಕಣ್ಣುಗಳಲ್ಲೇ ಸಂಭಾಷಿಸುತ್ತಿತ್ತು. ಮನೆಯೇನು, ಮೈದಾನವೇನು?



ಹೊಳೆಯೇನು, ಹೊಲವೇನು? ಹಗಲೇನು, ಇರುಳೇನು... ಆ ಪ್ರಣಯಿಗಳಿಗೀಗ ಜಗತ್ತೆಂದರೆ ಪರಸ್ಪರರ ಸಾಮೀಪ್ಯ ಅಷ್ಟೆ..

ಮನೆಗೆಲಸದಲ್ಲಿ ಒಂದಿನಿತು ಬಿಡುವು ದೊರೆತರೆ ಸಾಕು - ಸೊಹನಿ ಓಡುತ್ತಿದ್ದುದು ತನ್ನಿನಿಯ ಎಮ್ಮೆಗಳನ್ನು ಮೇಯಿಸುತ್ತಿದ್ದೆಡೆಗೆ. ಆಯಿತು, ಅವನನ್ನು ಕಂಡರೆ ಆಕೆ, ಆಕೆಯನ್ನು ಕಂಡೊಡನೆ ಆತ ಸ್ವಪ್ನ ಸಾಮ್ರಾಜ್ಯದ ರಾಜ-ರಾಣಿಯಾಗಿ ಬಿಡುತ್ತಿದ್ದರು.

ಈ ಪ್ರಣಯದಾಟ ಕಥೆಯಾಗಿ ಗುಜರಾತ ಜಿಲ್ಲೆಯಾದ್ಯಂತ ಹಬ್ಬಿತು. ಕಥೆಗೊಂದು ಉಪಕಥೆ, ಅದಕ್ಕಿಷ್ಟು ರೆಕ್ಕೆ-ಪುಕ್ಕಗಳು ಬಲಿತು ತೊಲಾನ ಕಿವಿತನಕ ಬಂದು ತಲುಪಿದಾಗ ಆತ ಕೆಂಡವಾದ. ಮಗಳನ್ನು ಮನೆಯಲ್ಲಿ ಕೂಡಿ ಹಾಕಿದ. ಮಹಿವಾಲನ ಮೇಲೊಂದು ಕಣ್ಣಿಟ್ಟ. ತಾನು ಆತನನ್ನು ಜೀವಕ್ಕಿಂತ ಹೆಚ್ಚಾಗಿ ಪ್ರೀತಿಸುತ್ತಿರುವುದು ನಿಜ, ಆತನಿಗಾಗಿಯೇ ತಾನು ಬದುಕುತ್ತಿರುವುದು, ಸತ್ತರೂ ಆತನಿಗಾಗಿಯೆ ಎಂದು ಖಂಡಿತವಾಗಿ ಹೇಳಿಬಿಟ್ಟಳು ಸೊಹನಿ ತಂದೆಯ ದುರಿಗೆ.

ಮಹಿವಾಲನನ್ನು ಕೆಲಸದಿಂದ ತೆಗೆದು ಹಾಕುವುದೊಂದೇ ಈಗ ತೊಲಾನಿಗಿದ್ದ ಮಾರ್ಗ.

''ಇಜ್ಜತ ಬೇಗನನ್ನು ಚಿನಾಬಿನಾಚೆ ಬಿಟ್ಟು ಬನ್ನಿ,'' ಎಂದು ಆಳುಗಳಿಗೆ ಹೇಳಿದ.

ಕೂಡಲೇ ಸೊಹನಿಯ ಮದುವೆಯನ್ನೂ ಮಾಡಿ ಬಿಟ್ಟ ತೊಲಾ ಕುಂಬಾರ. ಅತ್ತು ಅತ್ತು ಸಣ್ಣಗಾದ ಸೊಹನಿಯನ್ನು ಅನಾಮತ್ತಾಗಿ ಎತ್ತಿ ಡೋಲಿಯಲ್ಲಿ ಹಾಕಬೇಕಾಯಿತು. ತನಗೊದಗಿದ ಈ ಆಪತ್ತನ್ನು ಕುರಿತು ಆಕೆ ಯಾರೆದುರಿಗೆ ಹೇಳಬೇಕು?

ತನ್ನ ಕೈಹಿಡಿದಾತ 'ನಪುಂಸಕ'ನೆಂಬ ವಿಷಯ ಮೊದಲ ರಾತ್ರಿಯೆ ಗೊತ್ತಾದಾಗ ಸೊಹನಿ ದೈವ ತನ್ನ ಪಕ್ಷದಲ್ಲಿದೆಯೆಂದುಕೊಂಡಳು. ದಾಸಿಯೊಬ್ಬಳನ್ನು ಕರೆದು ಮಹಿವಾಲನಿಗೆ ಗುಟ್ಟಾಗಿ ಸಂದೇಶವೊಂದನ್ನು ಕಳಿಸಿದಳು.

ಮರುದಿನ ಸನ್ಯಾಸಿಯೊಬ್ಬ ಬಂದ. ಸೊಹನಿಯನ್ನು ಕಂಡ. ''ಚಿನಾಬ್ ನದೀ ದಡದಲ್ಲಿ ಒಂದು ಗುಡಿಸಲನ್ನು ಕಟ್ಟಿಕೊಂಡು ಪ್ರತಿ ರಾತ್ರಿ ಕಾಯುತ್ತಿರು'' ಎಂದಳು.

ಪ್ರತಿ ರಾತ್ರಿಯೂ ಆಕೆ ಅಲ್ಲಿ ಹೋಗತೊಡಗಿದಳು. ಆ ಝೋಪಡಿ ಸೊಹನಿಯ ಮೈ-ಮನಗಳಿಗೆ ಶಾಂತಿ ಸಮಾಧಾನಗಳನ್ನು ನೀಡುವ ತಾಣವಾಗಿ ಪರಿಣಮಿಸಿತು. ಆಕೆ ಬರುವ ದಾರಿಯನ್ನೇ ಕಾಯುತ್ತಿದ್ದ ಮಹಿವಾಲ್. ಅಷ್ಟರೊಳಗೆ ಒಳ್ಳೆ ಪೊಗದಸ್ತಾದ ಮೀನೊಂದನ್ನು ಹಿಡಿದು ತಂದು ರುಚಿಯಾಗಿ ಬೇಯಿಸಿಟ್ಟಿರುತ್ತಿದ್ದ ಆತ. ಸೊಹನಿ

ಬಂದ ಮೇಲೆ ಇಬ್ಬರೂ ಅಕ್ಕ-ಪಕ್ಕ ಕುಳಿತು ಆ ಮೀನಿನಡುಗೆಯನ್ನು ಪರಸ್ಪರ ಉಣಿಸಬೇಕು, ಮನದಣಿ ಮಾತನಾಡಬೇಕು, ಬೆಳ್ಳಿ ಚುಕ್ಕೆ ಮೂಡುವ ಮೊದಲೇ ವಿದಾಯ ಹೇಳಬೇಕು... ಬಹಳ ದಿನ ಹೀಗೇ ಸಾಗಿತು.

ಆಷಾಢ ಬಂತು. ಆಕಾಶದ ತುಂಬೆಲ್ಲ ದಪ್ಪಾದ ಕಪ್ಪಾದ ಮೋಡಗಳು. ಬಿರುಗಾಳಿಯೊಂದಿಗೆ ವರ್ಷಾಧಾರೆ ಸುರಿಯತೊಡಗಿತು. ಅಂದಿನ ರಾತ್ರಿಗೆಂದು ದಿನವಿಡೀ ಹುಡುಕಿದರೂ ಮಹಿವಾಲನ ಬಲೆಗೆ ಒಂದು ಮೀನೂ ಬೀಳಲಿಲ್ಲ. ಆದರೆ ಅದಿಲ್ಲದೆ ಆತ ಗುಡಿಸಲಿಗೆ ಹೋಗಲಾರ. ಮತ್ತೆ ಬಲೆ ಹಾಕಿದ.

ಸಂಜೆಯಾದರೂ ಆತನ ಬಲೆಯ ಕೊಕ್ಕೆಯ ಹುಳು ಹಾಗೆಯೇ ಇತ್ತು. ಮಹಿವಾಲ್ ಈಗ ತನ್ನ ಸೊಂಟಕ್ಕೆ ಕೈ ಹಾಕಿದ. ಕಿರುಗತ್ತಿಯನ್ನೆತ್ತಿಕೊಂಡ. ತೊಡೆಯನ್ನು ಸೀಳಿಕೊಂಡ. ಮೀನಿನಾಕಾರದಲ್ಲಿ ಮಾಂಸವನ್ನು ಕತ್ತರಿಸಿ ಹೊರತೆಗೆದ. ಸುರಿಯುತ್ತಿದ್ದ ನೆತ್ತರು, ಉಂಟಾಗುತ್ತಿದ್ದ ಬಾಧೆಗಳನ್ನು ಲೆಕ್ಕಿಸದೇ ಓಡಿದ. ಆ ಮಾಂಸದಿಂದ ಕಬಾಬ್ ಮಾಡಿದ. ಕಾದಲೆ ಬರುವ ಹೊತ್ತನ್ನೇ ಕಾದ. ಆಕೆ ಬಂದಾಗ ಬರಸೆಳೆದು ಅಪ್ಪಿಕೊಂಡು ಕಬಾಬಿನ ಪಾತ್ರೆಯ ಬಳಿ ಕರೆದೊಯ್ದ.

"ಇಂಥ ಮುಸಲಧಾರೆಯನ್ನೂ ಲೆಕ್ಕಿಸದೆ ಮೀನು ಹಿಡಿದು ತಂದನಲ್ಲ, ನನಗಾಗಿ!" ಎಂದುಕೊಂಡ ಸೊಹನಿ ಪಾತ್ರೆಯ ಮುಚ್ಚಳ ತೆರೆದಳು. ಕಬಾಬಿನ ಒಂದು ತುಣುಕನ್ನೆತ್ತಿ ಆತನ ಬಾಯಿಗಿರಿಸಹೋದಳು. ಆತ ತಡೆದ. "ಮೊದಲು ನೀನು..." ಎಂದು ಆ ಕೈಯನ್ನು ಸೊಹನಿಯ ಬಾಯಿಗಿರಿಸಿದ. ಆಕೆಯ ನಾಲಿಗೆಗೆ ಅದೇನೋ ಒಂದು ವಿಚಿತ್ರ ಅನುಭವ. ಉಗುಳಿಬಿಟ್ಟಳು. "ಏನಿದು?" ಎಂದಳು. ಮಹಿವಾಲ್ ಮರೆಮಾಚಲೆತ್ನಿಸಿದ. ಆಕೆ ಪಟ್ಟುಬಿಡಲಿಲ್ಲ. ಆತನಿಗೀಗ ಹೇಳದೆ ವಿಧಿಯಿರಲಿಲ್ಲ.

ಸೊಹನಿಗೆ ತುಂಬ ಸಂಕಟವಾಯಿತು. ತನ್ನ ತೊಡೆಯನ್ನು ಕತ್ತರಿಸಿಕೊಳ್ಳುವಾಗ ಆತನಿಗೆಷ್ಟು ನೋವಾಯಿತೊ.. ಅದೆಷ್ಟು ನೆತ್ತರು ಸುರಿ
ಯಿತೊ.. ಇಂಥ ನೋವಿನಲ್ಲೂ ಅಂಥ ಅಬ
ರದ ಮಳೆಯಲ್ಲೂ-ರಭಸದ ಹೊಳೆಯಲ್ಲೂ
ತನಗಾಗಿ ಈಜಿ ಬಂದ ಮಹಿವಾಲನ ಕುರಿತ
ಸೊಹನಿಗೆ ಅತ್ಯಭಿಮಾನವೆನಿಸಿತು. "ಮಹಿ
ವಾಲ್ ನೀನಿನ್ನು ಹೊಳೆ ಈಜಿ ಇಲ್ಲಿ ಈ
ಗುಡಿಸಲಿಗೆ ಬರುವುದು ಬೇಡ. ನಾನೇ ನದಿ
ದಾಟಿ ಬಂದು ನಿತ್ಯ ರಾತ್ರಿ ನಿನ್ನನ್ನು ಕೂಡಿಕೊ
ಳ್ಳುವೆ" ಎಂದಳು.

ತೇಲುಗಾಯಿಯ ಸಹಾಯದಿಂದ ಪ್ರತಿರಾತ್ರಿ
ಚಿನಾಬನ್ನು ಈಜಿ, ಆಚೆ ದಡದಲ್ಲಿ ಕಾಯುತ್ತಿದ್ದ
ಪ್ರಿಯತಮನೊಂದಿಗೆ ಬೆಳ್ಳಿ ಚುಕ್ಕೆ ಕಾಣಿಸಿಕೊಳ್ಳು
ವವರೆಗೂ ಇದ್ದು, ಅದೇ ತೇಲುಗಾಯಿಯ
ಸಹಾಯದಿಂದ ಈಜಿ ದಡ ಸೇರಿ ಮನೆಗೆ ಮ
ಳುತ್ತಿದ್ದಳು ಸೊಹನಿ. ತೇಲುಗಾಯಿಯನ್ನಾಕೆ
ಬಚ್ಚಿಡುತ್ತಿದ್ದುದು ಕಂಟಿಗಳಲ್ಲಿ.

ಒಂದು ರಾತ್ರಿ ಸೊಹನಿ ಹೊರಡುವಾಗ
ಇನ್ನೂ ಎಚ್ಚತ್ತಿದ್ದ ಆಕೆಯ ನಾದಿನಿಗೆ ಏನೋ
ಸಂಶಯವುಂಟಾಯಿತು. ಆಕೆಯೂ ಸದ್ದಿಲ್ಲ
ದಂತೆ ಸೊಹನಿಯ ಹೆಜ್ಜೆಗಳನ್ನನುಸ
ತೊಡಗಿದಳು.

ಮರು ದಿನ ರಾತ್ರಿ ಸೊಹನಿ ನದಿಯ ದಡದ
ಕಂಟಿಯ ಬಳಿ ಬಂದು ತೇಲುಗಾಯಿಗೆ ಕೈಹಾ
ದರೆ ಅದು ಒಡೆದುಹೋಗಿದೆ!

ಸೊಹನಿಗೆ ತನ್ನ ಗುಟ್ಟು ರಟ್ಟಾಯಿತಲ್ಲ
ಎಂಬ ಸಂಕಟ ಒಂದು ಕಡೆ, ಕಾದಿರುವ ಪ್ರಿಯ
ರನ ಬಳಿ ಹೋಗಲಾಗುವುದಿಲ್ಲವಲ್ಲ ಎಂಬ
ದುಃಖ ಇನ್ನೊಂದೆಡೆ. ಯಾಕೆಂದರೆ ಒಡೆದ
ತೇಲುಗಾಯಿಯೊಂದಿಗೆ ನೀರಿಗಿಳಿದರೆ ತಾನು
ತಳ ಕಾಣುವುದು ಖಂಡಿತ. ಹೋಗದೆ ಉಳಿದರೆ
ಮರುಮುಂಜಾನೆ ತನ್ನ ಹೆಸರಿಗೆ ಮಸಿ ಹತ್ತು
ವುದೂ ದಿಟ. ಕ್ಷಣ ಕಾಲ ಆಕೆ ಯೋಚಿಸಿ
ಕೊನೆಗೆ ಮುಳುಗುವುದೇ ಮೇಲು ಎಂದುಕೊಂ
ಡಳು.

ಆ ರಾತ್ರಿ ಪ್ರವಾಹಕ್ಕೆ ರಭಸ ಬಂದಿತ್ತು.
ಗಾಳಿಯೂ ಜೋರಾಗಿ ಬೀಸುತ್ತಿತ್ತು. ಆದರೂ
ಆ ತೇಲುಗಾಯಿ ಹಿಡಿದು ನೀರಿಗಿಳಿದು ಕೈಕಾಲು

ಶಿಯತೊಡಗಿದಳು. ಆಕೆಯ ಪ್ರತಿಯೊಂದು ಸಿರಾಟವೂ ಮಹಿವಾಲನನ್ನು ಕರೆವಂತಿತ್ತು. ಎಳೆಯ ಬಳ್ಳಿಯಂಥ ಕೈಗಳಿಗೆ ಆದೆಂಥ ಶಕ್ತಿ ದಿತ್ತೊ. ಒಡೆದ ತೇಲುಗಾಯಿಯೊಂದಿಗೆ ಜುತ್ತಲೇ ಇದ್ದಳು. ಒಂದಿನಿತೂ ಗಾಬರಿ ಲ್ಲ. ಆಕೆ ಕೈಕಾಲು ಬಡಿದು ಉಂಟಾದ ಲೆಗಳೆಲ್ಲ ಚಿನಾಬಿನ ಆ ಕಡೆಯ ದಡಕ್ಕೆ ೋಗಿ ಅಪ್ಪಳಿಸಿ ಮಹಿವಾಲನನ್ನು ಕರೆಯತೊ ಗಿದವು.

ಅತ್ತ ಮಹಿವಾಲ್ ಬಹು ಹೊತ್ತು ಕಾದ. ಯತಮೆ ಬರಲಿಲ್ಲ. ಏನೋ ಅವಘಡ ಸಂಭ ಸಿದೆ ಎಂದವನಿಗೆ ಅನಿಸಿತು. ಸೊಹನಿ ಚೇನಾ ನಲ್ಲಿ ಮುಳುಗಿ.....

ಆತನೂ ಚಿನಾಬಿಗಿಳಿದ.

ಒಂದೆಡೆ ಸೊಹನಿ, ಇನ್ನೊಂದೆಡೆ ಮಹಿ ಲ್. ದಟ್ಟ ಕತ್ತಲೆಯಲ್ಲಿ ನಟ್ಟ ನಡುವೆ ಟ್ಟಹಾಸದಿಂದ ಅಲೆಗಳನ್ನೆಬ್ಬಿಸುವ ಚಿನಾಬ್ ವಾಹ. ಆಕೆ ಪ್ರೇಮದ ಬಲದಿಂದ ಮುಂದೆ ಸಾಗಿ ಬರುತ್ತಿದ್ದಳು, ಆತ ತೆರೆಗಳೊಂದಿಗೆ ಸೆಣ ಸುವ ತೋಳ್ಬಲದಿಂದ....

ನಡುಪೆಯೊಂದು ಸುಳಿಗೆ ಸಿಕ್ಕಿದಳು ಸೊಹನಿ. ಅದೇ ವೇಳೆಗೆ ಅಲ್ಲಿ ಬಂದು ತಲುಪಿದ ಮಹಿವಾಲ್. ಆಗಸದಲ್ಲಿ ಮಿಂಚಿನ ಸೆಳಕುಗಳು. ಆ ಬೆಳಕಿನಲ್ಲಿ ತನ್ನಿನಿಯನ ಮುಖವನ್ನು ಕಂಡವು ಸೊಹನಿಯ ಸೋತ ಕಣ್ಣುಗಳು. ''ಮಹಿವಾಲ್'' ಎಂದಾಕೆ ಕೂಗುತ್ತಿದ್ದಂತೆ ಆತ ಬಂದವನೇ ಎಡಗೈಯಿಂದ ಆಕೆಯನ್ನು ಗಟ್ಟಿ ಯಾಗಿ ಅಪ್ಪಿಕೊಂಡ. ಈಗ ಇಬ್ಬರೂ ಸುಳಿಗೆ ಸಿಲುಕಿದ್ದಾರೆ. ಅದರಿಂದ ಪಾರಾಗುವ ದುಸ್ಸಾ-ಹಸಕ್ಕಿಳಿದ ಮಹಿವಾಲ್. ಆದರೆ ತನ್ನ ಆಳವಿಗೆ ಬಂದವರನ್ನು ಬಿಟ್ಟುಕೊಟ್ಟೀತೆ ಆ ಹೀನ ಸುಳಿ...

ತನ್ನಾಳದಲ್ಲಿ ಅಪೂರ್ವ ಪ್ರಣಯಿಗಳನ್ನು ಇಟ್ಟುಕೊಂಡು ಅಟ್ಟಹಾಸದಿಂದಲೇ ಹರಿಯಿತು ಚಿನಾಬ್... ಅದು ಹರಿದಲ್ಲೆಲ್ಲ ಈ ಅಮರ ಪ್ರೇಮದ ಕಥೆಯೂ ಹರಿಯಿತು... ●

## ಇದಕ್ಕೆನ್ನಬೇಕು ಸಾದಾತನ

**ಮೋ**ತಿಭಾಯಿ ಚಾವಡಾ ಈಗ ಗುಜರಾತ್‌ನಲ್ಲಿ ಕ್ಯಾಬಿನೆಟ್ ದರ್ಜೆಯ ಸಚಿವ. ಇವರು ಪರಿಶಿಷ್ಟ ವರ್ಗಕ್ಕೆ ಸೇರಿದವರು. ಗುಡಿ ಕೈಗಾರಿಕೆ, ಪಾನ ನಿರೋಧ ಮತ್ತು ಅಬಕಾರಿ ಇವರಿಗೆ ವಹಿಸಿರುವ ಖಾತೆಗಳು. ಶುಭ್ರವಾದ ಖಾದೀ ಧೋತಿ, ಕುರ್ತಾ ಮತ್ತು ಟೋಪಿ ಇವರ ಉಡುಪು. ಐವತ್ತೇಳನೆಯ ವಯಸ್ಸಿನಲ್ಲಿರುವ ಇವರು ಬರಿಗಾಲಲ್ಲೆ ವಿಧಾನಸಭೆ, ಸಚಿವಾಲಯದಲ್ಲಿ ಓಡಾಡುತ್ತಿದ್ದು ಜನತೆಯ ಸೇವೆಗೆ ತಮ್ಮನ್ನು ಸಮರ್ಪಿಸಿಕೊಂಡಿದ್ದಾರೆ. ಹಿಂದುಳಿದ ತನ್ನಂತಹವರೊಡನೆ ಒಡನಾಡುವಾಗ ನಿರಾಡಂಬರದಿಂದ ಬರಿಗಾಲಿನಲ್ಲಿರುವುದೇ ಇವರಿಗೆ ಇಷ್ಟ. ಅವರು ಸಚಿವರಾಗಿ ಪ್ರಮಾಣವಚನ ಪಡೆಯುತ್ತಿದ್ದಾಗಲೂ ಬರಿಗಾಲೇ. ಸಮಾರಂಭಕ್ಕೆ ಬಂದಿದ್ದ ಪತ್ರಿಕಾವರದಿಗಾರರಿಗೆಲ್ಲ ಇದೊಂದು ಸೋಜಿಗ. ರಾಜ್ಯಪಾಲರು ಪ್ರಮಾಣವಚನ ಬೋಧಿಸಿದ ತರುವಾಯ ತಮ್ಮ ಕೊಠಡಿಗೆ ಪ್ರವೇಶಿಸಿದಾಗ ಆಶ್ಚರ್ಯಕಾದಿತ್ತು. ತಮ್ಮ ಅಭಿಮಾನಿಯೊಬ್ಬ ಬಂದು ಒಂದು ಜೊತೆ ಪಾದರಕ್ಷೆಯನ್ನು ತೂದು ಇವರ ಮುಂದಿಟ್ಟು, ಅವನ್ನು ಧರಿಸಲೇಬೇಕೆಂದು ವಿನಂತಿಸಿದ.

ಮೋತಿಭಾಯಿಯವರು ಆಗ ಈ ಇಪ್ಪತ್ತೈದು ವರ್ಷಗಳ ದೀಕ್ಷೆಯನ್ನು ವಿಸರ್ಜಿಸಲೇಬೇಕಾಯಿತು. ಪಾದರಕ್ಷೆಯನ್ನು ಇಷ್ಟು ದೀರ್ಘಕಾಲ ಬಳಸದಿದ್ದ ಪಾದಗಳಿಗೆ ಪಾದರಕ್ಷೆಯು ''ಕಾಲು ಕಚ್ಚಿದರೆ'' ಶಿಕ್ಷೆಯಾಯಿತೋ ಎನ್ನುವುದನ್ನು ಕಾದುನೋಡಬೇಕು. ●

***ಕೋಳಿವಾಡ ಕೃಷ್ಣಮೂರ್ತಿ***

# ಆನೆಗಳ ಕಾಡಲ್ಲಿ ಸೋಲಿಗರ ಬೀಡಲ್ಲಿ

ಕರ್ನಾಟಕ ಮತ್ತು ತಮಿಳುನಾಡಿನ ಪೂರ್ವ ಘಟ್ಟಗಳ ಗಿರಿ ಕಾನನಗಳಲ್ಲಿ ಶತಮಾನಗಳಿಂದ ಸೋಲಿಗರೆಂಬ ಆದಿವಾಸಿಗಳು ಬದುಕುತ್ತಿದ್ದಾರೆ. ವಿಶಿಷ್ಟ ಸಂಪ್ರದಾಯಗಳನ್ನಾಚರಿಸುವ ಆದಿ ದ್ರಾವಿಡ ಬುಡಕಟ್ಟಿಗೆ ಸೇರಿದ ಇವರ ಭಾಷೆ ಪೂರ್ಣವಾಗಿ ವಿಕಾಸಗೊಳ್ಳದ ಮೂಲ ಕನ್ನಡ ಭಾಷೆ. ಇವರು ವಾಸಿಸುವ ತಾವಿಗೆ 'ಪೋಡು' ಎನ್ನುತ್ತಾರೆ.

ಸೋಲಿಗರನ್ನು ಸ್ಥೂಲವಾಗಿ ಮಲೆಸೋಲಿಗರು, ಕಾಡುಸೋಲಿಗರು, ಊರಾಳಿ ಸೋಲಿಗರು ಬುರುಡೆ ಸೋಲಿಗರು, ಮತ್ತು ಊರುಬತ್ತಿ ಸೋಲಿಗರೆಂದು ಐದು ಗುಂಪುಗಳಾಗಿ ವಿಭಾಗಿಸುತ್ತಾರೆ. ಇವರಲ್ಲಿ ಆಲರ ಕುಲ, ಚಳುಕರ ಕುಲ, ಬೆಳ್ಳರ ಕುಲ, ಶೂರರ ಕುಲ ಮತ್ತು ತೆನೇರ ಕುಲಗಳೆಂದು ಐದು ಕುಲಗಳಿವೆ. ಈ ಐದೂ ಕುಲದವರು ಕೀಳೆಂದು ಪರಿಗಣಿಸುವ ಬಳೆಮರ ಕುಲವೆಂಬುದೊಂದಿದೆ. ಈ ಕುಲಗಳಲ್ಲಿ ತೆನೇರಕುಲ ಶ್ರೇಷ್ಠವೆಂದು ಸೋಲಿಗರಲ್ಲಿ ಪರಿಗಣಿಸಲ್ಪಟ್ಟಿದೆ. ನಮ್ಮ ಗ್ರಾಮೀಣ ಸಾಮಾಜಿಕ ವ್ಯವಸ್ಥೆಯನ್ನು ಕೆಲಮಟ್ಟಿಗೆ ಪ್ರತಿಬಿಂಬಿಸುವ ಇವರ ಸಾಮಾಜಿಕ ವ್ಯವಸ್ಥೆಯಲ್ಲಿ ಪೋಡಿನ ಯಜಮಾನ ಮತ್ತು ಕೋಲುಕಾರ ಕ್ರಮವಾಗಿ ಚಳುಕರ ಮತ್ತು ಶೂರರ ಕುಲದವರಾಗಿರುತ್ತಾರೆ. ಇವರಲ್ಲಿ ಬಹುಪತ್ನಿತ್ವ ಸಾಮಾನ್ಯ. ವಿಧವಾ ವಿವಾಹ ರೂಢಿಯಲ್ಲಿದೆಯಾದರೂ ವಿಧವೆಯು ಕೊರಳಿಂದ ತಾಳಿಯನ್ನು ತೆಗೆಯಬೇಕಿಲ್ಲ.

ಹಿಂದೆ ಉತ್ತಮ ಬೇಟೆಗಾರರಾಗಿದ್ದ ಈ ಆದಿವಾಸಿಗಳ ಬಗ್ಗೆ ಖ್ಯಾತ ಮೃಗಯಾ ವಿಹಾರಿ ಕೆನೆತ್ ಆ್ಯಂಡರ್‌ಸನ್ ಈ ರೀತಿ ಬರೆದಿದ್ದಾರೆ: "THESE ABORGINES WHO HAVE LIVED IN THE FORESTS FOR GENERATION ARE AMONG THE FINEST TRACKERS ANYWHERE IN THE WORLD."

1976-80ರ ಅವಧಿಯಲ್ಲಿ ಈ ಆದಿವಾಸಿಗಳ ಬದುಕನ್ನರಿಯುವ ಕುತೂಹಲದಿಂದ ಅವರೊಂದಿಗೆ ವಾಸ್ತವ್ಯ ಹೂಡಿದ್ದ ಈ ಲೇಖಕರು ತಮ್ಮ ಅನುಭವಗಳ ತುಣುಕೊಂದನ್ನು ಹಂಚಿಕೊಂಡಿದ್ದಾರೆ.

ಆದಿವಾಸಿ ಸೋಲಿಗರ ನಡೆನುಡಿ, ಸಂಪ್ರದಾಯಗಳನ್ನು ಅಭ್ಯಸಿಸಲು, ಅವರ ಬದುಕನ್ನರಿಯಲು ಕೇವಲ ಮಾನವೀಯ ಕುತೂಹಲದಿಂದ ಬಿಳಿಗಿರಿಯಲ್ಲಿ ವಾಸ್ತವ್ಯ ಹೂಡಿದ್ದೆ. ಸಮಾಜ ಶಾಸ್ತ್ರಜ್ಞರ ಅಥವಾ ಮಾನವ ವಿಜ್ಞಾನಿಯ ಕುತೂಹಲದಿಂದೇನೂ ಅಲ್ಲಿಗೆ ಹೋಗಿರಲಿಲ್ಲ. ಈ ಶಾಸ್ತ್ರ, ವಿಜ್ಞಾನಗಳ ಕನಿಷ್ಟತಮ ಅರಿವಿನ ಹಿನ್ನೆಲೆಯೂ ನನಗಿರಲಿಲ್ಲ. ಅವಕಾಶ ದೊರೆತಾಗಲೆಲ್ಲಾ ಜಾನಪದ ಹಾಡುಗಳನ್ನು ಸಂಗ್ರಹಿಸುತ್ತಿದ್ದೆ. ಸೋಲಿಗರ ಹಾಡುಗಾರರನ್ನರಸಿಕೊಂಡು ಆನೆಗಳಿಂದ ನಿಬಿಡವಾದ ಕಾಡಿನಲ್ಲಿ ಎಷ್ಟು ದೂರವಾದರೂ ಸರಿ, ಒಂಟಿಯಾಗಿ ನಡೆದುಕೊಂಡು ಹೋಗುತ್ತಿದ್ದ ಹುಮ್ಮಸ್ಸಿನ ದಿನಗಳವು.

ಒಂದು ದಿನ ಬೆಳಿಗ್ಗೆ ಬಿಳಿಗಿರಿ ರಂಗಸ್ವಾಮಿಯ ದರ್ಶನ ಮಾಡಿಕೊಂಡು ಬಂದು ಪರಿವಾರದ ವಿಠಲನ ಗುಡಿಸಲು ಹೋಟೆಲಿನಲ್ಲಿ ಕಾಫಿ ಕುಡಿಯುತ್ತಾ ಕುಳಿತಿದ್ದೆ. ನೀಲಯ್ಯನ ಅಂಗಡಿಯಲ್ಲಿ ಸೋಲಿಗರ ಚೆಲುವಾದಿ ಸಿದ್ದೇಗೌಡ ಏನನ್ನೋ ಕೊಳ್ಳುತ್ತಿದ್ದುದನ್ನು ಕಂಡು ಅವನ ಬಳಿಗೆ ಹೋದೆ. ನನ್ನನ್ನು ಕಂಡು, "ಅಡ್ಡಿಬಿದ್ದೆ ಬುದ್ಧಿ," ಎಂದು ನಡುಬಾಗಿ ನಮಿಸಿದ.

"ಬಿಡುವಾಗಿದ್ದೀಯ ಗೌಡಣ್ಣ?" ನಾನು ಸಿದ್ದೇಗೌಡನನ್ನು ಕೇಳಿದೆ.

"ಇಲ್ಲ ಬುದ್ಧಿ. ಧೂಪದಮಲೇಲಿ ಆಳ ಮಗ್ನ ಪೋಡದೆ. ಅಲ್ಲಿ ಆನೆ ಕುಂಭಪ್ಪ

ಪರಾವು ಇಟ್ಕಂಡವ್ರೆ. ಈಗ ನಮ್ಮ ಪೋಡಿಂದ ಒಬ್ನೇ ಒಂಟಿವ್ನಿ. ಬುದ್ಧಿ.''

''ಹೆಂಡ್ತಿ ಮಕ್ಳು ಬರೋಲ್ವ ಸಿದ್ದೇಗೌಡ?''

'' ಇಲ್ಲ ಬುದ್ಧಿ ಮಕ್ಳ ಮೈ ಸರೀಕಿಲ್ಲ'' ಸಿದ್ದೇಗೌಡ ಉತ್ತರಿಸಿದ.

ಒಡನೆ ಅವನ ಜೊತೆಯಲ್ಲಿ ಧೂಪದ ಮಲೆಯ ಕಾನಿಗೆ ಹೋಗುವ ಆಸೆಯಾಯಿತು. ಹಿಂದೆ ಸಿದ್ದೇಗೌಡನೊಂದಿಗೆ ಹೋಗಿ ನಡು ಕಾಡಿನಲ್ಲಿದ್ದ ಅನೇಕ ಪೋಡುಗಳನ್ನು ಕಂಡಿದ್ದೆ. ಸಿದ್ದೇಗೌಡನಂತಹ ಅನುಭವಿ ಸೋಲಿಗ ಜೊತೆ ಗಿದ್ದರೆ ಎಂಥ ಗೊಂಡಾರಣ್ಯದಲ್ಲಾದರೂ ಬೆಳಿಗಿಂದ ಬೈಗಿನ ವರೆಗೆ ನಿರ್ಭಯವಾಗಿ ನಡೆಯಬಹುದೆಂಬ ಅನುಭವ ನನಗೆ ಈಗಾಗಲೇ ಆಗಿತ್ತು.

ಧೂಪದಮಲೆಯಲ್ಲಿರುವ ಈತನ ಅಳಿಯನ ಪೋಡಿನ ಸೋಲಿಗರು ಕೆಲವಾರು ವರ್ಷಗಳ ಹಿಂದೆ ಬಿಳಿಗಿರಿಯ ಸಮೀಪದ ಕಾರೆ ಬೆಟ್ಟದಲ್ಲಿದ್ದು ಜಡೆಸ್ವಾಮಿ ದೈವದ ಆಣತಿಯ ಮೇರೆಗೆ 'ಕೀಳ್ ಸೀಮೆ'ಯ (ತಮಿಳು ನಾಡಿನ ಗಡಿಪ್ರದೇಶ) ಧೂಪದ ಮಲೆ ಕಾನಿಗೆ ಗುಳೆ ಹೋಗಿ ಪೋಡು ಮಾಡಿಕೊಂಡರಂತೆ. ಬಿಳಿಗಿರಿಯಿಂದ ಧೂಪದ ಮಲೆಕಾನಿಗೆ ಎರಡು ದಿನಗಳ ಹಾದಿ. ಬಿಳಿಗಿರಿಯಿಂದ ಚಾಮರಾಜನಗರಕ್ಕೆ ಹೋಗಿ ಅಲ್ಲಿಂದ ಬಸ್ಸು ಹಿಡಿದು ಸತ್ಯಮಂಗಲಕ್ಕೆ ಹೋದರೆ ಸಾಕಷ್ಟು ದೂರ ನಡೆಯುವುದು ತಪ್ಪುತ್ತಿತ್ತು. ಆದರೆ ಕಾಸು ಕೊಟ್ಟು ಬಸ್ಸಿನಲ್ಲಿ ಪ್ರಯಾಣಮಾಡುವ ಅಭ್ಯಾಸವಾಗಲಿ ಅನುಕೂಲವಾಲಿ ಸೋಲಿಗರಿಗೆ ಇರಲಿಲ್ಲ. ಅದೂ ಅಲ್ಲದೆ ಅವಸರ, ಒತ್ತಡಗಳಿಲ್ಲದ ಸರಳವಾದ ಬದುಕನ್ನು ಅವಲಂಬಿಸಿದ ಸರಳವಾದ ಜನರು ಅವರು. ದೇವರ ಜಾತ್ರೆಗೆ ಹೋಗಲು ಸಂಬಂಧಿಕರನ್ನು ಕಾಣಲು ದೂರ ಎಂದೂ ಅವರಿಗೆ ಅಡ್ಡ ಬರುತ್ತಿರಲಿಲ್ಲ. ಸೋಲಿಗರೊಂದಿಗೆ ಅಡವಿಯಲ್ಲಿ ಅಲೆದಾಡುವುದೇ ಒಂದು ಅಪೂರ್ವ ಅನುಭವ. ದಟ್ಟಡವಿಗಳನ್ನು ಹಾದು ಬಿಳಿಗಿರಿಯಿಂದ ತಮಿಳು ನಾಡಿನ ಸತ್ಯಮಂಗಲಕ್ಕೆ ಹೋಗುವ ಬಹುದಿನಗಳ ಆಸೆಯನ್ನು ಈಡೆ ಸಿಕೊಳ್ಳುವ ಬಯಕೆ ಬಲವತ್ತರವಾಯಿತು.

''ಸಿದ್ದೇಗೌಡ ಧೂಪದಮಲೆಗೆ ನಾನ ನಿನ್ನೊತೆ ಬರ್ಲೇನು?'' ಆಸೆಯಿಂದ ಕೇಳಿ ನನ್ನ ಮಾತು ಕೇಳಿ ಸಿದ್ದೇಗೌಡನಿಗೆ ಅಚ್ಚ ಯಾಗಿರಬೇಕು.

''ಧೂಪದಮಲೆಗೆ ಎರಡು ದಿನದ ಹಾ ಬುದ್ಧಿ. ಅಷ್ಟು ದೂರ ನಡೆದೀರೇನು?''

''ನಿನ್ನಂಥ ಅನುಭವಿ ಸೋಲಿಗ ಜೊ ಗಿದ್ರೆ ಎಷ್ಟು ದೂರನಾದ್ರೂ ನಡೆದೇ ಸಿದ್ದೇಗೌಡ.'' ನನ್ನ ಮಾತು ಕೇಳಿ ಆತನಿಗೆ ತ ಬಗ್ಗೆ ಹೆಮ್ಮೆ ಎನಿಸಿರಬೇಕು.

ಹಾದಿಯನ್ನು ಸವೆಸಲು ಸಾಕಾಗುವಷ್ಟು ಬೀಡಿ, ಬೆಂಕಿ ಪೊಟ್ಟಣ, ಹೊಗೆಸೊಪ್ಪನ ಸಿದ್ದೇಗೌಡನಿಗೆ ಅಂಗಡಿಯಿಂದ ಕೊಂ ಕೊಟ್ಟಾಗ ಅವನ ಮುಖ ಸಂತಸದಿಂ ಹಿಗ್ಗಿತು. ಅವನ ಮೊಮ್ಮಕ್ಕಳಿಗೆಂದು ಐ ಸೇರು ಕಡಲೆಪುರಿಯನ್ನು ಕೊಂಡು ಕೊಟ್ಟೆ.

ನಾನು ಕೈ ಚೀಲದಲ್ಲಿ ನನಗೆ ಬೇಕಾದ ಕೆಲ ಅಗತ್ಯವಾದ ಸಾಮಾನುಗಳನ್ನು ಹಾಕಿಕೊಂ ಸಿದ್ದೇಗೌಡನ ಜೊತೆ ಹೊರಟೆ. ಹಾದಿಯ ತಿನ್ನಲು ಏನೂ ದೊರೆಯುವ ಸಾಧ್ಯತೆ ಇರಲಿ ವಾದ್ದರಿಂದ ಹೊರಡುವುದಕ್ಕೆ ಮೊದಲ ವಿಠಲನ ಹೋಟೆಲಿನಲ್ಲಿ ಇಬ್ಬರೂ ಸಾಕಾ ವಷ್ಟು ತಿಂಡಿ ತಿಂದೆವು.

ಬಂಗ್ಲಿ ಪೋಡಿನ ಬಳಿಬಂದಾಗ ನಾನ ಹಾದಿಯ ಬದಿಯಲ್ಲೇ ಕುಳಿತುಕೊಂಡೆ. ಸಿದ್ದೇ ಗೌಡ ಗುಡಿಸಲಿಗೆ ಹೋಗಿ ಹೆಂಡತಿ ಮಕ್ಕ ಗೆಲ್ಲಾ ಹೇಳಿಬಂದು ನನ್ನನ್ನು ಕೂಡಿಕೊಂಡ ಕಡಲೆಪುರಿಯ ಗಂಟು ಅವನ ಹೆಗಲ ಮೇಲಿಂ ನೇತಾಡುತ್ತಿತ್ತು. ಅವನ ಕೈಯಲ್ಲಿ ಹರಿತವಾ ಮಚ್ಚೊಂದಿತ್ತು.

ಸೋಮರಸನ ಕೆರೆಯನ್ನು ಬಳಸಿಕೊಂಡ ದಿಬ್ಬದ ಮೇಲಿನ ಯರಕನ ಗದ್ದೆ ಪೋಡನ ಹಾದು ನಾಗಜಡೆ ಬೆಟ್ಟಕ್ಕೆ ಅಭಿಮುಖವಾ ನಮ್ಮ ಪಯಣ ಮುಂದುವರಿಯಿತು. ಸಂಪಿ



ವನವನ್ನು ತಲುಪಿದಾಗ ಹೊತ್ತು ನೆತ್ತಿಗೇರಿತ್ತು. ಕಾಡ ನಡುವಿನಲ್ಲಿ ಹರಿಯುತ್ತಿದ್ದ ಕಿರುತೊರೆಯ ತಣ್ಣನೆಯ ನೀರನ್ನು ಕುಡಿದು ಸ್ವಲ್ಪ ಹೊತ್ತು ಮರವೊಂದರ ನೆರಳಲ್ಲಿ ಅಡ್ಡಾಗಿ ಮತ್ತೆ ಪಯಣವನ್ನು ಮುಂದುವರಿಸಿದೆವು. ಬೀಡಿಸೇದುತ್ತಾ ದಾರಿಗಡ್ಡವಾಗುವ ಗಿಡಗಂಟೆಗಳ ರೆಂಬೆಗಳನ್ನು ಸವರುತ್ತಾ ದಾಪುಗಾಲು ಹಾಕುತ್ತಾ ನಡೆಯುತ್ತಿದ್ದ ಗೌಡನ ಸಮಕ್ಕೆ ನಡೆಯುವುದಿರಲಿ, ನಾನು ಓಡಬೇಕಾಗಿತ್ತು.

ಸಂಪಿಗೆ ವನದಿಂದ ಮುಂದೆ ಕಾಡು ದಟ್ಟವಾಗತೊಡಗಿತು. ಮರಗಿಡಗಳ ಹಿತವಾದ ನೆರಳಿನಲ್ಲಿ ಕಂಜಿ, ಕಲ್ಲಾರೆ ಮೊದಲಾದ ಕಾಡು ಹೂಗಳ ಕಂಪಿನಿಂದ ಬಿಸಿಲಿನ ಝಳ ತಾಗುತ್ತಿರಲಿಲ್ಲ. ಬಿದಿರು ಮೆಳೆಗಳ ಆ ಕಾಡಿನಲ್ಲಿ ಬಣ್ಣಬಣ್ಣದ ಗರಿಗಳುಳ್ಳ ಸೋಗೆ ನವಿಲುಗಳು ಸುಳಿದಾಡುತ್ತಿದ್ದವು. ನಾವು ನಾಗಜಡೆ ಬೆಟ್ಟದ ತಪ್ಪಲನ್ನು ಪ್ರವೇಶಿಸಿರುವುದಾಗಿ ಗೌಡ ಹೇಳಿದ. ಅತ್ತಿಕಾನಿನವರೆಗೂ ಹಬ್ಬಿದ್ದ ಆ ಬೆಟ್ಟದ ಸಾಲಿನಲ್ಲಿ ಅಲ್ಲಲ್ಲಿ ಕಾಫಿತೋಟಗಳಿದ್ದುವು. ಆ ಬೆಟ್ಟ ಸಾಲಿನಲ್ಲಿನ ಅಗಾಧವಾದ ಬಂಡೆಗಳ ಸಂದಿನಿಂದ ಎಲ್ಲೆಲ್ಲೂ ಸರ್ಪಾಕಾರದ ಬಿಳಲುಗಳು ಇಳಿಬಿದ್ದು ಆ ಬೆಟ್ಟಗಳು ಒಂದು ಬಗೆಯ ರೌದ್ರ ಕಳೆಯಿಂದ ಬೀಗುತ್ತಿದ್ದುವು. ಆ ವಿಚಿತ್ರ ಬಗೆಯ ಜೋಲು ಬಿಳಲುಗಳನ್ನು ಕಂಡು ಹಾವುಗಳೆಂದು ಭ್ರಮಿಸುತ್ತಿದ್ದೆ.

ಹಾದಿಯಲ್ಲಿ ಜಿಂಕೆಗಳ ಹಿಂಡೊಂದು ಚಿಮ್ಮಿ ನೆಗೆಯುತ್ತಾ ನಾಗಾಲೋಟದಿಂದ ಓಡಿ ಹೋಯಿತು. ಎಲ್ಲಿಂದಲೋ ಸಿಳ್ಳಿನ ಸದ್ದು ಕೇಳಿಸಿತು. ಕೆಲವೇ ಕ್ಷಣಗಳಲ್ಲಿ ಹತ್ತಾರು ಸೀಳು ನಾಯಿಗಳು ಜಿಂಕೆಯ ಹಿಂಡನ್ನು ಬೆನ್ನಟ್ಟಿ ನಮ್ಮ ಮುಂದೆಯೇ ಓಡಿಹೋದವು. ಸೀಳು ನಾಯಿಗಳಿಂದ ಕಾಡಿನ ಯಾವ ಪ್ರಾಣಿಗಳೂ ತಪ್ಪಿಸಿಕೊಳ್ಳಲಾರವೆಂದು ಸಿದ್ದೇಗೌಡ ತಿಳಿಸಿದ. ಜಿಂಕೆ, ಹಂದಿ ಮೊದಲಾದ ಮೃಗಗಳನ್ನು ಬೇಟೆಯಾಡಿ ಅವುಗಳ ಬಿಸಿರಕ್ತವನ್ನು ಹೀರುವುದೆಂದರೆ ಈ ನಾಯಿಗಳಿಗೆ ಬಹಳ ಇಷ್ಟವಂತೆ. ಈ ಸೀಳು ನಾಯಿಗಳು ತಮ್ಮ ಬೇಟೆಯ ಮೇಲೆ ಕಣ್ಣು ಹಾಕಿದ ಹುಲಿಯನ್ನು ಗುಂಪಾಗಿ ಸೇರಿಕೊಂಡು ಕೊಂದ ಪ್ರಸಂಗವನ್ನು ಗುರುವಿನ ಗದ್ದೆಯ ಕಾನಿನಲ್ಲಿ ಕಂಡಿದ್ದೇನೆಂದ ಸಿದ್ದೇಗೌಡ. ಸತ್ತ ಪ್ರಾಣಿಗಳನ್ನು ಮೂಸಿಯೂ ನೋಡದ ಈ ಕಾಡು ನಾಯಿಗಳು ನಿಂತಲ್ಲಿ ನಿಲ್ಲದೆ ಗುಂಪಾಗಿ ಸದಾ ಸಂಚರಿಸುತ್ತಿರುವುವೆಂದೂ ಸೋಲಿಗ ಗೌಡ ಹೇಳಿದ.

ಸೂರ್ಯ ಬೆಟ್ಟಗಳ ಹಿಂದೆ ಮರೆಯಾಗಲಾರಂಭಿಸಿದ. ಓಕುಳಿ ಚೆಲ್ಲಿದಂತೆ ಪಡುವಣದ ಬಾನೆಲ್ಲಾ ರಾಗರಂಜಿತವಾಯಿತು. ಆಕಾಶದಲ್ಲಿ ಪಡುವಣದಿಂದ ಮೂಡಣ ದಿಕ್ಕಿಗೆ ಹಕ್ಕಿಗಳ ಸಾಲೊಂದು ವೇಗವಾಗಿ ಹಾರಿಹೋಗುತ್ತಿತ್ತು. ಹಾದಿಯಲ್ಲಿ ಸಿಕ್ಕಿದ ನೀರಿನ ಕೊಲ್ಲಿಯಲ್ಲಿ ಕಾಡೆಮ್ಮೆಗಳ ಹಿಂಡೊಂದು ಸಾವಕಾಶ ನೀರು ಕುಡಿಯುತ್ತಿತ್ತು. ಯಾವ ಪ್ರಚೋದನೆಯೂ ಇಲ್ಲದಿದ್ದರೆ ಈ ಕಾಡೆಮ್ಮೆಗಳು ಊರಿನ ಎಮ್ಮೆಗಳಿಗಿಂತ ಸಾಧು ಪ್ರಾಣಿಗಳು ಎಂದ ಗೌಡ. ಕೆಲವಾರು ವರ್ಷಗಳ ಹಿಂದೆ ಬಿಳಿಗಿರಿಯ ಎದ್ದಿನಿ ಬೆಟ್ಟದ ತಪ್ಪಲಲ್ಲಿ ದೊಡ್ಡ ರೋಗ ಬಡಿದು

ಕಾಡೆಮ್ಮೆಗಳ ಹಿಂಡಿಗೆ ಹಿಂಡೇ ಸತ್ತಿತ್ತಂತೆ. ಕಾಡೆಮ್ಮೆಗಳನ್ನು ಗಾಬರಿಗೊಳಿಸದಿರಲು ನಾವು ಕೊಲ್ಲಿಯ ಬಳಿ ಹೋಗದೆ ಬಳಸು ದಾರಿಯಲ್ಲಿ ಸಾಗಿದೆವು.

ಸಂಜೆಗತ್ತಲು ನಾಲ್ಕೂ ಕಡೆಯಿಂದ ಮುಸುಕುತ್ತಿದ್ದಂತೆ ಮರದ ಮೇಲೆ ಕುಳಿತಿದ್ದ ಕಾಡುಹಕ್ಕಿಯೊಂದು 'ಚುಕ್ ಚುಕ್ ಚುಕ್ ಚುಕೂ' ಎಂದು ವಿಚಿತ್ರವಾಗಿ ಕಿರುಚಿದಾಗ ನಾನು ಬೆಚ್ಚಿಬಿದ್ದೆ. ಪೂರ್ತಿ ಕತ್ತಲಾಗುವ ಮುನ್ನ ಅಡವಿಯಂಚಿನ ಯರ್ರಗ ಬಾಳು ಎಂಬ ಕುಗ್ರಾಮವನ್ನು ತಲಪಿದೆವು. ವಿದ್ಯುತ್ ಸಂಪರ್ಕವಿಲ್ಲದ ಈ ಗ್ರಾಮ ತಮಿಳು ನಾಡಿನ ಸತ್ಯಮಂಗಲ ತಾಲೂಕಿಗೆ ಸೇರಿತ್ತು. ಕತ್ತಾಳೆಯನ್ನು ಹೊದೆಸಿದ್ದ ಮಣ್ಣಿನ ಮಾಳಿಗೆಯ ಸುಮಾರು ಮೂವತ್ತು ನಲವತ್ತು ಮನೆಗಳಿದ್ದುವು. ಗ್ರಾಮದ ಜನ ಕನ್ನಡವನ್ನು ಒಂದು ರೀತಿಯ ಉಚ್ಚಾರದಿಂದ ಮಾತನಾಡುತ್ತಿದ್ದರು. ಮಾತಿನ ನಡುವೆ ತಮಿಳು ಪದಗಳನ್ನು ಧಾರಾಳವಾಗಿ ಉಪಯೋಗಿಸುತ್ತಿದ್ದರು. ಆ ಹಾದಿಯಲ್ಲಿ ಆಗಾಗ ಪ್ರಯಾಣ ಮಾಡುತ್ತಿದ್ದ ಸೋಲಿಗ ಸಿದ್ದೇಗೌಡನಿಗೆ ಆ ಗ್ರಾಮದ ಗೌಡರ ಪರಿಚಯವಿತ್ತು. ಹಸಿದಿದ್ದ ನಮ್ಮಿಬ್ಬರಿಗೂ ಅವರು ಗಡದ್ದಾಗಿ ರಾಗಿ ಮುದ್ದೆ, ಕಾಡು ಸೀಗೆ ಸೊಪ್ಪಿನ ಸಾರು ಬಡಿಸಿ ಉಪಚರಿಸಿದರು. ಹೊದೆಯಲು ಇಬ್ಬರಿಗೂ ಕರಿ ಕಂಬಳಿಗಳನ್ನು ಕೊಟ್ಟರು. ಆಯಾಸದಿಂದ ಬಳಲಿ ಬೆಂಡಾಗಿದ್ದ ನಾನು ಕಂಬಳಿಯನ್ನು ಹೊದ್ದು ಮಲಗಿದೊಡನೆಯೆ ನಿದ್ರೆಯಲ್ಲಿ ಮುಳುಗಿದೆ.

ಬೆಳಗಾಗೆದ್ದು ಊರಾಚೆಯ ತೊರೆಯಲ್ಲಿ ಮಿಂದು ಗೌಡರು ಆದರದಿಂದ ನೀಡಿದ ಉಪಾಹಾರವನ್ನು ಮೆಲ್ಲತೊಡಗಿದೆವು. ಸೋಲಿಗರ ಹಾಡು ಹಸೆಗಳನ್ನು ಸಂಗ್ರಹಿಸಲು ಬೆಂಗಳೂರಿನಿಂದ ಬಂದ ನನ್ನ ಉದ್ದೇಶವನ್ನು ತಿಳಿದು ಗೌಡರಿಗೆ ಸೋಜಿಗವಾಯಿತು.

"ಹಾಡು ಹಸೆ ಅಂತ ಸೋಲಿಗ್ರಿಂದೆ ಅಡವ್ಯಾಗೆ ತಿರ್ಗ್ಗೋ ಪ್ಯಾಟೀ ಮಂದೀನ ನಾ ಈತನ್ಕ ಕಂಡಿಲ್ಲ ಬಿಡಿ," ಎಂದು ಸೋಜಿಗದ ಮಾತನಾಡಿದರು.

ಮುಂದಿನ ಪಯಣಕ್ಕೆ ನಾವು ಸಜ್ಜಾದಾಗ ಗೌಡರು ಹಿತ್ತಲಿಗೋಗಿ ಒಂದು ಬಲವಾದ ಬಿದಿರು ಕೋಲನ್ನು ತಂದು ನನ್ನ ಕೈಗಿತ್ತು, "ಅಡವ್ಯಾಗೆ ನಡೀವಾಗ ಬರೀ ಕೈ ಇರಬಾರ್ದು. ಹಿಂದಿರುಗಿ ಬರೋವಾಗ ಮತ್ತೆ ನಮ್ಮಟ್ಟಿಗೆ ಬಂದ್ಹೋಗಿ," ಎಂದು ಆತ್ಮೀಯವಾಗಿ ಬೀಳ್ಕೊಟ್ಟರು.

ಮುಂದೆ ಎರಡು ಗಂಟೆಗಳ ಕಾಲ ಸತತವಾಗಿ ಬಿದಿರು ಮೆಳೆಗಳ ಕಾಡಲ್ಲಿ ನಡೆದು ಹಿರಿಮಂಚಲ ಎಂಬ ಗ್ರಾಮವನ್ನು ತಲುಪಿದೆವು. ಅಷ್ಟರಲ್ಲಿ ನನ್ನ ಕಾಲುಗಳು 'ಪದ' ಹೇಳತೊಡಗಿದುವು. ಹಿಂದಿನ ದಿನ ಬಿಳಿಗಿರಿಯಿಂದ ಹೊರಟಾಗಿನ ಉತ್ಸಾಹ-ಕಸುವು ಮಾಯವಾಗಿತ್ತು. ಹಿರಿಮಂಚಲ ಗ್ರಾಮದ ಗೌಡರ ಬಳಿ ಹತ್ತಾರು ಮಂದಿ ಊರಾಳಿ ಸೋಲಿಗರು ಜೀತಕ್ಕಿದ್ದರು. ಸಿದ್ದೇಗೌಡ ಅವರೊಂದಿಗೆ ಕುಳಿತು ಎಲೆ ಅಡಿಕೆ ಜಗಿಯುತ್ತಾ ಸ್ವಲ್ಪ ಹೊತ್ತು ಮಾತನಾಡಿದ. ಊರಾಳಿ ಸೋಲಿಗರು ಮಲೆ ಅಥವಾ ಕಾಡು ಸೋಲಿಗರ ಆಚಾರ ಸಂಪ್ರದಾಯಗಳನ್ನನುಸರಿಸುವುದಿಲ್ಲವೆಂದು ಸಿದ್ದೇಗೌಡನಿಂದ ತಿಳಿದು ಬಂತು. ಅವರು ಅನೇಕ ತಲೆಮಾರುಗಳಿಂದ ಊರೊಟ್ಟಿಗೆ ಬಾಳುವೆ ಮಾಡುವುದರಿಂದ ಸೋಲಿಗರ ಕುಲದ ಮೂಲಾಚಾರಗಳನ್ನು ಬಿಟ್ಟಿರುವುದಾಗಿ ಗೌಡ ತಿಳಿಸಿದ.

ಹಿರೇಮಂಚಲ ಗ್ರಾಮದಿಂದ ನಮ್ಮ ಪಯಣ ಮುಂದುವರಿಯಿತು. ಹೊತ್ತು ನೆತ್ತಿಗೇರುವ ಮೊದಲು ಗೇರು ಮಾಳವನ್ನು ತಲುಪುವ ಕಾತರ ಸಿದ್ದೇಗೌಡನಿಗೆ. ನನ್ನ ಅಂಗಾಲುಗಳು ಭಗಭಗ ಉರಿಯುತ್ತಿದ್ದವು. ಕಾಲನ್ನು ಎಳೆದೆಳೆದುಕೊಂಡು ನಿಧಾನವಾಗಿ ನಡೆಯುತ್ತಿದ್ದೆ. ನನ್ನಿಂದಾಗಿ ಸಿದ್ದೇಗೌಡನ ವೇಗದ ನಡಿಗೆ ಅನಿವಾರ್ಯವಾಗಿ ಕುಂಠಿತವಾಯಿತು. ಅವನ ಕಾಲಿಗೆ ನಾನು ಉರುಳಾದಂತೆನಿಸಿತು. ಸ್ವಲ್ಪವೂ ಬೇಸರಿಸದೆ ಸೋಲಿಗಗೌಡ ನನ್ನನ್ನು ನಡೆಸಿಕೊಂಡು ಹೊತ್ತು ನೆತ್ತಿಗೇರುವ ಮೊದಲೇ

ಗೇರುಮಾಳವನ್ನು ತಲುಪಿದ. ಗೇರುಮಾಳ ಒಂದಷ್ಟು ದೊಡ್ಡ ಗ್ರಾಮ. ಅರಣ್ಯ ಇಲಾಖೆಯ ಚಿಕ್ಕ ಠಾಣೆಯೊಂದು ಅಲ್ಲಿತ್ತು. ಸತ್ಯಮಂಗಲ ದಿಂದ ಆಗಾಗ ಖಾಸಗಿ ಲಾರಿಗಳು ಬಿದಿರು ತುಂಬಿಕೊಂಡೊಯ್ಯಲು ಗೇರುಮಾಳಕ್ಕೆ ಬಂದು ಹೋಗುತ್ತಿದ್ದುವು. ಅನೇಕ ಮಂದಿ ಊರಾಳಿ ಸೋಲಿಗರು ಸರಕಾರ ಕಟ್ಟಿಸಿಕೊಟ್ಟಿದ್ದ ವಸತಿಗ ಳಲ್ಲಿ ನೆಲೆಸಿದ್ದರು. ಈ ಊರಾಳಿಗಳು ಬಹಳ ಹಿಂದೆಯೇ ಕಾಡಿನಿಂದ ಹೊರಬಂದು ಊರೊ ಟ್ಟಿಗೆ ಬದುಕನ್ನು ಆರಂಭಿಸಿದ್ದರಂತೆ.

ಗೇರುಮಾಳದಲ್ಲಿ ಜಡೆ ಸ್ವಾಮಿಯ ಗುಡಿ ಯಿತ್ತು. ದೇವರ ದರ್ಶನಕ್ಕಾಗಿ ಪ್ರತಿದಿನ ಅಕ್ಕ ಪಕ್ಕದ ಕಾಡುಗಳಿಂದ ಸೋಲಿಗರು ಬರುತ್ತಿ ದ್ದರು. ಜಡೆ ಸ್ವಾಮಿ ಸೋಲಿಗರ ದೈವಗಳ ಲ್ಲೆಲ್ಲಾ ಪ್ರಮುಖವಾದ ದೈವ. ನಾವಿಬ್ಬರೂ ಗುಡಿಗೆ ಸಮೀಪದಲ್ಲಿದ್ದ ಕಲ್ಯಾಣಿಯಲ್ಲಿ ಮಿಂದು ಗುಡಿಗೆ ಹೋಗಿ ದೈವಕ್ಕೆ ಅಡ್ಡ ಬಿದ್ದೆವು. ಸಿದ್ದೇಗೌಡ ಹಣ್ಣು ಕಾಯಿ ಕೊಂಡು ಕೊಂಡು ದೈವಕ್ಕೆ ಪೂಜೆ ಮಾಡಿಸಿ ಮೊಮ್ಮಕ್ಕಳಿ ಗಾಗಿ ಪ್ರಸಾದವನ್ನು ಪಡೆದುಕೊಂಡು ಗಂಟಿಗೆ ಸೇರಿಸಿದ. ಹೊಟೆಲೊಂದರಲ್ಲಿ ಇಬ್ಬರೂ ಒಂದಿಷ್ಟು ತಿಂಡಿ ತಿಂದು ಮೂಡಣ ದಿಕ್ಕಿನಲ್ಲಿ ಪಯಣವನ್ನು ಮುಂದುವರಿಸಿದೆವು.

ಕಾಡಿನಲ್ಲಿ ನೀರಿನ ಆಸರೆಯನ್ನು ಹುಡುಕಿ ಕೊಂಡು ಆನೆಯ ಹಿಂಡೊಂದು ಸಾಗಿತ್ತು. ಕಪ್ಪು ಬಣ್ಣದ ಹಸುವೊಂದು ಆನೆಗಳ ಜೊತೆಯಲ್ಲಿ ಸಾಗುತ್ತಿದ್ದುದನ್ನು ಕಂಡು ನಮಗೆ ಸೋಜಿಗವಾ ಯಿತು. ಊರಿನಿಂದ ತಪ್ಪಿಸಿಕೊಂಡು ಬಂದಿರ ಬಹುದಾದ ಆ ಒಂಟಿ ಹಸು ಆನೆಯ ಹಿಂಡನ್ನು ಹೇಗೆ ಸೇರಿಕೊಂಡಿತೋ ತಿಳಿಯದು. "ಆನೆ ಗಳಿಗೆ ಬಿಳಿಯ ಬಣ್ಣ ಕಂಡರೆ ಇಷ್ಟವಾಗುವುದಿ ಲ್ಲವಂತೆ. ಆದ್ದರಿಂದ ಕರಿಯ ಹಸುವನ್ನು ಜೊತೆಗೆ ಸೇರಿಸಿಕೊಂಡಿರಬಹುದು," ಎಂದು ಸಿದ್ದೇಗೌಡ ಹೇಳಿದಾಗ ನನಗೆ ನಗು ಬಂತು. ಆನೆಗಳು ಕಾಡಿನ ರಸ್ತೆಯ ಬದಿಯಲ್ಲಿ ನೆಟ್ಟಿ ರುವ ಬಿಳಿ ಬಣ್ಣ ಬಳಿದ ಮೈಲುಗಲ್ಲುಗಳನ್ನು ಕಿತ್ತು ಹಾಕುತ್ತಿದ್ದ ಪ್ರಸಂಗವನ್ನು ಹೇಳಿ ಗೌಡ ತನ್ನ ಮಾತನ್ನು ಸಮರ್ಥಿಸಿಕೊಂಡಾಗ, ಅವನ ಮಾತನ್ನು ನಂಬುವ ಹಾಗಾಯಿತು.

ಸಿದ್ದೇಗೌಡನ ಮುಖದಲ್ಲಿ ಆಯಾಸದ ಲವ ಲೇಶವೂ ಮೂಡಿರಲಿಲ್ಲ. ನಡೆನಡೆದು ಅವನ ಕಾಲುಗಳು ಕಲ್ಲಿನ ಕಂಬಗಳಂತೆ ದೃಢವಾಗಿ ದ್ದವು. ಹಾದಿಯಲ್ಲಿ ಕಾಡಿನ ನಡುವೆ ಹರಿಯು ತ್ತಿದ್ದ ಕಿರು ತೊರೆಯೊಂದು ಎದುರಾಯಿತು. ಕೆಲವು ಮಂದಿ ಸೋಲಿಗರ ಹುಡುಗರು ಮೀನು ಹಿಡಿಯುತ್ತಿದ್ದರು. ಲಂಗೋಟಿ ಕಟ್ಟಿಕೊಂಡಿದ್ದ ಆ ಹುಡುಗರ ಮೈ ಕಾಡಿಗೆಯಂತೆ ಕಪ್ಪಾಗಿತ್ತು. ಲಂಗೋಟಿಗೂ ಗತಿಯಿಲ್ಲದ ಕೆಲವು ಮಕ್ಕಳು ಸೊಂಟಕ್ಕೆ ಅಂಬೊಂದನ್ನು ಬಿಗಿದಕೊಂಡು ಮಾನವನ್ನು ಮರೆಮಾಡಿಕೊಳ್ಳಲು ಎಂಥದೋ ಅಗಲವಾದ ಎಲೆಗಳನ್ನು ಸಿಕ್ಕಿಸಿಕೊಂಡಿದ್ದವು. ತಿಳಿಯಾದ ನೀರಿನಲ್ಲಿ ಮೀನನ್ನು ಕಂಡೊಡನೆ ಅವರು ಚೂಪಾದ ಬಿದಿರು ಕೋಲಿನ ಕೊನೆ ಯಿಂದ ಸರಕ್ಕನೆ ಕುಕ್ಕಿ ಹಿಡಿಯುತ್ತಿದ್ದರು. ನಾನು ಸಿದ್ದೇಗೌಡನೊಂದಿಗೆ ಬಂಡೆಯೊಂದರ ಮೇಲೆ ಕುಳಿತು ಹುಡುಗರು ಮೀನು ಹಿಡಿಯುತ್ತಿದ್ದ ವಿಧಾನವನ್ನು ಗಮನಿಸುತ್ತಿದ್ದೆ.

ಸಿದ್ದೇಗೌಡ ಬೀಡಿಯಲ್ಲಿ ಭಂಗಿಸೊಪ್ಪಿನ ಹುಡಿಯನ್ನು ತುಂಬಿ ಗಡದ್ದಾಗಿ ಒಂದೆರಡು ಸಲ ದಮ್ಮೆಳೆದ. ಕೆಲವೇ ನಿಮಿಷಗಳಲ್ಲಿ ಅವನ ಕಣ್ಣು ಗಳು ಕೆಂಪಡರಿ ಹಿತವಾದ ಮತ್ತಿನಲ್ಲಿ ಓಲಾಡ ತೊಡಗಿದ. ಆ ಹುಡುಗರಲ್ಲಿ ದೊಡ್ಡ ಹುಡುಗ ನೊಬ್ಬ ಕೋಲಿನ ಮೊನೆಯಿಂದ ಮೀನೊಂದು ನೀರಿನಿಂದ ಮೇಲೆ ತಲೆ ಎತ್ತಿದೊಡನೆ ಕುಕ್ಕಿ ಹೊರತೆಗೆದ. ಹುಡುಗರೆಲ್ಲಾ ಸಂತೋಷದಿಂದ 'ಹೋ' ಎಂದು ಕಿರುಚಿದರು. ಅದುವರೆಗೆ ದೊರೆತಿದ್ದ ಮೀನುಗಳಲ್ಲೆಲ್ಲಾ ಅದು ದೊಡ್ಡ ದಾಗಿತ್ತು.

ಸಿದ್ದೇಗೌಡ ಭಂಗಿಯ ಅಮಲಿನಿಂದ ತೊದಲುತ್ತಾ, "ಏಕ್ಲಾ ನಿಮ್ದು ಯಾವ್ ಪೋಡ್ರೋ?" ಎಂದು ಕೇಳಿದ.

"ಧೂಪದ್ಮಲೆ ಒತ್ನಾಗಿರೋ ಸಂಕಮ್ನ

ಪೋಡಾಯ್ತಯ್ಯಾ,'' ಎಂದು ಉತ್ತರಿಸಿದ ದೊಡ್ಡ ಹುಡುಗ.

''ಅರೆ! ನಮ್ಮಳಿಮ್ಯಯ ನೀಲಯ್ಯ ಅವ ನೆಂಡ್ರು ಸಂಕಿ ಎಂಗವ್ರೋ ಹೈದ,'' ಎಂದ ಸಿದ್ದೇಗೌಡ ಸಂಭ್ರಮದಿಂದ.

''ಸೆಂದಾಕವ್ರೆ ಕಣಯ್ಯೋ. ನಡೀರಿ ಓಗಾನ,'' ಎಂದು ದೊಡ್ಡ ಹುಡುಗ ಹಿಡಿದ ಮೀನುಗಳನ್ನು ಬುಟ್ಟಿಯಲ್ಲಿ ತುಂಬಿಕೊಂಡು ಜೊತೆಯ ಹುಡುಗರೊಂದಿಗೆ ನಮ್ಮನ್ನು ಕೂಡಿಕೊಂಡು ಪೋಡಿನೆಡೆ ನಡೆಯಲಣಿಯಾದ.

''ನಾಳೀಕೆ ಆನೆ ಕುಂಭಪ್ನ ಪರಾವು ಮಾಡಿ ಅಂಬ್ಲಿ ಉಯ್ತಾರಯ್ಯೋ - ಮಳಿ ಬೆಳಿ ಆಗಿ ಆನೆ; ದನದ ಕಾಟ ತಪ್ಲಿ ಅಂತ.'' ಮತ್ತೊಬ್ಬ ಚಿಕ್ಕ ಹುಡುಗ ಪರಾವಿನ ಸುದ್ದಿಯನ್ನು ಸಡಗರದಿಂದೆಂಬಂತೆ ಹೇಳಿದ. ಪರಾವಿನ ಸುದ್ದಿ ಸಿದ್ದೇಗೌಡನಿಗೆ ಮೊದಲೇ ತಿಳಿದಿತ್ತು.

★

ಹಾದಿಯಲ್ಲಿ ಬಿದಿರಿನ ಮೆಳೆಗಳು ದಟ್ಟವಾಗಿದ್ದವು. ಅರ್ಧಗಂಟೆ ನಡೆಯುವುದರಲ್ಲಿ ಬೆಟ್ಟದ ಕಿಬ್ಬಿಯಲ್ಲಿ ಪವಡಿಸಿದ್ದ ಸಂಕಮ್ಮನ ಪೋಡು ಗೋಚರಿಸಿತು. ಬೆಟ್ಟಗಳ ಸಾಲಿನಲ್ಲಿ ತುಸು ಎತ್ತರವಾದ ಬೆಟ್ಟವೇ ಧೂಪದಮಲೆ ಬೆಟ್ಟ. ಬೆಟ್ಟದ ಕಿಬ್ಬಿಯಲ್ಲಿ ಹತ್ತಿಪ್ಪತ್ತು ಗುಡಿಸಲುಗಳಿದ್ದವು. ಪೋಡಿನ ಸುತ್ತಾ ಹತ್ತಾರು ಮಾರುಗಳವರೆಗೆ ಕಾಡನ್ನು ಸವರಿದ್ದರು. ಪೋಡಿನ ನಡುವೆ ಹಾಕಿದ್ದ ಬೆಂಕಿಯಿಂದ ಸದಾ ಹೊಗೆ ಮೇಲೇಳುತ್ತಿತ್ತು. ಬೆಂಕಿಯನ್ನು ಆರಲು ಬಿಡದೆ ಆಗಾಗ ಸೌದೆಗಳನ್ನು ಹಾಕುತ್ತಿದ್ದರು. ಕಾಡುಪ್ರಾಣಿಗಳು ಪೋಡಿನ ಹತ್ತಿರ ಸುಳಿಯದಿರಲೆಂದು ಸೋಲಿಗರು ಈ ರೀತಿ ಪೋಡಿನ ನಡುವೆ ಬೆಂಕಿ ಉರಿಸುತ್ತಿದ್ದರು. ಪ್ರತಿಯೊಂದು ಗುಡಿಸಲ ಮೇಲೂ ಕುಂಬಳ ಸೋರೆ ಬಳ್ಳಿಗಳು ಹಬ್ಬಿಕೊಂಡು ಹೊಂಬಣ್ಣದ ಹೂಗಳಿಂದ ಮಿಡಿಗಳಿಂದ ಕಂಗೊಳಿಸುತ್ತಿದ್ದವು.

ಮುದುಕಿಯೊಂದು ಗುಡಿಸಲ ಮುಂದೆ ಕುಳಿತು ಕತ್ತಾಳೆ ನಾರಿನಿಂದ ಹಗ್ಗವನ್ನು ಹೊಸೆಯುತ್ತಿತ್ತು. ಇಳಿವಯಸ್ಸಿನ ಕೆಲವು ಮಂದಿ



ಯನ್ನು ಬಿಟ್ಟು ಪೋಡಿನ ಸೋಲಿಗರೆಲ್ಲಾ ಕಾಡಿಗೆ ಹೋಗಿದ್ದರು. ಸಿದ್ದೇಗೌಡನನ್ನು ಗುರುತಿಸಿದ ಕೆಲವು ಮಂದಿ ಹಿರಿಯರು ಆತನನ್ನು ಆದರದಿಂದ ಬರಮಾಡಿಕೊಂಡರು. ಅವರೆಲ್ಲಾ ಒಟ್ಟಿಗೆ ಕುಳಿತು ಸಿದ್ದೇಗೌಡ ಕೊಟ್ಟ ಹೊಗೆಸೊಪ್ಪನ್ನು ಮೆಲ್ಲುತ್ತಾ ಮಾತುಕತೆಗೆ ತೊಡಗಿದರು.

ಸಂಜೆಯ ಹೊತ್ತಿಗೆ ಅಡವಿಯಿಂದ ಪೋಡಿಗೆ ಹಿಂದಿರುಗಿದ ಸಿದ್ದೇಗೌಡನ ಮಗಳು, ಅಳಿಯ ಆತನನ್ನು ಆದರದಿಂದ ಕಂಡು ಬಿಳಿಗಿರಿಯ ಬಂಧುಗಳ ಕ್ಷೇಮವನ್ನು ವಿಚಾರಿಸಿದರು. ಗೌಡನ ಮಗಳು ತಾಯಿಯನ್ನು ನೆನೆಸಿಕೊಂಡು ಅತ್ತೇ ಬಿಟ್ಟಳು. ಅಳಿಯ ಅತ್ತೆಯನ್ನು ಕರೆದುಕೊಂಡು ಬರದೆ ಇದ್ದದ್ದಕ್ಕಾಗಿ ಮಾವನನ್ನು ಆಕ್ಷೇಪಿಸಿದ. ಹೆಂಡತಿಯನ್ನು ಕರೆದುಕೊಂಡು ಬರದೆ ಇದ್ದದ್ದಕ್ಕೆ ಸಬೂಬು ಹೇಳುತ್ತಿರಬೇಕಾದರೆ ಇಬ್ಬರು ಮೊಮ್ಮಕ್ಕಳು ಓಡಿ ಬಂದು, ''ತಾತೋ ಏನ್ ತಂದಿದ್ದಿ?'' ಎಂದು ಸಿದ್ದೇಗೌಡನ ಕೊರಳಿಗೆ ಜೋತು ಬಿದ್ದರು. ಗೌಡ ತಾನು ತಂದಿದ್ದ ಗಂಟನ್ನು ಮಗಳ ಕೈಗಿತ್ತು ಕಳ್ಳೆಪುರಿಯನ್ನು ಐಕಳಿಗೆಲ್ಲಾ ಹಂಚುವಂತೆ ಹೇಳಿದ. ಗೌಡ ಬಿಳಿಗಿರಿಯಿಂದ ಜತನದಿಂದ ತಂದಿದ್ದ ಭಂಗಿ ಸೊಪ್ಪನ್ನು ಅಂಗೈಯಲ್ಲಿಟ್ಟುಕೊಂಡು ಹೊಸಕಿ ಪುಡಿ ಮಾಡಿ ಬೀಡಿಗಳಲ್ಲಿ ತುಂಬಿ

...ಜ್ಞಾಂದಿಗೆ ಕುಳಿತಿದ್ದ ಹಿರಿಯರಿಗೆಲ್ಲಾ ಕೊಟ್ಟ. ...ಸ್ವಲ್ಪ ಹೊತ್ತಿನಲ್ಲಿ ಅವರೆಲ್ಲಾ ಭಂಗಿಯ ಅಮಲಿನಲ್ಲಿ ತೇಲುತ್ತಾ ತಮ್ಮ ಬದುಕಿನ ಹಿಂದಿನ ...ಹಿಂದಿನ ವಿಷಯಗಳನ್ನು ಕುರಿತು ಅಸಂಬದ್ಧವಾಗಿ ತೊದಲತೊಡಗಿದರು.

...ನನಗಾಗಿ ಇಳಿದುಕೊಳ್ಳಲು 'ಕಟ್ಟೆಮನೆ' ...ಎಂಬ ಹುಲ್ಲು ಹೊದಿಸಿದ ಮಂಟಪದಂತಹ ...ಪ್ಪರದಡಿಯಲ್ಲಿ ವ್ಯವಸ್ಥೆ ಮಾಡಿಕೊಟ್ಟರು. ...ಜಮಾನರು ಮತ್ತು ಪಟ್ಟಿಗಾರರು ನ್ಯಾಯ ...ನಿರ್ಣಯ ಮಾಡುವ ಸಂದರ್ಭದಲ್ಲಿ ಈ ಕಟ್ಟೆ ...ಮನೆ ಮಂಟಪವನ್ನು ಉಪಯೋಗಿಸುತ್ತಿದ್ದರು.

...ಮಧ್ಯಾಹ್ನ ತೊರೆಯಲ್ಲಿ ಮೀನು ಹಿಡಿಯುತ್ತಿದ್ದ ಹುಡುಗರಲ್ಲಿನ ದೊಡ್ಡ ಹುಡುಗ ನನ್ನ ...ಳಿ ಬಂದು ಕುಳಿತು ಬೆಂಗಳೂರು ನಗರದ ಬಗ್ಗೆ ...ಏನೇನೋ ಕೇಳತೊಡಗಿದ. ಬೆಂಗಳೂರು ನಗರ ...ಎಷ್ಟು ದೊಡ್ಡದಿರಬಹುದು? ಅಲ್ಲಿ ಎಷ್ಟು ...ಜನರಿರಬಹುದು? ಅಲ್ಲಿ ನೋಡಲು ಏನೆಲ್ಲಾ ...ಇದೆ? ಎಂದು ಕುತೂಹಲದಿಂದ ಅನೇಕ ಪ್ರಶ್ನೆ...ಗಳನ್ನು ಹಾಕಿದ. ಅವನ ಪ್ರಶ್ನೆಗಳಿಗೆ ನಾನು ...ಕೊಡುತ್ತಿದ್ದ ಉತ್ತರ ಅವನ ಕಲ್ಪನೆಗೆ ಎಟಕುತ್ತಿ...ರಲಿಲ್ಲ. ಅವನು ಇದುವರೆಗೆ ನೋಡಿದ ದೊಡ್ಡ ...ಊರೆಂದರೆ ಸತ್ಯಮಂಗಲದ ಪೇಟೆ. ಅದೂ ಚಿಕ್ಕ ...ಹುಡುಗನಾಗಿದ್ದಾಗ ಹತ್ತುವರ್ಷಗಳ ಹಿಂದೆ ...ತಂದೆಯೊಂದಿಗೆ ಜೇನು ಮಾರಲು ಹೋಗಿ...ದ್ದಾಗ ಕಂಡದ್ದು. ಆತನ ಹೆಸರು ಜಡೆಸಿದ್ದ.

...ಮಾರ್ನೆಯ ದಿನ ನಡೆಯಲಿರುವ ಪರಾವಿನ ...ಬಗ್ಗೆ ಜಡೆಸಿದ್ದ ಹೇಳತೊಡಗಿದ. ಆ ವರ್ಷ ...ಆನೆಗಳ ಉಪಟಳ ಹೆಚ್ಚಾಗಿ ಇವರು ಬೆಳೆದ ...ಪೈರೆಲ್ಲಾ ಬೆಳೆಯನ್ನೆಲ್ಲಾ ನಾಶ ಮಾಡಿದುವಂತೆ. ...ರಾತ್ರಿಯಾದರೆ ಆನೆಗಳು ಬೆಂಕಿಗೂ ಬೆದರದ ...ಪೋಡಿಗೇ ನುಗ್ಗುತ್ತಿದ್ದುವಂತೆ. ಆಚನೂರಿನ ...ಕುಂಭಪ್ಪ ದೈವಕ್ಕೆ ಬೆಲ್ಲದ ತಳಿಗೆ ನೀಡುವುದಾಗಿ ...ಹರಕೆ ಹೊತ್ತದ್ದಾಯಿತು. ಜಡೆಮಾಳದಿಂದ ...ಮಾಟಗಾರರನ್ನು ಕರೆಸಿ ಪೋಡಿನ ಬಳಿ ಸಾರ...ವಂತೆ ಆನೆಗಳಿಗೆ 'ಆನೆಕಟ್ಟು' ಮಾಡಿಸಿದರು. ...ಏನೂ ಫಲ ಕಾಣಲಿಲ್ಲವೆಂದು ಹೇಳಿದ. ಆನೆ ದೈವ ಕುಂಭಪ್ಪನನ್ನು ಒಲಿಸಿಕೊಳ್ಳಲು ನಾಳೆ ಪರಾವು ಮಾಡುತ್ತಿರುವುದಾಗಿ ಹೇಳಿದ. ನಾನು ಅಲ್ಲಿಗೆ ಬಂದ ಉದ್ದೇಶದ ನೆನಪಾಗಿ ಸೋಲಿಗರ ಜಾನಪದ ಹಾಡುಗಳನ್ನು ಹೇಳುವಂತೆ ಒತ್ತಾಯಿಸಿದೆ. ಅವನು ತನಗೆ ಗೊತ್ತಿದ್ದ ಕೆಲವು ಗೋರುಕಾ, ಒಲೆಪದಗಳನ್ನು ಸಂಕೋಚದಿಂದ ಹೇಳಿದ್ದನ್ನು ಪದೇ ಪದೇ ಹೇಳಿಸಿ ಬರೆದುಕೊಂಡೆ. ದೂರದ ಪಟ್ಟಣದಿಂದ ಬಂದ ನನ್ನಂಥ ಅಪರಿಚಿತನೊಬ್ಬ ಸೋಲಿಗರ ಹಾಡುಗಳ ಬಗ್ಗೆ ಆಸಕ್ತಿ ತೋರಿಸಿದ್ದು ಅವನಿಗೆ ಸೋಜಿಗದ ವಿಷಯವಾಗಿತ್ತು. ತಮ್ಮಲ್ಲಿನ ಸಂಕಣ್ಣಗೌಡನೆಂಬ ಸೋಲಿಗನಿಗೆ ಮಾತ್ರ ಸೋಲಿಗರ ಜಾನಪದ ಪ್ರಕಾರಗಳೆಲ್ಲಾ ಚೆನ್ನಾಗಿ ತಿಳಿದಿದೆಯೆಂದು ಹೇಳಿದ. ಅಲ್ಲದೆ "ಅವನು ಒಳ್ಳೆಯ ಹಾಡುಗಾರನಾಗಿಯೂ ಹೆಸರುವಾಸಿಯಾಗಿದ್ದಾನೆ," ಎಂದ. ಅವನು ತನ್ನ ಗುಡಿಸಿಲಿಗೆ ಹೋಗಿ ಸುಟ್ಟ ಸೀಮೇ ಗೆಣಸು, ಮಣ್ಣಿನ ಚರುಕಿನಲ್ಲಿ ಬಿಸಿಯಾದ ರಾಗಿ ಅಂಬಲಿಯನ್ನು ತಂದುಕೊಟ್ಟ. ಆದಿನ ಊಟ ಅಷ್ಟಕ್ಕೇ ಮುಗಿಯಿತು.

ಪೋಡಿನ ನಡುವೆ ಉರಿಯುತ್ತಿದ್ದ ಬೆಂಕಿಯ ಮುಂದೆ ಲಂಗೋಟಿ ಧರಿಸಿದ್ದ ಸೋಲಿಗರ ಹುಡುಗರು ರಾಗವಾಗಿ ಹಾಡಿಕೊಂಡು ಕುಣಿಯುತ್ತಿದ್ದರು. ಪ್ರಯಾಣದ ಆಯಾಸದಿಂದ ಕಣ್ಣೆಳೆಯುತ್ತಿತ್ತು. ಜಡೆಸಿದ್ದ ಏನೇನೋ ಹೇಳುತ್ತಿದ್ದ. ನಡುವೆ ನನಗೆ ನಿದ್ದೆ ಬಂದುದೇ ತಿಳಿಯಲಿಲ್ಲ.

★

ಬೆಳಗಾದಾಗ ಕಟ್ಟೆ ಮನೆಯ ಹೊರಗೆ ಕುಳಿತಿದ್ದ ಜಡೆಸಿದ್ದ ಕಣ್ಣಿಗೆ ಬಿದ್ದ. ನಾನು ಎದ್ದುದನ್ನು ಕಂಡು ಬಳಿ ಬಂದ. ಬೆಟ್ಟದ ಕಿಬ್ಬಿಯಲ್ಲಿ ಹರಿಯುತ್ತಿದ್ದ ಕಿರುತೊರೆಯ ಬಳಿ ಕರೆದುಕೊಂಡು ಹೋದ. ತೊರೆಯಲ್ಲಿ ಹೆಚ್ಚು ನೀರಿರಲಿಲ್ಲ. ಸಮೀಪದ ಒಂದು ಕುಂಟೆಯಲ್ಲಿ ಸಾಕಷ್ಟು ನೀರಿತ್ತು. ಇಬ್ಬರೂ ಮಿಂದು ಪೋಡಿಗೆ ಬಂದೆವು. ನನಗೆ ಕಾಫಿ ಕುಡಿಯುವ ತೆವಲು ಹೆಚ್ಚಾಗಿ ಜಡೆಸಿದ್ದನನ್ನು ಕಾಫಿ ದೊರೆಯುವ

ಸಾಧ್ಯತೆಯ ಬಗ್ಗೆ ವಿಚಾರಿಸಿದಾಗ ಅವನು
ಪಕನೆ ನಕ್ಕುಬಿಟ್ಟ. ಕಾಫಿಯ ಬದಲು ಬಿಸಿಯ
ರಾಗಿ ಅಂಬಲಿಯನ್ನು ತಂದುಕೊಟ್ಟ.

ತನ್ನ ಅಳಿಯನ ಗುಡಿಸಲಲ್ಲಿ ಅಂಬಲಿ ಕ
ಯುತ್ತಿದ್ದ ಸಿದ್ದೇಗೌಡ ನನ್ನನ್ನು ಕಂಡು ಒ
ನಿಂದಲೇ, "ಬುದ್ಧಿ, ನೀವು ಇಲ್ಲಿರೋ ತ
ಜಡೆಸಿದ್ದ ನಿಮ್ಗತೆ ಇದ್ಕಂಡು ಎಲ್ಲಾ ತೋರಿ
ನೆ" ಎಂದು ಕೂಗಿ ಹೇಳಿದ. ಜಡೆಸಿದ್ದ ನನ್ನ
ಅವನ ಗುಡಿಸಲಿಗೆ ಕರೆದುಕೊಂಡು ಹೋ
ಬಿದಿರು ಚಾಪೆ ಹಾಕಿ ಕೂಡಿಸಿದ. ಜಡೆಸಿದ್ದ
ಸೋಲಿಗಿತ್ತಿ ಹೆಂಡತಿ ಒಲೆಯಲ್ಲಿ ಗೆಣಸು ಸು
ತ್ತಿದ್ದಳು. ಮಡಕೆ, ಕುಡುಕೆ, ಬಿದಿರಿನ ಬು
ಗಳು ಅಡ್ಡಗಳು ಬಿದಿರಿನ ಜೇನು ನಾಳಿಗಳ
ಬಿಟ್ಟರೆ ಅಲ್ಲಿ ಮತ್ತಾವ ವಸ್ತುಗಳೂ ಕಾ
ಲಿಲ್ಲ.

"ಜಡೆಸಿದ್ದ, ನಿನ್ನೆಂಡ್ತಿಗೆ ಹಾಡು ಹಸೆ ಬ
ತಿತ?" ಅವನ ಹೆಂಡತಿ ಸಂಕೋಚದಿ
ಒಲೆಯ ಮುಂದೆ ಮುದುಡಿಕೊಂಡು ಕು
ದ್ದಳು.

"ಅವಳ್ಗಿಲ್ಲ ಬತ್ತೈತೆ ಹಾಡುಹಸೆ ಬುದ್ಧಿ
ಈ ಕಾಲ್ದೋಷ್ಕೆ ಹಾಡೂಬರಲ್ಲ ಹಸೇನ
ಬರಲ್ಲ," ಎಂದ ಜಡೆಸಿದ್ದ.

ಅವನ ಹೆಂಡತಿ ತಂದಿತ್ತ ಸುಟ್ಟ ಗೆಣಸನ
ತಿಂದು ಪರಾವು ಮಾಡುತ್ತಿದ್ದ ಕುಂಭಪ್ಪನ ಗು
ದತ್ತ ನಡೆದೆವು. ಆಸುಪಾಸಿನ ಪೋಡುಗ
ಸೋಲಿಗರೆಲ್ಲಾ ಗುಡ್ಡದ ಮೇಲೆ ಸೇರಿದ್ದರು
ಗೇರುಮಾಳದಿಂದ ಬಂದಿದ್ದ ಇಬ್ಬರು ಕಾಕಿಧಾ
ಅರಣ್ಯರಕ್ಷಕರ ಮುಂದೆ ಬಹುಮಂದಿ ಸೋ
ಗರು ದೈವದ ಮುಂದೆ ಬಾಗುವುದಕ್ಕಿಂತಲು
ಮಿಗಿಲಾಗಿ ಬಾಗಿ ಬಾಗಿ ನಮಿಸುತ್ತಿದ್ದರು
ಸೋಲಿಗರು ತೋರಿಸುತ್ತಿದ್ದ ವಿಶೇಷ ಗೌರ
ದಿಂದ ಅರಣ್ಯರಕ್ಷಕರು ಉಬ್ಬಿ ಹೋಗಿದ್ದರು.

ಗುಡ್ಡದ ಮೇಲೆ ನಾಲ್ಕು ಕಂಬಗಳ ಮೇ
ಹುಲ್ಲು ಹೊದೆಸಿದ ಮಂಟಪವಿತ್ತು. ಒಳ
ವೇದಿಕೆಯ ಮೇಲೆ ನಾಲ್ಕು ಅಡಿಗಳಷ್ಟು ಎ
ರದ ಆನೆಯ ಮುಖವನ್ನು ಹೋಲುವ ಶಿಲ

ಗ್ರಹವೊಂದಿತ್ತು. ವಿಗ್ರಹಕ್ಕೆ ಅರಿಸಿನ ಕುಂಕು
ಮಗಳನ್ನು ಧಾಳಾಗಿ ಲೇಪಿಸಿದ್ದರು. ವಿಗ್ರಹದ
ಬ್ಬದಿಗಳಲ್ಲೂ ಯಾವುದೋ ಪ್ರಾಣಿಯ ತಲೆ
ಪ್ಪುಗಳಲ್ಲಿ ನೆಣವನ್ನು ಹಾಕಿ ಹಣತೆಯಂತೆ
ಉರಿಸುತ್ತಿದ್ದರು. ಸೋಲಿಗನೊಬ್ಬ ಕಿವಿಬಿರಿಯು
ವಂತೆ ತಮಟೆಯನ್ನು ಬಡಿಯುತ್ತಿದ್ದ. ಅಲ್ಲಿ
ನೆರೆದಿದ್ದ ಬಹುಮಂದಿ ಸೋಲಿಗರು ಟೊಂಕದ
ಕೆಳಗೆ ತುಂಡು ಲುಂಗಿಯನ್ನುಟ್ಟಿದ್ದ ಅರೆಬೆತ್ತಲ
ರು. ಮತ್ತೆ ಕೆಲವರು ಕೌಪೀನಧಾರಿಗಳಾದ
ಬಾಗ್ಯವಂತರು. ಹಣೆಗೆ ಭಸ್ಮ, ಕುಂಕುಮಗಳನ್ನು
ಲೇಪಿಸಿಕೊಂಡು ತಲೆಗೂದಲನ್ನು ಓರಣವಾಗಿ
ಒಂದಕ್ಕೆ ಬಾಚಿ ಗಂಟಿಕ್ಕಿಕೊಂಡು, ಕಾಡು ಹೂವು
ಗಳನ್ನು ಮುಡಿದಿದ್ದ ಸೋಲಿಗರು - ಸೋಲಿಗಿ
ತ್ತಿಯರು ಭಕ್ತಿಭಾವದಿಂದ ಕೈಜೋಡಿಸಿ ನಿಂತಿ
ದ್ದರು.

ಟೊಂಕಕ್ಕೆ ಹುಲಿಯ ಚರ್ಮವನ್ನು ಬಿಗಿದು
ಕೊಂಡು ಹುಬ್ಬುಗಳ ನಡುವೆ ದೊಡ್ಡದಾಗಿ
ಕುಂಕುಮದ ಬೊಟ್ಟಿಟ್ಟುಕೊಂಡು ಕೊರಳಿಗೆ
ಕೆಂಪು ಕಣಗಲೆ ಹೂಮಾಲೆಯನ್ನು ಧರಿಸಿ ಕಾರಿ
ರುಳಿನಂತಹ ಕಪ್ಪುದೇಹದ ಆಚನೂರಿನಿಂದ
ಬಂದಿದ್ದ ಕುಂಭಪ್ಪನ ತಮ್ಮಡಿ ದೊಡ್ಡ ಆನೆ ತಲೆ
ಚಿಪ್ಪಿನಲ್ಲಿ ತುಂಬಿದ್ದ ನೆಣದ ಹಣತೆಯಿಂದ
ದೈವಕ್ಕೆ ಮಂಗಳಾರತಿ ಬೆಳಗಿದ. ತಮಟೆಯ
ಸದ್ದು ಜೋರಾಯಿತು. ತಮ್ಮಡಿಯ ಮೇಲೆ
ದೈವ ಆವಾಹನೆಯಾದಂತೆ ತೋರಿತು. ಮುಳ್ಳಾ
ವಿಗೆಯನ್ನು ಮೆಟ್ಟಿನಿಂತು ಕೈಯಲ್ಲಿನ ಗಂಡು
ಗೊಡಲಿಯಿಂದ ಮೈಕೈಗಳಿಗೆ ಹೊಡೆದುಕೊಂ
ಡಾಗ ಕರಿಯ ಮೈಯಿಂದ ಕಪ್ಪು ರಕ್ತ
ಹರಿಯಿತು.

ಸೋಲಿಗರ ಹಿರಿಯನೊಬ್ಬ ಕೂಗಿದ,
"ಶಿಳ್ಳು ಮಾರೀನ ಕೂಗ್ರೋ" ಸೋಲಿಗರೆಲ್ಲಾ
ಗುಡಿಯ ಹಿಂಭಾಗಕ್ಕೆ ಹೋಗಿ, "ಹೋ
ಬಾರವ್ವೋ, ಬಾರವ್ವೋ ನಮ್ಮವ್ವೋ," ಎಂದು
ಒಟ್ಟಾಗಿ ಕೂಗಿದರು. ಕೆಲವರು ಲಬೋ ಲಬೋ
ಎಂದು ಬಾಯಿ ಬಡಿದು ಕೊಂಡರು. ಇತ್ತ
ತಮ್ಮಡಿ ಸನ್ನಿ ಹಿಡಿದವನಂತೆ ಥರಥರ ನಡುಗ
ತೊಡಗಿದ. ಎದೆಯನ್ನು ಪಟಪಟನೆ ಬಡಿದುಕೊ
ಳ್ಳಲಾರಂಭಿಸಿದ. ಸೋಲಿಗರ ನಡುಬಾಗಿದ್ದ
ವೃದ್ಧ ಯಜಮಾನ ಅಡ್ಡಬಿದ್ದದ್ದು ತಮ್ಮಡಿ
ಯನ್ನು ಕುರಿತು, "ಯಪ್ಪಾ ಸಾಮಿ, ನಾವೇನು
ನಿನ್ಗೆ ಕೊರೆ ಮಾಡಿದ್ವಿ ಹೇಳು? ಸಲ್ ಸಲಾನು
ನಿನ್ಗೆ ಸೆಂದಾಗಿ ಮಾಡ್ಬೇಕಾದ ಪೂಜೆ ಮಾಡ್ಕಂಡು
ಬತ್ತಿಲ್ವಾ? ಈ ಸಲ ಮಳೆ ಬೆಳೆ ಆಗಿಲ್ಲ. ನೀರಿಲ್ದೆ
ಅಡವಿ ಪಸು ಪಕ್ಷಿಯೆಲ್ಲಾ ಬಾಯ್ ಬಾಯ್
ಬಿಡ್ತಾವೆ. ಆನೆ ಕಾಟಂತೂ ಏಳ್‌ತೀರ್ದು. ಯಾನ
ತಪ್ಪು ಮಾಡಿದ್ವೀ ಅಂತ ಈ ಸಿಕ್ಸೆ! ಮುಕ್ಕಣ್ಣ
ನೀನು. ನಿನ್ಗೆ ತಿಳೀದ್ದು ಯಾನೈತಿ?" ಎಂದು
ಮನ ಕರಗುವಂತೆ ಪ್ರಾರ್ಥಿಸಿ ಮತ್ತೆ ಅಡ್ಡ
ಬಿದ್ದ.

ತಮ್ಮಡಿ ಒಂದು ಸಲ ಚಂಗನೆ ಮೇಲಕ್ಕೆ
ನೆಗೆದು ಭಯಂಕರವಾಗಿ ಕಾಕು ಹಾಕಿದ. ಎದೆ
ಯನ್ನು ಪಟಪಟನೆ ಬಡಿದುಕೊಂಡು ನಾಲಿಗೆ
ಯನ್ನು ಹೊರಗೆ ಚಾಚಿದ. ಯಾರೋ ಉರಿಯು
ತ್ತಿದ್ದ ಕರ್ಪೂರವನ್ನು ಚಾಚಿದ ನಾಲಿಗೆಯ
ಮೇಲಿಟ್ಟರು. ಉರಿಯುತ್ತಿದ್ದ ಕರ್ಪೂರದ
ಜ್ವಾಲೆಯನ್ನು ನುಂಗಿ ಅಲ್ಲಿ ನೆರೆದಿದ್ದವರ ಎದೆ
ನಡುಗುವಂತೆ ತಮ್ಮಡಿ ಒಂದು ಸಲ ಹೂಂಕರಿಸಿ
ದಾಗ ಚಿಕ್ಕ ಮಕ್ಕಳು ಕಿಟ್ಟನೆ ಕಿರುಚಿಕೊಂಡು
ತಾಯಂದಿರನ್ನು ತಬ್ಬಿ ಕೊಂಡವು.

"ಪೋಡ್ನಾಗೆ ಅನ್ಯಾಯ ನಡೆದೈತೆ. ದೇವ್ರು
ದಿಂಡ್ರು ಅಂದ್ರೆ ಭಯವಿಲ್ಲ ಭಕ್ತಿಯಿಲ್ಲ. ನಾನು
ಈ ಗುಡ್ಡ ಬಿಟ್ಹೋಗ್ತೀನಿ. ಮಳೀನು ಆಗಲ್ಲ,
ಬೆಳೀನೂ ಆಗಲ್ಲ. ಕುಡ್ಯಾಕೆ ತೊಟ್ಟು ನೀರಿಲ್ದೆ
ಸಾಯ್ತೀರಿ. ವಾಂತಿಭೇದಿ ಬಂದು ಪೋಡ್ಗೆ
ಪೋಡ್ಗೇ ಎಕ್ಕೆದ್ಹೋಗ್ತದೆ," ಎಂದು ಶಾಪ
ವಿಟ್ಟು ತಮ್ಮಡಿ ಥಕಥಕನೆ ಕುಣಿದು ಕುಪ್ಪಳಿಸಿ
ಕಾಕು ಹಾಕಿದ.

"ಒಡೆಯ ತೆಪ್ಪು ಮಾಡ್ದೋರ್ಗೆ ಬೇಕಾದ
ಸಿಕ್ಸೆಕೊಡು. ಆದ್ರೆ ಎಲ್ರುಗೂ ಒಂದೇ ದೊಣ್ಣೆ
ಅನ್ನೋದು ನ್ಯಾಯನಾ? ಮೂರು ಲೋಕ
ಕಂಡಿರೋ ದೈವ ನೀನು! ನಿನ್ಗೆ ನ್ಯಾಯ ನೀತಿ
ಏಳ್ಕೊಡ್ಬೇಕಾ?" ಎಂದು ಕಣ್ಣೀರು ಹಾಕುತ್ತಾ

ಕೈ ಜೋಡಿಸಿದ ವೃದ್ಧ ಯಜಮಾನ. ತಮ್ಮ ಸಮುದಾಯದ ಒಳಿತಿಗಾಗಿ ಆತಂಕ ಪಡುತ್ತಿದ್ದ ಅವನ ಪ್ರಾಮಾಣಿಕ ಕಾಳಜಿ ಅವನ ಕಣ್ಣೀರಿನಲ್ಲಿ ನನಗೆ ಸ್ಪಷ್ಟವಾಗಿ ಕಾಣಿಸಿತು. ಅದೇ ಸಮಯದಲ್ಲಿ ಪರಸ್ಪರ ಶೋಷಣೆಯನ್ನೇ ಗುರಿಯಾಗುಳ್ಳ, ಡಾಂಭಿಕತೆಯ ನೆಲಗಟ್ಟಿನ ಮೇಲೆ ನಿಂತಿರುವ ನಮ್ಮ ಇಂದಿನ ಸಾಮಾಜಿಕ ವ್ಯವಸ್ಥೆಯ ನೆನಪಾಗದಿರಲಿಲ್ಲ.

ಯಜಮಾನನ ಕಣ್ಣಲ್ಲಿ ನೀರು ಕಂಡು ತಮ್ಮಡಿಗೆ ಸಮಾಧಾನವಾಗಿರಬೇಕು. ದೈವದ ಮುಂದಿದ್ದ ಮಣ್ಣಿನ ಚರುಕಿನಲ್ಲಿಟ್ಟಿದ್ದ ಅರಿಶಿನ, ಕುಂಕುಮಗಳನ್ನು ಹಿಡಿಹಿಡಿಯಾಗಿ ತೆಗೆದುಕೊಂಡು ತಲೆಯ ಮೇಲೆ ಸುರಿದುಕೊಂಡು ಅಟ್ಟಹಾಸದಿಂದ ಕಾಕು (ಕೇಕೆ) ಹಾಕಿ ಕುಣಿದು ಕುಪ್ಪಳಿಸಿದ.

ಸೋಲಿಗರೆಲ್ಲಾ ಕೈ ಜೋಡಿಸಿಕೊಂಡು ತಮ್ಮಡಿಯ ಭಯಂಕರ ರೂಪವನ್ನೇ ಭಯ ಭಕ್ತಿಗಳಿಂದ ಬೆರಗಾಗಿ ನೋಡುತ್ತಿದ್ದರು. ತಮ್ಮಡಿ ಕುಣಿತವನ್ನು ನಿಲ್ಲಿಸಿ ಅತ್ತಿತ್ತ ತೊನೆಯುತ್ತಾ "ಅನ್ನಸಾಂತಿ ಆಗ್ಬೇಕು. ವರ್ಸುಕ್ಕೆ-ರಡು ಸಲ ಪರಾವು ಮಾಡ್ಬೇಕು. ದೈವಕ್ಕೆ ಸರ್ರ್ಯಾಗಿ ನಡ್ಕಂಡ್ರೆ, ಒಂದು ಬಿಲ್ಲೆ ಮಳೀಗೆ ಎಲ್ಡು ಬಿಲ್ಲೆ ಬೆಳಿ ಆಗ್ತದೆ," ಎಂದು ನುಡಿದು ಪ್ರಜ್ಞೆ ತಪ್ಪಿ ಕೆಳಗೆ ಬಿದ್ದ. ಕೆಳಗೆ ಬಿದ್ದ ತಮ್ಮಡಿಯನ್ನು ಎತ್ತಿಕೊಂಡು ಹೋಗಿ ಮರದ ನೆರಳಲ್ಲಿ ಮಲಗಿಸಿ ತಲೆಗೆ ನೀರು ತಟ್ಟಿದರು.

"ವರ್ಸುಕ್ಕೆ ಒಂದ್ಸಲ ಪರಾವು ಮಾಡೋದೇ ಕಷ್ಟ. ಎಲ್ಡ್ಸಲ ಪರಾವು ಮಾಡಿ ನೀಗಿಸಕ್ಕಾಗತದಾ?" ಎಂದು ಸೋಲಿಗನೊಬ್ಬ ಗೊಣಗಿಕೊಂಡ.

"ಈ ಕಾಡ್ಗೆ ಬೆಂಕಿ ಬಿದ್ದು ಸೋಲಿಗ್ರೆಲ್ಲಾ ಬೆಂದು ಬೂದಿ ಆದ್ರೆ, ಈ ದೈವುದ್ ಹೊಟ್ಟೆ ತಣ್ಣಾದಾತು," ಜಡೆಸಿದ್ದ ದೈವದ ಮೇಲಿನ ತನ್ನ ಮುನಿಸನ್ನು ವ್ಯಕ್ತಪಡಿಸಿದ.

ದೈವದ ಪೂಜೆ ಮುಗಿಯಿತು. ಎಲ್ಲರೂ ಅಗಲವಾದ ತೇಗದ ಎಲೆಗಳನ್ನು ಮುಂದಿಟ್ಟುಕೊಂಡು ಊಟಕ್ಕೆ ಕುಳಿತರು. ಬಗೆ ಬಗೆಯ ಊಟ. ನಾನಾ ಬಗೆಯ ಗಡ್ಡೆ ಗೆಣಸುಗಳ ಪಲ್ಯ. ರಾಗಿ ಅಂಬಲಿ, ಬೇಲದ ಹಣ್ಣಿನ ತಿರುಳು, ಕಾಡು ಬಾಳೆಯ ಹಣ್ಣನ್ನು ಜೇನಿನಲ್ಲಿ ಕಲಸಿ ಮಾಡಿದ ಸೀಕರಣೆಯ ರುಚಿಯೇ ರುಚಿ! ಮಲ್ಲಿಗೆಯಂತೆ ಅರಳಿ ಹಬೆಯಾಡುತ್ತಿದ್ದ ಬಿದಿರಕ್ಕಿಯ ಅನ್ನದ ಮೇಲೆ ಕಾಡು ಸೀಗೆಸೊಪ್ಪಿನ ಸಾರು ಬಡಿಸಿಕೊಂಡು ಚಪ್ಪರಿಸಿಕೊಂಡು ಉಂಡು ತಣಿದರು ಕಾಡಿನ ಮಕ್ಕಳು. ಗೇರು ಮಾಳದಿಂದ ತಂದಿದ್ದ ಬೆಲ್ಲದಿಂದ ತಯಾರಿಸಿದ ಪಾಯಸದ ಸವಿಯೆ ಸವಿ. ಸೋಲಿಗರ ಹುಡುಗರಂತೂ ಪಾಯಸದ ಒಂದು ತೊಟ್ಟನ್ನೂ ಬಿಡದಂತೆ ಎಲೆಯನ್ನು ನೆಕ್ಕಿದರು. ನನ್ನ ಪಕ್ಕದಲ್ಲಿ ಊಟಕ್ಕೆ ಕುಳಿತಿದ್ದ ಜಡೆಸಿದ್ದ ಅನ್ನದ ಮುಖವನ್ನು ಕಂಡು ಎಷ್ಟೋ ದಿನಗಳಾಗಿದ್ದಂತೆ ಎಲೆಯ ಮೇಲಿನ ಅನ್ನವನ್ನು ಗಬಗಬನೆ ತಿನ್ನುತ್ತಿದ್ದ. ಸೋಲಿಗರೆಲ್ಲಾ ಹೊಟ್ಟೆಬಾಕ ತೋಳಗಳಂತೆ ಊಟ ಮಾಡುತ್ತಿದ್ದರು. ಪ್ರತಿದಿನ ಗಡ್ಡೆ



ಗೆಣಸಿನ ಮೇಲೆ ಜೀವಿಸುವ ನಿಸರ್ಗದ ಈ ಮುಗ್ಧ ಕೂಸುಗಳಿಗೆ ವರ್ಷಕ್ಕೊಮ್ಮೆ ದೊರೆಯುವ ಅಪರೂಪದ ಊಟ ಅದಾಗಿತ್ತು. ಸಮೀಪದ ಉದ್ದಟ್ಟಿ ಗ್ರಾಮದ ಗೌಡರು ಪರಾವು ಮಾಡಲು ಪ್ರತಿವರ್ಷ ಹಣದ ಸಹಾಯ ಮಾಡುವರೆಂದು ಜಡೆಸಿದ್ದ ತಿಳಿಸಿದ. ಈ ವರ್ಷ ಗೌಡರು ಹಾಸಿಗೆ ಹಿಡಿದು ಮಲಗಿದ್ದರಿಂದ ಅವರ ಇಬ್ಬರು ಮಕ್ಕಳು ಪರಾವಿಗೆ ಬಂದಿದ್ದರು.

★

ಉಂಡಾದ ಮೇಲೆ ಸೋಲಿಗರೆಲ್ಲಾ ಸೊಡ್ಡಿನ ಹಾಡು ಹಾಡಿಕೊಂಡು ತಮ್ಮ ತಮ್ಮ ಪೋಡಿನ ಹಾದಿ ಹಿಡಿದರು. ಆ ದಿನ ರಾತ್ರಿ ಸಂಕಮ್ಮನ ಪೋಡಿನ ನಡುವೆ ಸೌದೆ ಒಟ್ಟಿ ಬೆಂಕಿ ಉರಿಸಿದರು. ಎಲ್ಲರೂ ಬೆಂಕಿಯ ಮುಂದೆ ಕುಳಿತು ಮೈ ಬೆಚ್ಚಗೆ ಮಾಡಿಕೊಳ್ಳುತ್ತಿದ್ದರು. ನಾನು ಜಡೆಸಿದ್ದನಿಂದ ಬೀಳ್ಕೊಂಡು ಕಟ್ಟೆಮನೆ ಚಪ್ಪರದೊಳಗೆ ಹೋಗಿ ಮಲಗಿಕೊಂಡೆ. ಯಾರೋ ಎತ್ತರದ ದನಿಯಲ್ಲಿ 'ಗೋರುಕಾ' ಹಾಡೊಂದನ್ನು ಹಾಡುತ್ತಿದ್ದರು. ನಿದ್ದೆ ಬಂದುದೇ ತಿಳಿಯಲಿಲ್ಲ. ನಡುರಾತ್ರಿಯಲ್ಲಿ ಬೆಟ್ಟದ ಕಿಬ್ಬಿಯ ನಡುವಣ್ಣೆಯಲ್ಲಿ ನೀರು ಕುಡಿಯಲು ಬಂದಿದ್ದ ಆನೆಯೊಂದು ಘೀಳಿಟ್ಟ ಸದ್ದಿಗೆ ಎಚ್ಚರವಾಯಿತು. ಬೆಟ್ಟದ ಮೇಲಿನಿಂದ ಚಳಿಗಾಳಿ ಬೀಸುತ್ತಿದ್ದು ಸರಿಯಾದ ಹೊದಿಕೆ ಇಲ್ಲದೆ ಮೈ ನಡುಗತೊಡಗಿತು. ಬೆಂಕಿಯ ಮುಂದಾದರೂ ಸ್ವಲ್ಪ ಹೊತ್ತು ಕುಳಿತುಕೊಳ್ಳೋಣವೆಂದುಕೊಂಡು ಹೊರಗೆ ಬಂದೆ. ಬೆಂಕಿ ಮಂಕಾಗಿ ಉರಿಯುತ್ತಿತ್ತು. ಅಲ್ಲೇ ಬಿದ್ದಿದ್ದ ಕೆಲವು ಪುಳ್ಳೆಗಳನ್ನು ಬೆಂಕಿಗೆ ಹಾಕಿ ಉರಿಸಿದೆ.

ಜಡೆಸಿದ್ದ ಎಚ್ಚರವಾಗಿದ್ದರೆ ಅವನ ಬಳಿ ಮಾತನಾಡುತ್ತಾ ಉಳಿದ ರಾತ್ರಿ ಕಳೆಯಬಹುದೆಂದು ಪೋಡಿನ ಕೊನೆಯಲ್ಲಿದ್ದ ಅವನ ಗುಡಿಸಲ ಬಳಿ ಹೋಗಿ ತಟಿಕೆ ಬಾಗಿಲನ್ನು ಸರಿಸಿ ಇಣಿಕಿ ನೋಡಿದೆ. ಒಲೆಯಲ್ಲಿನ ಕೆಂಡದ ಕ್ಷೀಣವಾದ ಬೆಳಕಿನಲ್ಲಿ ಗಂಡು ಹೆಣ್ಣುಗಳ ಕರಿಯ ದೇಹಗಳೆರಡು ಒಂದಕ್ಕೊಂದು ಬೆಸೆದುಕೊಂಡು ಮಲಗಿದ್ದವು. ಅರೆ ಬೆತ್ತಲ ದೇಹಗಳೆರಡು ಒಂದಕ್ಕೊಂದು ತೆಕ್ಕೆ ಹಾಕಿಕೊಂಡು ಪರಸ್ಪರ ಶರೀರಗಳ ಕಾವಿನಿಂದ ಚಳಿಯನ್ನು ದೂರ ಸರಿಸಲು ಹೆಣಗಾಡುತ್ತಿದ್ದವು. ಮತ್ತೊಂದು ಗುಡಿಸಲ ತಟಿಕೆಯನ್ನು ಸರಿಸಿದಾಗ ಅಲ್ಲಿಯೂ ಅದೇ ನೋಟ. ಹೊದೆಯಲು ಕೌದಿಗಳಿಲ್ಲದೆ ಮೈ ತುಂಬ ಬಟ್ಟೆ ಇಲ್ಲದೆ ಚಳಿಯಲ್ಲಿ ನಡುಗುತ್ತಾ ರಾತ್ರಿ ಕಳೆಯಲು ಪಡುತ್ತಿದ್ದ ಬವಣೆಯ ನೋಟಗಳೇ ಎಲ್ಲೆಲ್ಲೂ. ನೇರವಾಗಿ ಕಟ್ಟೆಮನೆ ಗುಡಿಸಲಿಗೆ ಹೋಗಿ ಮುದುಡಿಕೊಂಡು ಮಲಗಿದೆ.

★

ಸಿದ್ದೇಗೌಡ ಹಸಿರಿನ ವೈದ್ಯರಲ್ಲಿ ನಿಪುಣನೆಂದು ಬಿಳಿಗಿರಿಯ ಆಸುಪಾಸಿನಲ್ಲಿ ಹೆಸರು ಪಡೆದಿದ್ದ. ವೈದ್ಯಕೀಯ ಉಪಯೋಗದ ಅನೇಕ ಗಿಡಮೂಲಿಕೆಗಳ ಬಳಕೆಯನ್ನು ಚೆನ್ನಾಗಿ ಬಲ್ಲವನಾದ ಆತ ವಾತರೋಗದಿಂದ ಉಂಟಾಗುವ ಮೊಣಕಾಲೂತಕ್ಕೆ ಕಾಡಿನ ಪಕ್ಷಿಯೊಂದರ ನೆಣವನ್ನು ಮೊಣಕಾಲಿಗೆ ಹತ್ತು ದಿನಗಳ ಕಾಲ ತಿಕ್ಕಿದರೆ ಗುಣವಾಗುವುದೆಂದು ಹೇಳುತ್ತಿದ್ದ. ಅದಕ್ಕೆ ಸಂಬಂಧಿಸಿದಂತೆ ಗಿಡಮೂಲಿಕೆಗಳಿಂದ ಒಂದು ಬಗೆಯ ತೈಲವನ್ನೂ ತಯಾರಿಸುತ್ತಿದ್ದ. ಹಾವಿನ ಕಡಿತಕ್ಕೆ ಮಂತ್ರ ಹಾಕಿ, ಹಸಿರಿನ ಚಿಕಿತ್ಸೆ ಮಾಡಿ ಅನೇಕ ಮಂದಿಯ ಪ್ರಾಣವನ್ನೂ ಉಳಿಸಿದ್ದನಂತೆ. ಕಾಳಿಂಗಸರ್ಪದಂಥ ಭಯಂಕರವಾದ ವಿಷಪೂರಿತ ಸರ್ಪಗಳ ಕಡಿತಕ್ಕೂ ತನ್ನಲ್ಲಿ ಮೂಲಿಕೆಯಿದೆಯೆಂದು ಸಿದ್ದೇಗೌಡ ಹೇಳುತ್ತಿದ್ದ.

ಸಂಕಮ್ಮನ ಪೋಡಿಗೆ ಬಂದಾಗ ಕೆಲವು ಮಂದಿ ಆಸಕ್ತ ಸೋಲಿಗರು ಹಸಿರಿನ ಚಿಕಿತ್ಸೆಯನ್ನು ಕಲಿಸುವಂತೆ ಸಿದ್ದೇಗೌಡನಿಗೆ ದುಂಬಾಲು ಬಿದ್ದರು. ಆನೆ ಕುಂಭಪ್ಪನ ಪರಾವಿನ ಮಾರನೆಯ ದಿನ ಜಡೆಮಾದ ಎಂಬ ನಡುವಯಸ್ಸಿನ ಸೋಲಿಗನನ್ನು ಕರೆದುಕೊಂಡು ಸಿದ್ದೇಗೌಡ ಯಾವುದೋ ಅಪರೂಪದ ಮೂಲಿಕೆಯ ಅನ್ವೇಷಣೆಗೆ ಬಿಲ್ಲನ ಗುಡ್ಡಕ್ಕೆ

ಹೋದ. ನಾನು ಆ ದಿನ ಜಡೆಸಿದ್ಧನೊಂದಿಗೆ ಅಡವಿಯಲ್ಲಿ ಅಲೆದಾಡಿ ಸಂಜೆಗೆ ಪೋಡಿಗೆ ಬಂದೆ. ಗಡ್ಡೆ ಗೆಣಸಿಗೆಂದು ಅಡವಿಗೆ ಹೋಗಿದ್ದ ಸೋಲಿಗ ಸೋಲಿಗಿತ್ತಿಯರೆಲ್ಲಾ ಪೋಡಿಗೆ ಹಿಂದಿರುಗಿ ಉರಿಯುತ್ತಿದ್ದ ಬೆಂಕಿಯ ಮುಂದೆ ಹರಟುತ್ತಾ ಕುಳಿತರು. ರಾತ್ರಿ ಗೆಣಸು ತಿಂದು ಅಂಬಲಿ ಕುಡಿಯುವ ಹೊತ್ತಾದರೂ ಮೂಲಿಕೆಯ ಶೋಧನೆಗೆ ಹೋಗಿದ್ದ ಸಿದ್ದೇಗೌಡ-ಮಾದೇಗೌಡ ಹಿಂದಿರುಗಿರಲಿಲ್ಲ. ಬಿಲ್ಲನ ಗುಡ್ಡದಲ್ಲಿ ಬಿದಿರು ಮೆಳೆಗಳು ವಿಪುಲವಾಗಿದ್ದುದರಿಂದ ಅಲ್ಲಿ ಕಾಡಾನೆಗಳ ಸಂಚಾರ ಹೆಚ್ಚಾಗಿತ್ತು. ದೂರದ ಪೋಡಿಂದ ತಮ್ಮ ಪೋಡಿಗೆ ಬಂದ ಅಪರೂಪದ ನೆಂಟನಿಗೇನಾದರೂ ಅಪಾಯ ಸಂಭವಿಸಿರಬಹುದೆಂದು ಅವರೆಲ್ಲರಿಗೂ ಕಳವಳ



ವುಂಟಾಯಿತು. ಹತ್ತಿಪ್ಪತ್ತು ಮಂದಿ ಸೋಲಿಗರು ಸೂಡಿಗಳನ್ನು ಹೊತ್ತಿಸಿಕೊಂಡು ಸಿದ್ದೇಗೌಡನನ್ನು ಹುಡುಕಲು ಹೊರಟರು. ನಾನೂ ಜಡೆಸಿದ್ಧನನ್ನು ಹಿಂಬಾಲಿಸಿದೆ.

ಕಬ್ಬಕ್ಕಿ ಗುಡ್ಡವನ್ನು ಬಳಸಿಕೊಂಡು ಅಡವಿಯನ್ನೆಲ್ಲಾ ಜಾಲಾಡುತ್ತಾ ನಡೆದಾಗ ಇರುಳಿನ ಮೌನ ಕಲಕಿತು. ಉರಿಯುವ ಸೂಡಿಗಳನ್ನು ಕಂಡು ಕಾಡಾನೆಗಳ ಹಿಂಡುಗಳು ದೂರದಲ್ಲೇ ಅರುಗಾಗಿ ಹೋದವು. ಕತ್ತಲ ಕಾಡಲ್ಲಿ ನಡೆದು ಅಭ್ಯಾಸವಿರದೆ ಎಡವುತ್ತಾ ಮುಗ್ಗರಿಸುತ್ತಾ ಜಡೆಸಿದ್ಧನ ಹಿಂದೆ ನಡೆದಿದ್ದ ನನಗೆ ಕೇವಲ ಕುತೂಹಲದಿಂದ ಇವರ ಹಿಂದೆ ಬಂದದ್ದೇ ತಪ್ಪಾಯಿತೆನಿಸಿತು. ಗಿಡಗಂಟೆಗಳ ರೆಂಬೆಗಳು ಮೈ ಮುಖಗಳಿಗೆ ತರಚಿ ಸಾಕಷ್ಟು ಹಿಂಸೆ ಅನುಭವಿಸಿದೆ. ಇಷ್ಟೆಲ್ಲಾ ಹುಡುಕಾಟ ನಡೆಸಿದರೂ ಸಿದ್ದೇಗೌಡನ ಸುಳಿವು ಸಿಗಲಿಲ್ಲ.

ಸೋಲಿಗನೊಬ್ಬ ಬಂಡೆಯೊಂದರ ಮೇಲೆ ನಿಂತು ಸಿದ್ದೇಗೌಡನ ಹೆಸರಿಡಿದು ಗಟ್ಟಿಯಾಗಿ ಕೂಗಿದಾಗ ಮಾರುತ್ತರಕ್ಕೆ ಬದಲಾಗಿ ಆನೆಯ ಘೀಳಿನ ಸದ್ದು ಕೇಳಿಸಿ ಎಲ್ಲರಿಗೂ ಗಾಬರಿಯಾಯಿತು. ಅದು ಒಂಟಿ ಸಲಗದ ಘೀಳಾಗಿತ್ತು. ಎಲ್ಲರೂ ಪೋಡಿಗೆ ಹಿಂದಿರುಗಿ ಮಾರನೆಯ ದಿನ ನಸುಕಿನಲ್ಲಿ ಶೋಧ ಮುಂದುವರಿಸಲು ನಿರ್ಧರಿಸಿದರು. ಮತ್ತೆ ಒಂದು ತಾಸಿನ ಕಾಲ ಕತ್ತಲಲ್ಲಿ ಕಾಡಿನ ಹಾದಿಯನ್ನು ತುಳಿಯುತ್ತಾ ಪೋಡಿಗೆ ಅಭಿಮುಖವಾಗಿ ನಡೆದೆವು.

ಪೋಡಿಗೆ ಸಮೀಪದಲ್ಲಿದ್ದ ತೊರೆಯ ಬಳಿ ಬಂದಾಗ ಯಾರೋ ಗೋರುಕಾ ಹಾಡುವ ಸದ್ದು ಕೇಳಿಸಿತು. ತೊರೆಯಲ್ಲಿ ಮೊಣಕಾಲುದ್ದ ನೀರಿತ್ತು. ತೊರೆಯನ್ನು ದಾಟಿಕೊಂಡು ಎಲ್ಲರೂ ಎದುರು ದಡವನ್ನು ಸೇರಿ, ಆ ಅವೇಳೆಯಲ್ಲಿ ಅಲ್ಲಿ ಕುಳಿತು ಹಾಡುತ್ತಿರುವವರಾರೆಂದು ಹುಡುಕತೊಡಗಿದರು. ಸ್ವಲ್ಪ ದೂರದಲ್ಲಿ ಒತ್ತಾಗಿ ಬೆಳೆದಿದ್ದ ಬಾಳೆ ಹುಲ್ಲಿನ ಪೊದೆಗಳ ನಡುವಿನಲ್ಲಿದ್ದ ಹರವಾದ ಬಂಡೆಯೊಂದರ ಮೇಲೆ ಯಾರೋ ಕುಳಿತಿದ್ದುದು ಅಸ್ಪಷ್ಟವಾಗಿ ಕಾಣಿಸಿತು. ಅಷ್ಟರಲ್ಲಿ ಸೂಡಿಗಳೆಲ್ಲಾ ಆರಿ ತಣ್ಣಗಾಗಿದ್ದುವು. ಪೊದೆಯ ಬಳಿ ಬಂದಾಗ ಬಂಡೆಯ ಮೇಲೆ ಕುಳಿತಿದ್ದ ವ್ಯಕ್ತಿಗಳು ಬೇರಾರೂ ಆಗಿರದೆ ಜಡೆಮಾದ ಮತ್ತು ಸಿದ್ದೇಗೌಡರೇ ಆಗಿದ್ದರು.

ಜಡೆಮಾದ ಗೋರುಕಾ ಹಾಡನ್ನು ಹಾಡುತ್ತಿದ್ದ. ಸಿದ್ದೇಗೌಡ ಭಂಗಿಯ ಅಮಲಿನಲ್ಲಿ ಅಸಂಬದ್ಧವಾಗಿ ಏನೇನೋ ತೊದಲುತ್ತಿದ್ದ. ಇಬ್ಬರೂ ಒಳ್ಳೆಯ ಅಮಲಿನಲ್ಲಿ ತೇಲುತ್ತಿದ್ದರು. ಅವರನ್ನು ಕಂಡು ಕೆಲವರಿಗಂತೂ ಭಯಂಕರವಾದ ಕೋಪ ಬಂತು. ಆದರೂ ತಮ್ಮ ನೆಂಟ ಸುರಕ್ಷಿತವಾಗಿರುವುದನ್ನು ಕಂಡು ಕಾಡಿನಲ್ಲಿ ಅವರನ್ನು ಹುಡುಕಿಕೊಂಡು ಅಲೆದಾಡಿದ ದಣಿವನ್ನೆಲ್ಲಾ ಅವರು ಮರೆತುಬಿಟ್ಟರು.

ಎಲ್ಲರೂ ತಮ್ಮ ಅಪರೂಪದ ನೆಂಟನನ್ನು ಅಕ್ಕರೆಯಿಂದಲೇ ಬೈದು ಪೋಡಿಗೆ ಕರೆದುಕೊಂಡು ಹೋದರು.

ಹಸಿರಿನ ಅನ್ವೇಷಣೆಗೆ ಹೋದ ಸಿದ್ದೇಗೌಡನಿಗೆ ಬಿಲ್ಲನ ಗುಡ್ಡದಲ್ಲಿ ಕಂಬಿ ಕಲ್ಲಾರೆ ಹೂಗಿಡಗಳ ಒತ್ತಿನಲ್ಲಿ ಯಾರೋ ಸಮೀಪದ ಪೋಡಿನ ಸೋಲಿಗರು ಗುಟ್ಟಾಗಿ ಬೆಳೆಸಿದ್ದ ಭಂಗಿ ಗಿಡಗಳು ಸಿಕ್ಕವಂತೆ. ಸರಿ, ಆತ ಹಸಿರಿನ ಮೂಲಿಕೆಯ ಹುಡುಕಾಟ ನಿಲ್ಲಿಸಿ, ಸಾಕಷ್ಟು ಭಂಗಿಸೊಪ್ಪನ್ನು ಸಂಗ್ರಹಿಸಿಕೊಂಡು ಬಂದು, ಜಡೆಮಾದನೊಂದಿಗೆ ಬಂಡೆಯ ಮೇಲೆ ಕುಳಿತು ಸಂಜೆಗೇ ಭಂಗಿ ಎಳೆಯಲು ಆರಂಭಿಸಿದ್ದ. ಸಿದ್ದೇಗೌಡ ತನ್ನ ಬಳಿ ಇನ್ನೂ ಸಾಕಷ್ಟು ಉಳಿದಿದ್ದ ಭಂಗಿಸೊಪ್ಪನ್ನು ಸೋಲಿಗರಿಗೆಲ್ಲಾ ಹಂಚಿದ.

ಜಡೆಸಿದ್ದ ಭಂಗಿಯ ಹುಡಿ ತುಂಬಿದ್ದ ಬೀಡಿಯನ್ನು ನನಗೆ ಕೊಟ್ಟು ದಮ್ಮೆಳೆಯುವಂತೆ ಒತ್ತಾಯಿಸಿದ. ಧೂಮಪಾನದ ಚಟವಿಲ್ಲದ ನಾನು ಅವನ ಒತ್ತಾಯಕ್ಕೆ ಕಟ್ಟುಬಿದ್ದು ಭಂಗಿಯ ದಮ್ಮೆಳೆಯಲು ಹೋಗಿ ಕಣ್ಣು ಮೂಗುಗಳಲ್ಲಿ ನೀರು ತುಂಬಿಕೊಂಡು ಅರ್ಧ ಗಂಟೆಯ ತನಕ ಕೆಮ್ಮಿ ಕೆಮ್ಮಿ ಸುಸ್ತಾಗಿ ಹೋದೆ. ಆ ದಿನ ರಾತ್ರಿ ನಡುರಾತ್ರಿಯುವರೆಗೂ ಭಂಗಿಯ ಅಮಲಿನಲ್ಲಿ ಅಸಂಬದ್ಧವಾಗಿ ಹಾಡುತ್ತಾ ಸೋಲಿಗರೆಲ್ಲಾ ಮೋಜು ಮಾಡುತ್ತಿದ್ದಾಗ, ಭಂಗಿ ಸೇದಲಾರದ ನಾನು ಅವರಂತೆ ಮೋಜು ಮಾಡಲಾರದ್ದಕ್ಕೆ ಅಸಹಾಯಕನಾಗಿ ಅಸೂಯೆ ಪಟ್ಟುಕೊಂಡು ಮಲಗಿದೆ.

★

ಮಾರನೆಯ ದಿನ ಕೆಲವು ಮಂದಿ ಸೋಲಿಗರು ಮೊಲದ ಮರಸಿಗೆಂದು ಬಲೆಗಳನ್ನು ಹಿಡಿದು ಹೊರಟರು. ಜಡೆಸಿದ್ದ ನನ್ನನ್ನು ಹುಡುಕಿಕೊಂಡು ಬಂದು ತನ್ನ ಗುಡಿಸಿಲಿಗೆ ಕರೆದುಕೊಂಡು ಹೋದ. ಹಿಂದಿನ ರಾತ್ರಿಯ ಭಂಗಿಯ ಅಮಲಿನಿಂದ ಬಳಲಿದಂತೆ ಕಾಣುತ್ತಿದ್ದ. ಅವನ ಹೆಂಡತಿ ಬೆಂಕಿಯಲ್ಲಿ ಗೆಣಸನ್ನು ಸುಡುತ್ತಿದ್ದಳು. ತುಂಡು ಕೋರಿಯನ್ನು ಕಣ ಕಾಲಿನ ಮೇಲೆ ಕಟ್ಟಿಕೊಂಡಿದ್ದ ಕರಿಯ ಮೈಬಣ್ಣದ ದುಡುದುಂಡಿಯುಂತಿದ್ದ ಲಕ್ಷಣವಾದ ಹುಡುಗಿಯವಳು. ಕುಂಭಪ್ಪನ ಪರಾವಿಗಾಗಿ ಕೊರಳ ತುಂಬ ಹಾಕಿಕೊಂಡಿದ್ದ ಬಗೆಬಗೆಯ ಮಣಿಸರಗಳನ್ನು ಇನ್ನೂ ತೆಗೆದಿರಲಿಲ್ಲ. ಇಬ್ಬರಿಗೂ ತಿನ್ನಲು ಗೆಣಸು, ಕುಡಿಯಲು ರಾಗಿ ಅಂಬಲಿಯನ್ನು ತಂದಿತ್ತಳು.

ಹತ್ತಾರು ಮಂದಿ ಸೋಲಿಗರು ಜೇನಿನ ಬೇಟೆಗೆಂದು ಕಬ್ಬಕ್ಕಿ ಗುಡ್ಡಕ್ಕೆ ಹೊರಟರು. ಜಡೆಸಿದ್ದನೂ ಬಿದಿರಿನ ನಾಳಿಗಳನ್ನು ಹಿಡಿದುಕೊಂಡು ನನ್ನನ್ನೂ ಕರೆದುಕೊಂಡು ಹೊರಟ. ಪೋಡಿನಿಂದ ನಾಲ್ಕು ಕೂಗಳತೆಯ ದೂರವನ್ನು ಹಾಡುತ್ತಾ ನಕ್ಕು ನಲಿಯುತ್ತಾ ಅವರೆಲ್ಲಾ ನಡೆದರು. ಬೆಟ್ಟ ಸಾಲಿನ ಕಿಬ್ಬಿಯನ್ನು ತಲುಪಿದಾಗ ಜೇನಿಗಾಗಿ ಹುಡುಕಾಟ ಆರಂಭವಾಯಿತು. ಬಂಡೆಯ ಪೊಟರೆಗಳಲ್ಲಿ ಚಿಕ್ಕಚಿಕ್ಕ ಜೇನು ಗೂಡುಗಳಿದ್ದವು. ದೊಡ್ಡ ದೊಡ್ಡ ಗೂಡುಗಳಿಗಾಗಿ ಅವರು ಬಂಡೆಗಳ ಸಂದುಗೊಂದುಗಳನ್ನೆಲ್ಲಾ ತಡಕತೊಡಗಿದರು.

ಸುಮಾರು ನಲವತ್ತು ಅಡಿಗಳಷ್ಟು ಎತ್ತರದ ನೇರವಾದ ಬಂಡೆಯೊಂದರ ಮಧ್ಯಭಾಗದಲ್ಲಿದ್ದ ದೊಡ್ಡದೊಂದು ಹೆಜ್ಜೇನಿನ ಗೂಡೊಂದು ಅವರನ್ನಾಕರ್ಷಿಸಿತು. ಜೇನು ಗೂಡಿದ್ದ ತಾವನ್ನು ಮುಟ್ಟಲು ಸೀಳು ಬಂಡೆಗಳ ಸಂದಿನಿಂದ ಇಳಿಬಿದ್ದ ಗಿಡಗಳ ಬಿಳಲುಗಳನ್ನು ಹಿಡಿದುಕೊಂಡು ಎಚ್ಚರಿಕೆಯಿಂದ ಗೋಡೆಯನ್ನು ಹತ್ತುವಂತೆ ಹತ್ತಬೇಕಾಗಿತ್ತು. ಅವರಲ್ಲೊಬ್ಬ ಕಟ್ಟುಮಸ್ತಾದ ಸೋಲಿಗರ ಆಳು. ಜಡೆಸಿದ್ದ ಮೊದಲೇ ತಿಳಿಸಿದ್ದಂತೆ ಸೋಲಿಗರ ಹಾಡು ಹಸೆಗಳನ್ನು ಬಲ್ಲ ಸಂಕಗೌಡನೇ ಅವನಾಗಿದ್ದ. ಮೂರು ಅಡಿಗಳಷ್ಟು ನೀಳವಾದ ಬಿದಿರಿನ ನಾಳಿಗಳೆರಡನ್ನು ಬೆನ್ನಿಗೆ ಕಟ್ಟಿಕೊಂಡಿದ್ದ. ಬಾಯಲ್ಲಿ ಉರಿಯುವ ಆಷಾಢಸೊಪ್ಪಿನ ದೊಂದಿಯನ್ನು ಕಚ್ಚಿಕೊಂಡಿದ್ದ. ಬಂಡೆಗಳ ಸಂದಿನಲ್ಲಿ ಜೋತುಬಿದ್ದಿದ್ದ ಬಿಳಲುಗಳನ್ನು ಹಿಡಿದುಕೊಂಡು ಬಂಡೆಯನ್ನು ಏರಲಾರಂಭಿ

ಸಿದ. ಬಂಡೆಯ ಆಯಕಟ್ಟಿನ ಸಂದುಗಳಲ್ಲಿ ಹೆಜ್ಜೆಯೂರಿಕೊಂಡು ಗೋಡೆಯಂತೆ ನೇರವಾ ಗಿದ್ದ ಬಂಡೆಯನ್ನು ಮಂಗನ ಲಾಘವದಿಂದ ಹತ್ತುವುದನ್ನು ಕಂಡು ಮೈಜುಮ್ಮೆಂದಿತು. ಉರಿ ಯುತ್ತಿದ್ದ ಸೊಪ್ಪಿನ ದೊಂಧಿಯ ಬೆಂಕಿಯ ಉರಿ ಅವನ ಮೂತಿಯನ್ನು ಸುಡುವುದಕ್ಕೆ ಮೊದಲು ಕೆಲವೇ ಕ್ಷಣಗಳಲ್ಲಿ ಜೇನುಗೂಡಿದ್ದ ತಾವನ್ನು ತಲುಪಿದ್ದ. ಒಂದು ಕೈಯಿಂದ ಬಿಳ ಲನ್ನು ಹಿಡಿದುಕೊಂಡು ಬಂಡೆಯ ಸಂದಿಗೆ ಕಾಲನ್ನು ಆಸರೆಯಾಗಿ ಮೆಟ್ಟಿನಿಂತು, ಮತ್ತೊಂದು ಕೈಯಿಂದ ಬಾಯಲ್ಲಿ ಕಚ್ಚಿಕೊಂ ಡಿದ್ದ, ಉರಿಯುತ್ತಿದ್ದ ದೊಂದಿಯನ್ನು ಜೇನಿನ ಗೂಡಿಗೆ ತಾಗಿಸಿದ. ಜೇನುನೊಣಗಳೆಲ್ಲಾ ಆಷಾಢ ಸೊಪ್ಪಿನ ಹೊಗೆಯ ವಾಸನೆಗೆ ಚೆಲ್ಲಾಪಿ ಲ್ಲಿಯಾಗಿ ಹಾರಿಹೋದವು. ಜೇನುಗೂಡಿನ ಕೆಳ ಗೊಂದು ಚಿಕ್ಕ ಕೋಡುಗಲ್ಲೊಂದು ತಲೆ ಚಾಚಿ ಕೊಂಡದ್ದು ಕಾಣಿಸಿತು.

ಡೋಲಾಯಮಾನನಾಗಿ ಬಿಳಲನ್ನು ಹಿಡಿದು ನಿಂತಿದ್ದ ಸಂಕ ಕೋಡುಗಲ್ಲಿನ ಸಂದಿನಿಂದ ಜೋತುಬಿದ್ದಿದ್ದ ಬಲವಾದ ಬಿಳಲನ್ನು ಹಿಡಿದು ಕೊಂಡು ಜೋಲಾಡುತ್ತಾ ಹೋಗಿ ಕೋಡು ಗಲ್ಲಿನ ಮೇಲೆ ಅತ್ತಿತ್ತ ಕಾಲು ಹಾಕಿಕೊಂಡು ಕುಳಿತ. ಅಷ್ಟೆತ್ತರದಲ್ಲಿ ಆತ ತನ್ನ ದೇಹದ ಸಮತೋಲನವನ್ನು ಕಾಯ್ದುಕೊಂಡು ಚಿಕ್ಕ ಕೋಡುಗಲ್ಲಿನ ಮೇಲೆ ಕುಳಿತಿದ್ದ ರೀತಿ ಗಳುವಿನ ಮೇಲಿನ ದೊಂಬನ ಚಮತ್ಕಾರಕ್ಕಿಂತಲೂ ಹೆಚ್ಚು ಕೌಶಲಪೂರ್ಣವಾಗಿ ತೋರಿತು.

ಸಂಕಗೌಡ ಕೈಯಲ್ಲಿನ ದೊಂದಿಯನ್ನು ಬಂಡೆಯ ಸಂದಿಗೆ ಸಿಕ್ಕಿಸಿದ. ಜೇನಿನ ಗೂಡನ್ನು ಕಿತ್ತು ಬೆನ್ನಿಗೆ ಕಟ್ಟಿಕೊಂಡಿದ್ದ ಬಿದಿರಿನ ನಾಳಿಗ ಳಿಗೆ ಹಿಂಡಿದ. ನಾಳಿಗಳು ಜೇನಿನಿಂದ ತುಂಬಿ ದವು. ಜೇನಿನ ಮೇಣದಿಂದ ನಾಳಿಗಳ ಬಾಯನ್ನು ಜಡಿದ. ಸೊಂಟಕ್ಕೆ ಕಟ್ಟಿಕೊಂಡಿದ್ದ ಹಗ್ಗವನ್ನು ಬಿಚ್ಚಿ ನಾಳಿಗಳಿಗೆ ಕಟ್ಟಿ ಕೆಳಗಿಳಿಸಿದ. ಕೆಳಗಿದ್ದವರು ನಾಳಿಗಳನ್ನು ಇಳಿಸಿಕೊಂಡರು. ಬಂಡೆಯನ್ನು ಏರಿದಂತೆ ಕೈಗೆ ಸಿಕ್ಕಿದ ಬಿಳಲುಗಳ

ಡಿದುಕೊಂಡು ಸರಸರನೆ ಇಳಿಯತೊಡಗಿದ. ರೋಮಾಂಚನಗೊಳಿಸುವ ಇಷ್ಟೆಲ್ಲಾ ಅದ್ಭುತ ವಲ ಹತ್ತು ಹದಿನೈದು ನಿಮಿಷ ಷ್ಟು ಅಲ್ಪಾವಧಿಯಲ್ಲಿ ಕೊನೆಗೊಂಡಿತು.

''ಜೇನೆಲ್ಲಾ ಏನು ಮಾಡ್ತೀರ?'' ಜೊತೆಯು ದ್ದ ಜಡೆಸಿದ್ದನನ್ನು ಕೇಳಿದೆ.

''ಸತ್ಯಮಂಗಲದಿಂದ ಗೇರುಮಾಳದಿಂದ ನ ಬಂದು ಜೇನು ತಗೊಂಡೋಗ್ತಾರೆ. ಪ್ಪು, ಮೆಣ್ಸು, ಬಟ್ಟೆ, ಬೆಂಕಿಪೆಟ್ಟಿ ಬದಲಿಗೆ ಟ್ಟು ಹೋಗ್ತಾರೆ.'' ಎಂದು ಉತ್ತರಿಸಿದ ಡೆಸಿದ್ದ.

''ಮತ್ಯಾಕೆ ನೀವೆಲ್ಲಾ ಅರೆ ಬೆತ್ಲಾಗಿ ೀದು? ಹೇಗೂ ಜೇನಿಗೆ ಬದ್ಲಿ 'ಬಟ್ಟೆ ಡ್ತಾರಲ್ಲಾ?'' ನನ್ನ ಸಂದೇಹ.

''ನಾವು ಕೊಡೋ ಜೇನೆಲ್ಲಾ ನಮ್ಮ ಹೆಣ್ಣು ಳು ಉಡೋ ತುಂಡು ಕೋರಿಗೇ ಆಗ್ತದೆ. ಷ್ಟು ಜೇನು ಕಿತ್ರೂ ಹೊದಿಯಾಕೊಂದು ಕೌದಿ ಗ್ದು. ಫಾರೆಸ್ಟು ಮಂದಿಗೆ ಬ್ಯಾರೇ ಜೇನಲ್ಲಿ ಂಕು ಕೊಡ್ಬೇಕು. ನಮ್ಗೊಂದು ಹೊಡಬಾಳು ಯ್ಯಾ,'' ಎಂದು ವಯಸ್ಸಾದ ಮುದುಕನಂತೆ ಡಿದ ಜಡೆಸಿದ್ದ. ಗಂಡಿಗೆ ಒಂದು ಲಂಗೋಟಿ ುದರೂ ಸಾಕು. ಪ್ರಪಂಚವನ್ನೇ ಸುತ್ತಿ ಂದಾನು. ಆದರೆ ಹೆಣ್ಣಿಗೆ ಮಾನ ಮುಚ್ಚಿಕೊ ಲು ಮಾರುದ್ದ ಕೋರಿಯಿಲ್ಲದೆ ಗುಡಿಸಲಿಂದ ೀಗೆ ತಾನೆ ಹೊರಗೆ ಬಂದಾಳು!

ಹೊತ್ತು ಕಂತಲು ಇನ್ನೂ ಬಹಳ ವೇಳೆ ಯಿತ್ತು. ಒಂದಿಬ್ಬರು ಸೋಲಿಗರನ್ನು ಜೇನು ಂಬಿದ ನಾಳಿಗಳೊಂದಿಗೆ ಪೋಡಿಗೆ ಕಳುಹಿಸಿ ರು. ಬಿದಿರು ಮೆಳೆಗಳಿಂದ ಗಳಗಳನ್ನು ಕಡಿದು ಾಳಿಗಳನ್ನು ಮಾಡಿಕೊಂಡರು. ನಾನು ಸಂಕಗೌ ಡನನ್ನು ಕುರಿತು ಸಂಜೆಗೆ ತನಗೆ ಗೊತ್ತಿದ್ದ ಾನಪದ ಹಾಡುಗಳನ್ನು ಹೇಳಿ ೊಡುವಂತೆ ಕೇಳಿಕೊಂಡೆ. ಅವನು ನಗುತ್ತಾ, 'ಅದ್ಕೇನು ಬಿಡಿ ಬುದ್ದಿ, ಸಂಜೀಕೆ ಕೂತು ೆಳ್ಗಾಗೋತಂಕ ಹೇಳೇನು. ನೀವು ಕೇಳೋದು ಹೆಚ್ಚೋ, ನಾವು ಹೇಳೋದು ಹೆಚ್ಚೋ!'' ಎಂದು ತುಂಬು ಮನಸ್ಸಿನಿಂದ ಹೇಳಿದ.

ಸಾಕಷ್ಟು ಹೊತ್ತಿದ್ದರಿಂದ ಜೇನನ್ನು ಹುಡುಕುತ್ತಾ ಮೂಡಲ ದಿಕ್ಕಿನಲ್ಲಿ ನಡೆದರು. ಕೆಲವರು ಸಮೀಪದ ಕೆಂಬಾರೆ ಗುಡ್ಡದತ್ತ ನಡೆದರು. ಜಡೆಸಿದ್ದ ಸಂಕಗೌಡರೊಂದಿಗೆ ಹತ್ತಾರು ಮಂದಿ ಮಕ್ಕಿಬರೆಯತ್ತ ನಡೆದರು. ಮಕ್ಕಿ ಬರೆಗುಡ್ಡದ ಚಾಚು ಬಂಡೆಯೊಂದರಲ್ಲಿ ದೊಡ್ಡ ಜೇನು ಗೂಡು ಕಾಣಿಸಿತು.

''ಒಳ್ಳೆ ಐನಾತಿ ಜೇನು. ನೆಸರಿ ಜೇನಂಗೆ ಕಾಣ್ತದೆ.'' ಸೋಲಿಗನೊಬ್ಬ ಸಂಭ್ರಮದಿಂದ ನುಡಿದ. ಹೆಜ್ಜೇನಿಗಿಂತ ನೆಸರಿ ಜೇನು ಗುಣದಲ್ಲಿ ಉತ್ಕೃಷ್ಟವಾದುದು. ಅದಕ್ಕೆ ಬೆಲೆ ಕೂಡ ಹೆಚ್ಚು.

ಸಂಕನೇ ಈಗಲೂ ಬಂಡೆಯನ್ನೇರಿ ಜೇನು ಕೀಳಲು ಸಜ್ಜಾದ. ಇದಕ್ಕೆ ಮೊದಲು ಏರಿದ ಬಂಡೆಗಿಂತ ಇದು ಎತ್ತರವಾದ, ನೇರವಾದ ಬಂಡೆ. ನೇರವಾದ ಬಂಡೆಯ ಸೀಳಿನ ಸಂದಿನಿಂದ ಅಸಂಖ್ಯಾತವಾದ ಉದ್ದನೆಯ ಬಿಳಲುಗಳು ನೆಲದವರೆಗೂ ಜೋತು ಬಿದ್ದಿದ್ದವು. ಕಾಲಿಟ್ಟುಕೊಂಡು ಮೇಲೇರಲು ಆಸರೆಗೆ ಅಲ್ಲಲ್ಲಿ ಸಂದುಗಳಿದ್ದುವು. ಬಂಡೆಯ ಸೀಳಿನಲ್ಲಿ ಚಿಕ್ಕ ಪುಟ್ಟ ಗಿಡಗಂಟಿಗಳು ಬೆಳೆದಿದ್ದುದರಿಂದ ಅವುಗಳ ಮೇಲೆ ಕ್ಷಣಕಾಲ ಕುಳಿತು ವಿಶ್ರಮಿಸಿಕೊಂಡು ಮತ್ತೆ ಮೇಲೇರಬಹುದಿತ್ತು.

ಸಂಕಗೌಡ ಬೆನ್ನಿಗೆ ಬಿದಿರಿನ ನಾಳಿಗಳನ್ನು ಕಟ್ಟಿಕೊಂಡು ಆಷಾಢ ಸೊಪ್ಪಿನ ದೊಂದಿಯನ್ನು ಬಾಯಲ್ಲಿ ಕಚ್ಚಿಕೊಂಡ. ಮತ್ತೊಬ್ಬ ದೊಂದಿಗೆ ಬೆಂಕಿ ಕಡ್ಡಿಗೀರಿ ಉರಿ ತಗುಲಿಸಿದ. ಬಂಡೆಯ ಸಂದಿನಿಂದ ಇಳಿಬಿದ್ದಿದ್ದ ಬಿಳಲುಗಳನ್ನು ಹಿಡಿದುಕೊಂಡು ಮಂಗನಂತೆ ಸರಸರನೆ ಏರತೊಡಗಿದ ಚತುರ ಸಂಕಗೌಡ.

''ಬಂಡೆ ಮ್ಯಾಲಿಂದ ನೀರು ಜಿನುಗ್ತೈತಲೇ ಸಂಕ. ನೆಟ್ಗೆ ನೋಡ್ಕಂಡು ಹತ್ತಪ್ಪೋ,'' ಎಂದು ಕೆಳಗಿನಿಂದ ಸೋಲಿಗನೊಬ್ಬ ಎಚ್ಚರಿಕೆ ನೀಡಿದ. ಉಳಿದವರೆಲ್ಲಾ ಬಂಡೆಯ ಮೇಲೆ ಕುಳಿತು ಮೇಲೇರಿದವನು ಕೆಳಗಿಳಿದು ಬರುವ ತನಕ ಹೊಗೆಸೊಪ್ಪನ್ನು ಜಗಿಯುತ್ತಾ ಮಾತಿಗೆ ತೊಡ

ಗಿದರು. ನಾನು ಮೇಲೇರುತ್ತಿದ್ದ ಸಂಕನನ್ನೇ ನೋಡುತ್ತಾ ಇವರ ಮಾತಿಗೆ ಕಿವಿಗೊಟ್ಟಿದ್ದೆ.

"ಈ ಸಲ ಸಿಕ್ಸಂಗೆ ಜೇನು ಯಾವ್ಸಲಾನೂ ಸಿಕ್ಕಿಲ್ಲ ಬಿಡು," ಸೋಲಿಗನೊಬ್ಬ ಹೊಗೆ ಸೊಪ್ಪನ್ನು ಜಗಿಯುತ್ತಾ ನುಡಿದ.

"ಈ ಸಲ ಯಾನಾರ ಮಾಡಿ ಮಕ್ಳು ಮರಿಗೆಲ್ಲಾ ಹೊದೀಲಿಕ್ಕೆ ಒಂದೊಂದು ಕೌದಿ ತಕ್ಕೋಬೇಕು," ಚಳಿಯನ್ನು ನೆನೆಸಿಕೊಂಡು ಹೇಳಿದ ಮತ್ತೊಬ್ಬ.

"ತಕ್ಕಂಡೀಯು ಕೌದೀನ ಗೇರುಮಾಳೆ ಸೆಟ್ಟಿ ಕೊಟ್ಟಾಗ. ಪೋಡ್ನ ಹೆಣ್ಗಳ್ಗೆಲ್ಲಾ ಒಂದೊಂದು



ಕೋರಿ ಕೊಡ್ಲಿ ಸಾಕು," ನೀರಸವಾದ ದನಿಯಲ್ಲಿ ಹೇಳಿದ ಇನ್ನೊಬ್ಬ.

ಗೇರುಮಾಳದ ಸೆಟ್ಟಿ ವರ್ಷಕ್ಕೆರಡು ಸಲ ಕತ್ತೆಗಳ ಮೇಲೆ ಹೇರನ್ನು ಹೊರಿಸಿಕೊಂಡು ಬರುತ್ತಿದ್ದ. ಹಾದಿಯಲ್ಲಿ ಎದುರಾಗುವ ಹಾಡಿ ಪೋಡುಗಳಿಗೆಲ್ಲಾ ಭೇಟಿಕೊಡುತ್ತಿದ್ದ. ಅಡವಿಯ ಆದಿವಾಸಿಗಳಿಗೆಲ್ಲ ಜೀವನಾವಶ್ಯಕ ಸಾಮಗ್ರಿಗಳನ್ನು ನೀಡಿ ಬದಲಿಗೆ ಜೇನು, ಕಾನು ಧೂಪ, ಜಾಲಾರ ಧೂಪಗಳನ್ನು ಒಂದಕ್ಕೆ ನಾಲ್ಕರಂತೆ ಕೊಂಡೊಯ್ಯುತ್ತಿದ್ದ. ಅರಣ್ಯದಲ್ಲಿ ಆನೆ, ಜಿಂಕೆ, ಹುಲಿಗಳೇ ಮೊದಲಾದ ಕಾಡುಪ್ರಾಣಿ

ಗಳು ವಿಪುಲವಾಗಿದ್ದು ಅವುಗಳ ಬೇಟೆಯಾಡ
ಸರಕಾರದ ನಿಷೇಧಾಜ್ಞೆ ಜಾರಿಯಲ್ಲಿದ್ದರ
ಕಟ್ಟುನಿಟ್ಟಾಗಿ ಜಾರಿಯಲ್ಲಿರಲಿಲ್ಲ. ಕಾ
ಪ್ರಾಣಿಗಳ ಚರ್ಮಕ್ಕೆ ನಗರ ಪ್ರದೇಶದ
ಬೇಡಿಕೆ ಅಪಾರ. ಈ ಆದಿವಾಸಿಗಳಿಗೆ ಮಾ
ಅವುಗಳ ಮೌಲ್ಯ ಗೊತ್ತಿರಲಿಲ್ಲ. ಅಪರೂ
ಕ್ಕೊಮ್ಮೆ ಅರಣ್ಯ ಇಲಾಖೆಯ ಸಿಬ್ಬಂದಿಯ
ಕಣ್ಣು ತಪ್ಪಿಸಿ ಜಿಂಕೆಗಳ ಬೇಟೆಯಾಡಿ ಚರ್ಮ
ವನ್ನು ಸೆಟ್ಟಿಗಾಗಿ ಸೋಲಿಗರು ತೆಗೆದಿರಿಸು
ದ್ದರು. ಎಂದಾದರೂ ಸತ್ತ ಹುಲಿ ಕಣ್ಣಿಗೆ ಬಿದ್ದ
ಅದು ಕೊಳೆಯುವುದಕ್ಕೆ ಮೊದಲೇ ಚರ್ಮ
ವನ್ನು ಸುಲಿದು ಸೆಟ್ಟಿಗಾಗಿ ಕಾದಿರಿಸುತ್ತಿದ್ದರು
ಸೆಟ್ಟಿ ಉಪಾಯಗಾರ. ಅಪರೂಪಕ್ಕೆ ಸಿಗುತ್ತಿ
ಇಂತಹ ಚರ್ಮಗಳಿಗಾಗಿ ಕಡಿಮೆ ಬೆಲೆಯ ಬ
ಟಾದ ಸೀರೆಗಳನ್ನು ಕೊಡುತ್ತಿದ್ದ. ಈ ರೀ
ಸಂಗ್ರಹಿಸಿದ ಅರಣ್ಯದ ಉತ್ಪನ್ನಗಳನ್ನು ಸಾಗಿಸ
ವಾಗ ತೊಂದರೆಗಳು ಎದುರಾಗದಂತೆ ಅರ
ಇಲಾಖೆಯ ಸಿಬ್ಬಂದಿಯನ್ನು ಸೆಟ್ಟಿ ಕೈಯ
ಟ್ಟುಕೊಂಡಿದ್ದಾನೆಂದು ಜನರು ಹೇಳುತ್ತಿದ್ದರು.

"ಯಾನೋ ಈ ಸಲ ಗೇರು ಮಾಳೆ ಜ
ಯಪ್ಪ ದಯ ತೋರ್ಸದಂಗೆ ಕಾಣ್ತದೆ. ಜೇನ
ಹೂ ಬಿಟ್ಟಂಗೆ ಮರ ಮರಕ್ಕೂ ಬಂಡೆ ಬಂಡೆಗ
ತಗುಲ್ಕಂಡೈತಿ. ಸೆಟ್ಟಿಗೆ ದೈವ ಒಳ್ಳೆ ಬುದ್ಧಿ
ಕೊಟ್ರೆ ಸ್ಯಾಲಿಕೋರಿ ಜೊತ್ಗೆ ಹೊದೀಲಿಕ
ಕೌದೀನೂ ಕೊಟ್ಟಾನು," ಆಸೆಯಿಂದ ನುಡಿದ
ಕೌದಿಗಾಗಿ ಬಾಯಿಬಿಡುತ್ತಿದ್ದ ಮುದುಕನೊಬ್ಬ.

ಇದ್ದಕ್ಕಿದ್ದಂತೆ 'ಅಯ್ಯೋ' ಎಂಬ ಎದೆ ಬಿ
ಯುವ ಚೀತ್ಕಾರ ಕೇಳಿಸಿ ಕೆಳಗೆ ಕುಳಿತಿದ್ದವರೆಲ್ಲಾ
ತಲೆಯೆತ್ತಿ ಮೇಲೆ ನೋಡಿದರು. ಮೇಲಿಂ
ತಲೆಕೆಳಗಾಗಿ ಬೀಳುತ್ತಿದ್ದಾನೆ ಬಂಡೆಯನ್ನೇರ
ತ್ತಿದ್ದ ಸಂಕಗೌಡ. ಒಂದು ಕ್ಷಣದಲ್ಲಿ ಸಂಕ
ದೇಹ ಕೆಳಗಿನ ಹಾಸು ಬಂಡೆಗೆ ಅಪ್ಪಳಿಸಿತು
ಸಂಕಗೌಡನ ಕಪ್ಪು ಮೈಯಿಂದ ಚಿಮ್ಮಿದ ಕೆಂ
ರಕ್ತ ಬಂಡೆಯ ಮೇಲೆ ಕೆಂಪು ರಂಗಿನ ಚಿತ್ರ
ವೊಂದನ್ನು ಮೂಡಿಸಿತು.

"ಅಯ್ಯೋ ಸಂಕಾ, ಏನಾತೋ!" ಎಂದು

ಉಮ್ಮಳಿಸಿ ಬರುತ್ತಿದ್ದ ದುಃಖದಿಂದ ವಿಕಾರವಾಗಿ ಕಿರುಚುತ್ತಾ ಸೋಲಿಗರೆಲ್ಲಾ ಬಂಡೆಯನ್ನಪ್ಪಿ ಮಲಗಿದ್ದ ಸಂಕಗೌಡನ ದೇಹದ ಬಳಿಗೆ ಧಾವಿಸಿದರು. ಸಂಕಗೌಡನ ಪ್ರಾಣಪಕ್ಷಿ ಅವನ ದೇಹದ ಗೂಡಿನಿಂದ ಹಾರಿಹೋಗಿತ್ತು. ಅವನು ಹಿಡಿದಿದ್ದ ಗಿಡದ ಬಿಳಲು ಬುಡದಲ್ಲಿ ಗೆಜ್ಜಲು ಹತ್ತಿ ಜೀರ್ಣವಾಗಿತ್ತು. ಬಂಡೆಯನ್ನೇರುವಾಗ ಬಿಳಲನ್ನಿಡಿದು ಸಂಕ ಜಗ್ಗಿದಾಗ ಅದು ಹರಿದು ಕೆಳಗೆ ಬಿದ್ದಿದ್ದ.

"ಕರುಣೆ ಇಲ್ಲ ದೈವ ಕೊನೀಗೂ ಬಲಿ ತಗೊಳ್ತು."

"ಆಯಸ್ಸು ಮುಗಿದಿತ್ತು."

"ಹಾಳು ದೈವಾನ ತಗೊಂಡೋಗಿ ಆಳ್ಬಾವಿಗೆ ಎಸಿಬೇಕು."

"ದೈವ ಕೇಳುಸ್ಕಂಡಾತು ಸುಮ್ಕಿರಿ. ಹೋಡ್ನೇ ಉರ್ಬುಡ್ಕಂಡು ತಿಂದಾತು."

ಆ ಮುಗ್ಧ ಆದಿವಾಸಿಗಳ ಪರಂಪರಾನುಗತವಾದ ಶ್ರದ್ಧೆ-ನಂಬಿಕೆಗಳು ಕ್ಷಣಕಾಲ ಅಲ್ಲಾಡಿದವು. ಎರಡು ದಿನಗಳ ಹಿಂದೆಯಷ್ಟೇ ಅವರು ದೈವದ ಪರಾವನ್ನು ಭಕ್ತಿ-ಶ್ರದ್ಧೆಗಳಿಂದ ಆಚರಿಸಿದ್ದರು. ಸಂಗಾತಿಯ ಸಾವಿನ ದುಃಖವನ್ನು ತಾಳಲಾರದೆ ದೈವವನ್ನೇ ಧಿಕ್ಕರಿಸಿ ನುಡಿದ ಕೆಲವು ಮಂದಿ ದುಃಖತಪ್ತ ಸೋಲಿಗರು.

ಬಿದಿರಿನ ಗಳುಗಳನ್ನು ಕಡಿದುಕೊಂಡು ಬಂದು ಕೈಮಂಚವೊಂದನ್ನು ತಯಾರಿಸಿ ಸಂಕನ ಕಳೆಬರವನ್ನು ಮಲಗಿಸಿದರು. ಕೈಮಂಚದ ಕೊನೆಗಳನ್ನು ಹೆಗಲ ಮೇಲಿಟ್ಟುಕೊಂಡು ಪೋಡಿಗೆ ನಡೆದರು. ಇಡೀ ರಾತ್ರಿ ಸತ್ತವನ ಹೆಂಡಿರುಮಕ್ಕಳ ರೋದನದಿಂದ ಕಾಡಿನ ಮೌನ ಕಲಕಿತು.

ಮಾರನೆಯ ದಿನ ಸಂಕಗೌಡನನ್ನು ಬೆಟ್ಟದ ಕಿಬ್ಬಿಯಲ್ಲಿನ 'ಗೋಪ' ಮನೆ (ರುದ್ರಭೂಮಿ) ಯಲ್ಲಿ ಮಣ್ಣು ಮಾಡಿ ಬಂದರು. ಆ ದಿನವೆಲ್ಲಾ ಘುಂಕಾಗಿ ಕುಳಿತಿದ್ದ ಜಡೆಸಿದ್ದ. ಸಂಕಗೌಡನ ಸಾವಿನ ನೆರಳು ಪೋಡನ್ನು ಗಾಢವಾಗಿ ಮುಸುಕಿತ್ತು. ಎಲ್ಲರೂ ಅವನ ಗುಣಗಳನ್ನು ನೆನೆಯುವವರೇ. ಸಂಕಗೌಡ ತನಗೆ ಗೊತ್ತಿದ್ದ ಸೋಲಿಗರ ಜಾನಪದ ಹಾಡುಗಳನ್ನು ಹೇಳುವುದಾಗಿ ಜೇನು ಕೀಳಲು ಹೋದಾಗ ನನಗೆ ಹೇಳಿದ್ದ. ಆದರೆ ತಾನು ಕೊಟ್ಟ ಮಾತನ್ನು ನಡೆಸದೇ ಹೋಗಿಬಿಟ್ಟಿದ್ದ.

ಅಂದು ರಾತ್ರಿ ಕಟ್ಟೆಮನೆಯ ಗುಡಿಸಲಲ್ಲಿ ಮಲಗಿದ್ದಾಗ ಯಾರೋ ತಟಿಕೆ ಸರಿಸಿ ಇಣಿಕಿ ನೋಡಿದಂತಾಯಿತು. ಎದ್ದು ಕುಳಿತುಕೊಂಡೆ. ಜಡೆಸಿದ್ದ ಮೆಲ್ಲನೆ ಒಳಗೆ ಬಂದು ನನ್ನ ಬಳಿ ಕುಳಿತುಕೊಂಡ. ಕತ್ತಲಲ್ಲಿ ಅವನ ಮುಖವನ್ನೇ ನೋಡತೊಡಗಿದೆ.

"ನೀವು ದೂರ್ದ ಸೀಮೀಂದ ಬಂದಿರೋರು. ನಿಮ್ಗೆ ಎಲ್ಲಾ ಗೊತ್ತಿರ್ತದೆ. ಒಂದ್ಮಾತು ಕೇಳಾಣಾಂತ," ಜಡೆಸಿದ್ದ ಮೆಲ್ಲನೆಯ ದನಿಯಲ್ಲಿ ನುಡಿದ.

"ಗೊತ್ತಿದ್ರೆ ಹೇಳೇನು ಕೇಳು," ನಾನೆಂದೆ.

"ನಮ್ಮ ದೈವ ಆನೆ ಕುಂಭಪ್ಪಂಗೆ ತಪ್ಪದಂಗೆ ಎಲ್ಲಾ ಸೇವೇನೂ ಮಾಡ್ತಾ ಬಂದೀವಿ. ಆದ್ರೂನೂ ಒಬ್ರಲ್ಲ ಒಬ್ರು ಸಾಯ್ತಾನೇ ಅವ್ರೆ ತಿಂಗ್ಳಿಂದ. ಎರಡು ತಿಂಗ್ಳಿಂದೆ ನಮ್ಮಪ್ಪನ್ನ ಒಂಟಿ ಸಲಗ ತುಳ್ದು ಸಾಯಿಸ್ತು. ಅದಕ್ಮುಂಚೆ ನಮ್ಮಪ್ಪ ಕಾನುಧೂಪ್ದ ಮರ ಹತ್ತಿದ್ದಾಗ ಹಾವು ಕಚ್ಚಿ ಸತ್ತೋದ. ನಿನ್ನೆ ನೀವೇ ಕಂಡಂಗೆ ಸಂಕಗೌಡ ಸತ್ತ. ಯಾಕೆ, ದೈವಕ್ಕೆ ಇವರ್ನೆಲ್ಲಾ ಉಳ್ಸಾಕೆ ಆಗ್ತಿರ್ಲಿಲ್ವ? ವರ್ಸವರ್ಸ ತಪ್ಪಂಗೆ ಪರಾವು ಮಾಡ್ತೀವಿ. ಆದ್ರೂ ಕುಂಭಪ್ಪ ನಮ್ಮುನ್ನ ಸರ್ಯಾಗಿ ಕಾಯ್ತಿಲ್ಲ. ಇನ್ನೂ ಈ ದೈವಾನ ನಂಬ್ಕೊಂಡು ಕೂತಿರೋದು ಸರೀನಾ?" ಜಡೆಸಿದ್ದ ತನ್ನ ಮುಗ್ಧ ಪ್ರಶ್ನೆಗಳನ್ನು ನನ್ನ ಮುಂದಿಟ್ಟು ನನ್ನನ್ನು ಗೊಂದಲದಲ್ಲಿ ಕೆಡವಿದ.

ಜಡೆಸಿದ್ದನಿಗೆ ಸಮರ್ಪಕವಾಗಿ ಉತ್ತರ ಹೇಳುವಷ್ಟು ಅನುಭವಿ ನಾನಾಗಿರಲಿಲ್ಲ. ಆತ ಚಿಂತಿಸುತ್ತಿದ್ದ ಧಾಟಿಯಲ್ಲಿ ಚಿಂತಿಸುವಂತಹ ಪ್ರಸಂಗ ಎಂದೂ ನನಗೆ ಬಂದಿರಲಿಲ್ಲ. ಅವನ ಚಿಂತನೆಯ ರೀತಿ ಬದುಕಿನ ಕಟು ಅನುಭವ

ಗಳಿಂದ ಪ್ರಭಾವಿತವಾಗಿತ್ತು. ತನ್ನ ಚಿಂತನೆಯ ರೀತಿ ಸರಿಯೋ ತಪ್ಪೋ ಎಂದು ಸ್ವಯಂ ನಿರ್ಧರಿಸುವಷ್ಟು ಆತ್ಮವಿಶ್ವಾಸ ಇನ್ನೂ ಅವನಲ್ಲಿ ಬೆಳೆಯಬೇಕಿತ್ತು. ದೈವದ ಬಗ್ಗೆ ಅವನಲ್ಲಿ ಕೋಪವೇನೋ ಕೆರಳಿತ್ತು. ಆದರೆ ಆ ದೈವದ ಅಸ್ತಿತ್ವದ ಬಗ್ಗೆ, ಅದರಿಂದ ಸಂಭವಿಸಬಹುದೆಂದು ನಂಬಿದ್ದ ಅವಘಡಗಳ ಬಗ್ಗೆ ಬೆಳೆದು ಬಂದಿದ್ದ ಅವೈಜ್ಞಾನಿಕ ಪರಂಪರೆಯ ತಳಹದಿಯ ಮೇಲೇ ಜಡೆಸಿದ್ದನ ಮನಸ್ಸಿನಲ್ಲಿ ಹೊಸ ಚಿಂತನೆಯ ಧಾಟಿ ಮೈದುಂಬಿಕೊಳ್ಳುತ್ತಿತ್ತು.

ಈ ಮುಗ್ಧ ಆದಿವಾಸಿಗಳು ಸಹಜವಾಗಿ ಸಂಭವಿಸುವ ನೈಸರ್ಗಿಕ ವಿಕೋಪಗಳಿಗೆ ದೈವವನ್ನೇ ಹೊಣೆ ಮಾಡುತ್ತಿದ್ದರು. ಆನೆ ಕುಂಭಪ್ಪನ ಪರಾವು ಮಾಡಿದ ದಿನ ದೈವದ ತಮ್ಮಡಿ ನುಡಿದ ಭೀಕರ ನಿಮಿತ್ತ, ಅನಂತರ ಸಂಭವಿಸಿದ ಸಂಕನ ಆಕಸ್ಮಿಕ ಮರಣ ಜಡೆಸಿದ್ದನಲ್ಲಿ ನಂಬಿದ ದೈವದ ಬಗ್ಗೆ ಕೋಪ, ಹತಾಶೆಗಳನ್ನುಂ[illegible] ಮಾಡಿತ್ತು.

ನಾನು ಸುಮ್ಮನೆ ಕುಳಿತಿದ್ದನ್ನು ಕಂಡು ಜ[illegible] ಸಿದ್ದ ಮತ್ತೆ ಪ್ರಶ್ನಿಸಿದ:

"ಆನೆ ಕುಂಭಪ್ಪಂಗಿಂತ್ಲೂ ಬಿಳಿಗಿರಿರ[illegible] ಸ್ವಾಮಿ ದೊಡ್ಡ ದೈವ ಅಲ್ವ? ಕುಂಭಪ್ಪ[illegible] ರಂಗಯ್ನೂ ಜನಾನ ಕಾಡ್ತಾನ?"

"ಕಾಡಿದ್ದು ಕಂಡಿಲ್ಲ, ಕೇಳಿಲ್ಲ. ಮ[illegible] ಬಿದ್ದೋರ್ನ ಕಾಪಾಡ್ತಾನೆ ಅಂತ ಕೇಳಿದ್ದೀನಿ," ತಿಳುವಳಿಕಸ್ಥನಂತೆ ಜಡೆಸಿದ್ದನ ಪ್ರಶ್ನೆಗೆ ಉತ್[illegible] ಸಿದೆ.

"ಅಯ್ಯಾ, ಈ ಆನೆ ಕುಂಭಪ್ನ ಸೆರೇ[illegible] ಬ್ಯಾಡ. ನಾನು, ನನ್ನೆಂಡ್ತಿ ಒಂದಲ್ಲ ಒಂದಿ[illegible] ಬಿಳಿಗಿರಿರಂಗನ್ನು ಮರೆಹೋಗ್ತೀವಿ," ಎಂ[illegible] ಹೇಳಿದಾಗ ಆ ಹದಿಹರೆಯದ ತರುಣನ ಕ[illegible] ಗಳಲ್ಲಿ ವಿಚಿತ್ರವಾದ ಹೊಳಪಿತ್ತು.

# ಕ್ಯಾನ್ಸರ್‌ಗೆ ಆಯುರ್ವೇದ ಚಿಕಿತ್ಸೆ



ನಾನು ಶ್ರೀಮತಿ ಕಮಲಾ ನಾಗರಾಜರಾವ್ (ಬೆಂಗಳೂರಿನ ಯೂನಿಯನ್ ಬ್ಯಾಂಕ್ ಆಫ್ ಇಂಡಿಯಾದ ನಿವೃತ್ತ ಮುಖ್ಯ ಮ್ಯಾನೇಜರ ಆರ್ ನಾಗರಾಜರಾವ್ ಅವರ ಪತ್ನಿ) ಸ್ತ್ರೀರೋಗ ತಜ್ಞರನ್ನು ಸಂಪರ್ಕಿಸಿದಾಗ ಅವರು ಇನ್‌ಸ್ಟಿಟ್ಯೂಟ್ ಆಫ್ ದಾಂಲೆ ಫಾರ್ ಕ್ಯಾನ್ಸರ್ ಆಫ್ ಸಿರಾವಿಕ್ಸ್ ಇಲ್ಲಿ ಸಲಹೆ ಪಡೆಯಲು ಹೇಳಿದರು. ನಾನೂ ಕೂಡಾ ಭಾರತದಲ್ಲಿಯ ಅನೇಕ ಕ್ಯಾನ್ಸರ್ ಸಂಸ್ಥೆಗಳಲ್ಲಿ ಚಿಕಿತ್ಸೆ ಪಡೆದೆ. ಆದರೆ ಅದರಿಂದ ಯಾವುದೇ ರೀತಿಯ ಪ್ರಗತಿ ಕಂಡು ಬರಲಿಲ್ಲ.

1977 ಡಿಸೆಂಬರ್ ತಿಂಗಳಲ್ಲಿ ಅಕಸ್ಮಾತ್ ಯಾರೋ ಒಬ್ಬರಿಂದ ಕೇಳಿದ್ದೆ, ಹೈದರಾಬಾದಿನ ಕ್ಯಾನ್ಸರ್ ರೋಗ ಚಿಕಿತ್ಸಾಲಯದ ಡಾ. ಎಂ. ಬಾಬುರಾವ ಅವರು ಹಲವಾರು ಕ್ಯಾನ್ಸರ್ ರೋಗಿಗಳಿಗೆ ಚಿಕಿತ್ಸೆ ನೀಡಿ ಯಶಸ್ವಿಯಾಗಿದ್ದಾರೆ ಎಂದು ಹೇಳಿದ್ದರು. ಆದರೂ ನಾನು ಹೈದರಾಬಾದಿನ ನನ್ನ ಸ್ನೇಹಿತರನ್ನೂ ಸಹ ಕೇಳಿದೆ. ಅವರ ಹೇಳಿಕೆಯ ಮೇರೆಗೆ ನಾನು ಡಾ. ಎಂ. ಬಾಬುರಾವ ಅವರಿಂದ ಚಿಕಿತ್ಸೆಯನ್ನು ಪಡೆದೆ. ಚಿಕಿತ್ಸೆಯು ಪೂರ್ಣವಾದ ನಂತರ ನಾನು ಸ್ತ್ರೀರೋಗ ತಜ್ಞರ ಕಡೆಗೆ ತಪಾಸಣೆಗೆ ಹೋದೆ. ನನ್ನನ್ನು ಪರೀಕ್ಷಿಸಿದ ಅವರು ನಾನು ಗುಣಮುಖವಾಗಿದ್ದನ್ನು ಕಂಡು ಸಂತೋಷಪಟ್ಟರಲ್ಲದೇ, ಕ್ಯಾನ್ಸರ್ ರೋಗದ ಯಾವ ಲಕ್ಷಣಗಳು ಇಲ್ಲವೆಂದು ಹೇಳಿದರು. ಈಗಲೂ ಸಹ ನಾನು ಆರಾಮದಿಂದ ಇದ್ದೇನೆ.

ಡಾ. ಎಂ. ಬಾಬುರಾವ ಅವರು ಕ್ಯಾನ್ಸರ್ ರೋಗದಿಂದ ಬಳಲುತ್ತಿರುವವರಿಗೆ ಚಿಕಿತ್ಸೆ ನೀಡಿ ಒಂದು ಸ್ಮರಣೀಯ ಸೇವೆಗೈದಿದ್ದಾರೆ ಅಲ್ಲದೇ ಅವರಿಗೆ ಪುನರ್ಜನ್ಮ ನೀಡಿದ್ದಾರೆ.

**ಶ್ರೀಮತಿ ಕಮಲಾ ನಾಗರಾಜರಾವ**

ಆರ್. ಕಮಲಮ್ಮ 1224, 34 ನೇ ಕ್ರಾಸ್ ಜಯನಗರ, ಬೆಂಗಳೂರು

## ಕಾರ್ಯಕ್ರಮದ ವಿವರ

| ಡಾಕ್ಟರರ ವಿಳಾಸ | ಫೋನ | ಸಲಹೆ ನೀಡುವ ದಿನಗಳು |
|---|---|---|
| **ಡಾ.ಎಂ. ಬಾಬುರಾವ** | 21452 | ಪ್ರತಿ ಸೋಮವಾರ |
| ಕ್ಯಾನ್ಸರ್ ಇನ್‌ಫರ್ಮರಿ 2-1610 | | ಮತ್ತು ಮಂಗಳವಾರ |
| ಸೇಡಂ ರಸ್ತೆ, ಮೊಮಿನಾ ಕೋಟಂ | | |
| ಜಗದಂಬಾ ಪೆಟ್ರೋಲ್‌ಬಂಕ್ | | |
| ಹತ್ತಿರ ಗುಲಬರ್ಗಾ (ಕರ್ನಾಟಕ ರಾಜ್ಯ) | | |
| **C/o. ಹೊಟೆಲ್‌ಮಿಡ್‌ಟೌನ್** | 6288882 | ಪ್ರತಿ ಬುಧವಾರ |
| ಅಂಧೇರಿ ರೇಲ್ವೆ ಸ್ಟೇಶನ್ | 6286635 | |
| (ವೆಸ್ಟ) ಎದುರು ಮುಂಬೈ | | |
| **ಕ್ಯಾನ್ಸರ್ ಇನ್‌ಫರ್ಮರಿ** | 64735 | ಪ್ರತಿ ಶುಕ್ರವಾರ |
| 1-1-271/3 ಚಿಕ್ಕಡಪಲ್ಲಿ ಬಸ್‌ಸ್ಟಾಪ್ | | |
| ಹತ್ತಿರ ಹೈದರಾಬಾದ- 20 | | |
| **C/o ರಾಮ ಇಂಟರ ನ್ಯಾಶನಲ್** | 473350 | ಪ್ರತಿ ಶನಿವಾರ |
| 114, ಕೋಡಂಬಕ್ಕಂ ಹೈ-ರಸ್ತೆ | 473420 | |
| ಮದ್ರಾಸು- 600034 | | |
| **C/o. ಹೊಟೆಲ್ ಬೃಂದಾವನ** | 573271 | ಪ್ರತಿ ರವಿವಾರ |
| ಎಂ.ಜಿ. ರಸ್ತೆ, ಬೆಂಗಳೂರು | | |

ಪ್ರಕೃತಿ ವಿಕೋಪಗಳಿಗೆಲ್ಲಾ ದೈವವನ್ನು ದೂರುವುದು ಸರಿಯಲ್ಲವೆಂದು ಜಡೆಸಿದ್ದನಿಗೆ ಮನವರಿಕೆ ಮಾಡಲು ಹೋದ ನನ್ನ ಯತ್ನ ಫಲಿಸಲಿಲ್ಲ. ನನ್ನೊಂದಿಗೆ ಹೆಚ್ಚು ಮಾತು ಬೆಳೆಸದೆ ಮೌನವಾಗಿ ಸ್ವಲ್ಪ ಹೊತ್ತು ಕುಳಿತಿದ್ದು ಅನಂತರ ಜಡೆಸಿದ್ದ ತನ್ನ ಗುಡಿಸಲಿಗೆ ಹೋದ.

★

ನಡುರಾತ್ರಿ ಇದ್ದಕ್ಕಿದ್ದಂತೆ ಎಚ್ಚರವಾಯಿತು. ಬಾನಿನಲ್ಲಿ ಗುಡುಗು ಮಿಂಚುಗಳ ಆರ್ಭಟ ಆರಂಭವಾಯಿತು. ತುಂತುರು ಹನಿಯಿಂದ ಪ್ರಾರಂಭವಾದ ಮಳೆ ಮೂಸಲಧಾರೆಯಾಗಿ ಬೀಳತೊಡಗಿತು. ಇದೆಂತಹ ಅಕಾಲಿಕ ಮಳೆಯೆಂದು ಎಲ್ಲರಿಗೂ ಅಚ್ಚರಿಯೋ ಅಚ್ಚರಿ. ಅಂತೂ ಹಳ್ಳಕೊಳ್ಳಗಳು ತುಂಬಿ ಅಡವಿಯ ಮೃಗಗಳಿಗೆ, ಆದಿವಾಸಿಗಳ ಜೀವಧಾರಣೆಗೆಂದೇ ದೈವ ಬಾನಿನಿಂದ ಜೀವಜಲವನ್ನು ಕಳುಹಿಸಿಕೊಟ್ಟಿತೆಂದು ಮುಗ್ಧ ಆದಿವಾಸಿಗಳು ನೆಮ್ಮದಿಯ ನಿಟ್ಟುಸಿರಿಟ್ಟರು.

ಒಂದು ಬಿಲ್ಲೆ ಮಳೆಗೆ ಎರಡು ಬಿಲ್ಲೆ ಬೆಳೆಯೆಂದು ಹೇಳಿದ ದೈವದ ತಮ್ಮಡಿಯ ಕಣಿ ಅವರೆಲ್ಲರ ನೆನಪಿನಲ್ಲಿ ಇನ್ನೂ ಹಸಿರಾಗಿತ್ತು. ಸೋರುತ್ತಿದ್ದ ಗುಡಿಸಲೊಳಗೇ ಒದ್ದೆ ಮುದ್ದೆಯಾಗಿ ಎಲ್ಲರೂ ಮುದುಡಿ ಕುಳಿತುಕೊಂಡು ರಾತ್ರಿಯನ್ನು ಕಳೆದೆವು.

ಬೆಳಗಾದಾಗ ತೊರೆ, ಹಳ್ಳಕೊಳ್ಳಗಳು ಮೈದುಂಬಿಕೊಂಡು ಹರಿಯುತ್ತಿದ್ದವು. ರಾತ್ರಿ ಬಿದ್ದ ಮಳೆಯಲ್ಲಿ ಕಾನೆಲ್ಲಾ ಮಿಂದು ಬೆಳಗಿನ ಬಿಸಿಲಲ್ಲಿ ಹಸಿರಿನಿಂದ ನಳನಳಿಸುತ್ತಿತ್ತು. ಮೊದಲು ಬಿದ್ದ ಮಳೆಯಿಂದಾಗಿ ಭೂಮಿಯಿಂದ ಹೊರಹೊಮ್ಮುತ್ತಿದ್ದ ಮಣ್ಣಿನ ಸೊಗಡು ಮತ್ತೇರಿಸುವಂತಿತ್ತು. ಮಳೆ ನೀರಿನ ದೈವಕ್ಕೆ ಕೃತಜ್ಞತೆ ಸಲ್ಲಿಸಲೆಂದು ಸೋಲಿಗರೆಲ್ಲಾ ಬೊಗಸೆಗಳಲ್ಲಿ ಕಂಬಿಕಲ್ಲಾರೆ, ಕಣಗಲೆ ಮೊದಲಾದ ಕಾಡುಹೂಗಳನ್ನು ತುಂಬಿಕೊಂಡು ಆನೆ ಕುಂಭಪ್ಪನ ಮೇಲೆ ಒಲಗದ ಪದ ಹಾಡುತ್ತಾ ಗುಡ್ಡವನ್ನೇರತೊಡಗಿದರು. ಗುಡ್ಡದ ಮೇಲಕ್ಕೆ

★ ಹೊಗಳುಭಟ್ಟರ ನಡುವೆ ಬೀಳುವುದಕ್ಕಿಂತ ಕಾಗೆಗಳ ನಡುವೆ ಬೀಳುವುದೇ ಲೇಸು. ಯಾಕೆಂದರೆ ಕಾಗೆಗಳು ಸತ್ತವರನ್ನು ಮಾತ್ರ ತಿನ್ನುತ್ತವೆ. ಆದರೆ ಹೊಗಳುಭಟ್ಟರು ಜೀವಂತ ವ್ಯಕ್ತಿಗಳನ್ನೇ ನಾಶ ಮಾಡುತ್ತಾರೆ.

– ಆಂಟಿಸಿನಿಸ್

★ ನಾನು ದಾಸನಾಗಿರಲು ಯಾವ ರೀತಿ ಒಪ್ಪಲಾರೆನೋ ಹಾಗೆಯೇ ಪ್ರಭುವಾಗಿರಲೂ ಒಪ್ಪಲಾರೆ. ಇದೇ ಪ್ರಜಾಪ್ರಭುತ್ವವೆಂದು ನನ್ನ ಅಭಿಪ್ರಾಯ.

– ಅಬ್ರಹಾಂ ಲಿಂಕನ್

...ಂದಾಗ ಅವರ ಉತ್ಸಾಹವೆಲ್ಲಾ ಬತ್ತಿ ಹೋಯಿತು. ಕುಂಭಪ್ಪನ ಮೇಲಿನ ಮಂಟಪದ ಸೂರು ಕುಸಿದು ಚಪ್ಪರದ ಕಂಬಗಳು ಮುರಿದು ಬಿದ್ದಿದ್ದವು. ಆನೆ ಕುಂಭಪ್ಪನ ಶಿಲಾವಿಗ್ರಹ ಭಿನ್ನಗೊಂಡು ಕೆಳಗೆ ಬಿದ್ದಿತ್ತು.

ಪೋಡಿನ ಸೋಲಿಗರೆಲ್ಲಾ ಆಕಾಶವೇ ತಲೆಯ ಮೇಲೆ ಕವಿಚಿಕೊಂಡಂತೆ ತಲೆಯ ಮೇಲೆ ಕೈ ಹೊತ್ತು ಕುಳಿತರು. ತಮ್ಮ ದೈವಕ್ಕೆ ಈ ಗತಿಯನ್ನು ತಂದವರಾರು? ತನ್ನನ್ನು ತಾನು ಕಾಪಾಡಿಕೊಳ್ಳಲಾರದಂಥ ದೈವದಿಂದ ನಮ್ಮ ರಕ್ಷಣೆಯಾದರೂ ಹೇಗೆ ಸಾಧ್ಯ? ದೈವದ ತಮ್ಮಡಿಯನ್ನು ಆಚನೂರಿನಿಂದ ಕರೆತಂದು ನಿಮಿತ್ತ ಕೇಳಿದರು. ತಮ್ಮಡಿಗೆ ದೈವ ಆವಾಹನೆಯಾಗಲಿಲ್ಲ. ದೈವದ ಪ್ರತೀಕವಾದ ವಿಗ್ರಹ ಭಿನ್ನಗೊಂಡು ದಿಕ್ಕಿಲ್ಲದಂತೆ ನೆಲದ ಮೇಲೆ ಬಿದ್ದಿರುವಾಗ ಅದು ತಮ್ಮಡಿಯ ಮೇಲೆ ಹೇಗೆ ಆವಾಹನೆಯಾಗಲು ಸಾಧ್ಯ!

ಸೋಲಿಗನೊಬ್ಬ ಗುಡಿಯ ಸುತ್ತಮುತ್ತ ಆನೆಯ ಹೆಜ್ಜೆಗಳು ಮೂಡಿರುವುದನ್ನೂ ಗುಡಿಯ ಮುಂಭಾಗದಲ್ಲಿ ಅಲ್ಲಲ್ಲಿ ಆನೆಗಳು ಲದ್ದಿ ಹಾಕಿರುವುದನ್ನೂ ಗಮನಿಸಿ ಎಲ್ಲರಿಗೂ ತೋರಿಸಿದ. ಆನೆಗಳು ಮೈ ತುರಿಸಿಕೊಳ್ಳಲು ಮಂಟಪದ ಕಂಬಗಳಿಗೆ ಮತ್ತು ವಿಗ್ರಹಕ್ಕೆ ಮೈಯುಜ್ಜಿಕೊಳ್ಳುವ ಯತ್ನದಲ್ಲಿ ಕಂಬಗಳನ್ನು

ಉರುಳಿಸಿ ವಿಗ್ರಹವನ್ನು ಕೆಳಕ್ಕುರುಳಿಸಿ ಭಿನ್ನಗೊಳಿಸಿರಬಹುದೆಂಬ ತನ್ನ ಸಂದೇಹವನ್ನು ತೀಕ್ಷ್ಣಮತಿಯಾದ ಸೋಲಿಗ ಎಲ್ಲರ ಮುಂದಿಟ್ಟ. ಆತ ಸರಿಯಾಗಿಯೇ ಊಹಿಸಿದ್ದ. ಕುಂಭಪ್ಪನ ವಿಗ್ರಹ ನಾಲ್ಕುಕಂಬಗಳ ಆಧಾರದ ಮೇಲಿನ ಸೂರಿನಡಿಯಲ್ಲಿತ್ತಲ್ಲದೆ, ಮಂಟಪಕ್ಕೆ ನಾಲ್ಕೂ ಕಡೆ ಗೋಡೆಗಳಿಲ್ಲದೆ ರಾತ್ರಿಯಲ್ಲಿ ಕಾಡುಪ್ರಾಣಿಗಳು ಆಗಾಗ ಗುಡಿಯಲ್ಲಿ ಆಶ್ರಯ ಪಡೆಯುತ್ತಿದ್ದುದುಂಟು.

"ಆನೆ ದೈವ ಕುಂಭಪ್ಪಂಗೆ ಕಾಡಾನೆ ಯಾನ ಮಾಡಾವು?" ಎಂದು ಹೆಚ್ಚು ಮಂದಿ ಸೋಲಿಗರೆಲ್ಲಾ ಆ ಬುದ್ಧಿವಂತ ಸೋಲಿಗನ ಸಂದೇಹವನ್ನು ಗಣನೆಗೆ ತೆಗೆದುಕೊಳ್ಳಲಿಲ್ಲ.

ತಮ್ಮಡಿ ಸ್ವಲ್ಪ ಹೊತ್ತು ಏನನ್ನೋ ಯೋಚಿಸುವನಂತೆ ಶೂನ್ಯವನ್ನೇ ದಿಟ್ಟಿಸಿ ನೋಡಿ, 'ನಮ್ಮ ದೈವವನ್ನು ಅದಕ್ಕಿಂತಲೂ ಯಾವುದೋ ಬಲವಾದ ದೈವವೋ ದೆವ್ವವೋ ಸ್ಥಳಪಲ್ಲಟಗೊಳಿಸಿರಬೇಕು. ದೈವದ ರಕ್ಷಣೆ ಇಲ್ಲದ ತಾವಿನಲ್ಲಿ ಇದ್ದೇನು ಫಲ! ಹಿರಿಯರೆಲ್ಲಾ ಕುಳಿತು ಮುಂದೇನು ಮಾಡಬೇಕೆಂದು ನಿರ್ಧರಿಸಿ,' ಎಂದು ಹೇಳಿ ತನ್ನ ಹೊಣೆಯನ್ನು ನೇರವಾಗಿ ಪೋಡಿನ ಹಿರಿಯರ ಹೆಗಲಿಗೇರಿಸಿದ.

ಪೋಡಿನ ನಡುವೆ ಬೆಂಕಿಯ ಮುಂದೆ ಕುಳಿತು ಹಿರಿಯರು ರಾತ್ರಿಯಿಡಿ ವಿಚಾರ ವಿನಿಮಯ

## ಬಾಲ ಭಾಸ್ಕರ

ಒಮ್ಮೆ ತರಗತಿಯಲ್ಲಿ ಕಡಲೆಕಾಯಿ ತಿಂದ ಸಿಪ್ಪೆಗಳು ನೆಲದ ಮೇಲೆ ಹರಡಿದ್ದವು. ತರಗತಿಯ ಒಳ ಪ್ರವೇಶಿಸಿದ ಉಪಾಧ್ಯಾಯರಿಗೆ ಅದನ್ನು ನೋಡಿ ಕೋಪ ಬಂದು "ಹೀಗೆ ಕಡಲೆಕಾಯಿ ಸಿಪ್ಪೆ ಹರಡಿದವರು ಯಾರು?" ಎಂದು ಅವರು ವಿಚಾರಿಸಿದಾಗ ಎಲ್ಲ ವಿದ್ಯಾರ್ಥಿಗಳು ಗಾಬರಿಯಿಂದ ಒಬ್ಬರ ಮುಖವನ್ನೊಬ್ಬರು ನೋಡಿಕೊಂಡರು.

"ಕಡಲೆಕಾಯಿ ತಿಂದು ಸಿಪ್ಪೆ ಹಾಕಿದವರು ಯಾರು, ನಿಜ ಹೇಳಿ?" ಎಂದು ಮತ್ತದೇ ಧ್ವನಿಯಲ್ಲಿ ಕೇಳಿದರು. ತಪ್ಪನ್ನು ಒಪ್ಪಿಕೊಳ್ಳಲು ಸಿದ್ಧರಿಲ್ಲದ ವಿದ್ಯಾರ್ಥಿಗಳು ಮೌನವಾಗೇ ಕುಳಿತರು. ಗುರುಗಳಿಗೆ ತಾಳ್ಮೆ ತಪ್ಪಿ ತರಗತಿಯ ಹುಡುಗರಿಗೆಲ್ಲ ಶಿಕ್ಷೆ ಕೊಡಲು ನಿರ್ಧರಿಸಿ ಮತ್ತೊಮ್ಮೆ "ತಪ್ಪು ಮಾಡಿದವರ ಹೆಸರನ್ನು ಹೇಳಿರಿ. ಇಲ್ಲವೆ ಎಲ್ಲರೂ ಎದ್ದು ನಿಂತು ಕೈ ಚಾಚಿ," ಎಂದು ಗದರಿಸಿದರು. ಹುಡುಗರೆಲ್ಲರೂ ಎದ್ದು ಶಿಕ್ಷೆಗೆ ಕೈ ಚಾಚಿದರು. ಆದರೆ ಒಬ್ಬ ಹುಡುಗ ತನ್ನ ಸರದಿ ಬಂದಾಗ ಕೈಗಳನ್ನು ಚಾಚದೇ ಧೈರ್ಯದಿಂದ, "ನಾನು ಕಡಲೆಕಾಯಿ ತಿಂದವನಲ್ಲ. ಅದಕ್ಕಾಗಿ ನಿಮ್ಮಿಂದ ಏಟನ್ನು ತಿನ್ನುವುದಿಲ್ಲ," ಎಂದು ಪ್ರತಿಭಟಿಸಿದ. ಅದಕ್ಕೆ ಪ್ರತಿಯಾಗಿ ಗುರುಗಳು "ಹಾಗಾದರೆ ತಿಂದವರ ಹೆಸರು ಹೇಳು," ಎಂದು ಗಡುಸಾಗಿ ಕೇಳಿದರು. "ನಾನು ಚಾಡಿ ಹೇಳುವವನಲ್ಲ. ಯಾರ ಹೆಸರನ್ನೂ ಹೇಳುವುದಿಲ್ಲ, ಏಟನ್ನೂ ತಿನ್ನುವುದಿಲ್ಲ," ಎಂದು ಧೈರ್ಯದಿಂದ ಹೇಳಿದ ಆ ಹುಡುಗ. ವಿದ್ಯಾರ್ಥಿಯ ಉತ್ತರದಿಂದ ಗುರುಗಳ ಕೋಪ ತುದಿಗೇರಿತು. "ಹಾಗಾದರೆ ನೀನು ನನ್ನ ತರಗತಿಯಲ್ಲಿರಬೇಡ ಹೊರಹೋಗು," ಎಂದಾಗ ಸ್ವಲ್ಪವೂ ಅಳುಕದೆ ಆ ಹುಡುಗ ತನ್ನ ಪುಸ್ತಕಗಳನ್ನು ತೆಗೆದುಕೊಂಡು ಹೊರಗೆಹೊರಟೇ ಬಿಟ್ಟ. ಅನ್ಯಾಯಕ್ಕೆ ಅಂಜದೇ ಧೈರ್ಯದಿಂದ ಹೊರಗೆ ಹೋದ ಆ ವಿದ್ಯಾರ್ಥಿ ಮತ್ತಾರೂ ಅಲ್ಲ, ಬ್ರಿಟಿಶರ ವಿರುದ್ಧ "ಸ್ವರಾಜ್ಯ ನಮ್ಮ ಜನ್ಮಸಿದ್ಧ ಹಕ್ಕು. ಅದು ನಮಗೆ ದೊರೆಯಲೇಬೇಕು," ಎಂದು ಘೋಷಿಸಿದ ಬಾಲಗಂಗಾಧರ ಟಿಳಕ ಅವರು.

ಸಂಗ್ರಹ: *ಬಿ.ಡಿ. ರಾಮೇಗೌಡ.*

ಮಾಡಿದರು. ಕುಂಭಪ್ಪ ದೈವವನ್ನು ನಂಬಿದ್ದ. ಅಕ್ಕಪಕ್ಕದ ನಾಲ್ಕು ಪೋಡುಗಳ ಯಜಮಾನರೂ ಅಲ್ಲಿ ಸೇರಿದ್ದರು. ತಮ್ಮ ಪೂರ್ವಜರ ಮೂಲ ನೆಲೆಯಾದ ಆನೆಮಲೆ ಕಾಡಿಗೆ ಹಿಂದಿರುಗಿ ಕುಲ ದೈವವಾದ ಉರಿಕಾತಿ ಮಾರಿಗೆ ಶರಣಾಗಲು ತೀರ್ಮಾನಿಸಿದರು. ಹಿರಿಯರ ತೀರ್ಮಾನ ಸೋಲಿಗನೊಬ್ಬನಿಗೆ ಸರಿಕಾಣಿಸಲಿಲ್ಲ.

"ನಂಬಿದ್ದ ದೈವ ನಂಬಿದವರನ್ನು ಕೈಬಿಟ್ಟು ಓಡಿ ಹೋದರೇನಾಯಿತು! ಹೊಸದೈವವೋ ದೆವ್ವವೋ ಬರುವಾಗ ಮಳೆಯನ್ನೂ ಜೊತೆ ಯಲ್ಲೇ ತಂದಿರುವುದು ಒಳ್ಳೆಯ ಶಕುನ. ಹೊಸ ದೈವವನ್ನೇ ನಂಬಿಕೊಂಡು ಇರುವ ಸ್ಥಳದಲ್ಲಿರು ವುದೇ ಚೆಂದ," ಎಂದು ಆತ ತನ್ನ ಅಭಿಪ್ರಾಯ ವನ್ನು ಹಿರಿಯರ ಮುಂದೆ ಮಂಡಿಸಿದ.

ಆದರೆ ಹೆಚ್ಚು ಮಂದಿ ಸೋಲಿಗರು ತಮ್ಮ ಪೂರ್ವಜರು ಬದುಕಿ ಬಾಳಿದ ಘನ ಕಾಡಾದ ಆನೆಮಲೆಗೆ ಹೋಗಲು ತುದಿಗಾಲಲ್ಲಿ ನಿಂತರು. ಇಲ್ಲೇನು ಅವರಿಗೆ ಭೂಮಿ, ಕಾಣಿ, ಕೊಳ್ಳೆ ಹೋಗುತ್ತಿದೆಯೇ! ಎಲ್ಲಿಹೋದರೂ ಜೇನು ಕಿತ್ತು ಅಡವಿಯ ಗೆಡ್ಡೆಗೆಣಸು ತಿಂದು ಬದುಕುವ ಈ ಜನರಿಗೆ ಈ ಕಾನಾದರೇನು ಮತ್ತೊಂದು ಕಾನಾದರೇನು! ಅವರ ಬದುಕಿನ ಸಕಲ ಕ್ರಿಯೆ ಗಳೆಲ್ಲಾ ಕಾಣದ ದೈವವೆಂಬ ದಿಕ್ಸೂಚಿಯನ್ನೇ ಅವಲಂಬಿಸಿದ್ದುವು.

ಸಿದ್ದೇಗೌಡ ಬಿಳಿಗಿರಿಗೆ ಬಂದು ಹೊಸ ಪೋಡು ಮಾಡಿಕೊಂಡಿರುವಂತೆ ಅವರೆಲ್ಲರ ಮನವೊಲಿಸಲು ಪ್ರಯತ್ನಿಸಿದ. ಅಳಿಯ ಮಗಳು ಮತ್ತಷ್ಟು ದೂರ ಕಾಣದ ಕಾನಿಗೆ ಗುಳೆ ಹೋಗಿ ಮುಖ ತೋರೆದು ಕೊಳ್ಳುವ ಬದಲು ಕಣ್ಣ ಮುಂದಿರಲು ಬಯಸುತ್ತಿದ್ದ. ಹಿಂದೆ ದೈವದ ಅಣತಿಯಂತೆ ಬಿಟ್ಟುಬಂದ ಬಿಳಿಗಿರಿ ಕಾನಿಗೆ ಮತ್ತೆ ಹೋಗಲು ಹಿರಿಯರು ಒಡಂಬಡದಿರಲು ಸಿದ್ದೇಗೌಡನ ಮುಖ ಸಪ್ಪ ಗಾಯಿತು. ಆನೆಮಲೆ ಕಾಡಿಗೆ ಗುಳೆ ಹೋದರೆ ಮತ್ತೆಂದೋ ಮಗಳ ಮುಖ ಕಾಣುವುದು. ಹೆಂಡತಿಯನ್ನಾದರೂ ಜೊತೆಯಲ್ಲಿ ಕರೆದು ಕೊಂಡು ಬಂದಿದ್ದರೆ ಗುಳೆ ಹೋಗು ಮೊದಲು ಹೆಂಡತಿ ಮಗಳ ಮುಖವನ್ನಾದರ ಕಾಣಬಹುದಿತ್ತೆಂದು ಆತ ಪರಿತಪಿಸಿದ. ಮ ಗಾಲ ಪ್ರಾರಂಭವಾಗುವುದಕ್ಕೆ ಮೊದಲೇ ಗು ಹೋಗುವುದೆಂದು ಹಿರಿಯರು ತೀರ್ಮಾನಿ ದರು. ಬದುಕಿಗೆ ಅಂಚಿನಲ್ಲಿದ್ದ ಮುದುಕ ತಮ್ಮ ಪೂರ್ವಜರು ಬದುಕಿ ಬಾಳಿದ ಮಣ್ಣಲ್ಲಿ ಮಣ್ಣಾಗುವ ಹಿರಿಯಾಸೆಯನ್ನು ಮನದ ಹೊತ್ತು ದೂರದ ಪಯಣಕ್ಕೆ ಮಾನಸಿಕವಾ ಸಿದ್ಧರಾದರು.

★

ಆ ದಿನ ರಾತ್ರಿ ನನಗೆ ಮೈ ಬಿಸಿಯಾಯಿತು ನಡುರಾತ್ರಿಯಲ್ಲಿ ಏನೇನೋ ವಿಚಿತ್ರವಾ ಕನಸುಗಳನ್ನು ಕಾಣತೊಡಗಿದೆ. ಆನೆಗಳ ಹಿಂ ಪೋಡಿಗೆ ನುಗ್ಗಿ ಗುಡಿಸಲುಗಳನ್ನು ತುಳಿ ಹಾಕಿದಂತೆ, ಆನೆ ಮುಖದ ದೈತ್ಯಾಕಾರದ ವ್ಯ ಯೊಂದು ಕೈಯಲ್ಲಿ ಭೀಕರವಾದ ಆಯು ಹಿಡಿದುಕೊಂಡು ಮರಗಿಡಗಳನ್ನು ಕೊಚ್ಚು ರುವ ಕನಸು ಕಂಡು 'ಕುಂಭಪ್ಪ ಬಂದ ಕುಂಭಪ್ಪ ಬಂದ' ಎಂದು ಚೀರಿಕೊಂಡೆನೆಂದ ಎಚ್ಚರವಾದಾಗ ಜಡೆಸಿದ್ದ ಹೇಳಿದ. ಎರಡ ಮೂರು ದಿನಗಳ ತನಕ ಬಂದ ಜ್ವರ ಬಿಡಲಿಲ್ಲ ಸಿದ್ದೇಗೌಡ ಯಾವುದೋ ಹಸಿರನ್ನು ತಂದು ರ ಹಿಂಡಿ ಬಾಯಿಗೆ ಬಿಡುತ್ತಿದ್ದ. ಹೊಟ್ಟೆಗೆ ರಾ ಅಂಬಲಿ ಬಿಟ್ಟರೆ ಬೇರೆಗತಿಯಿರಲಿಲ್ಲ. ಸಿದ್ದೇ ಗೌಡನ ಜೊತೆಯಲ್ಲಿ ಬಂದ ನಾನು ಜ್ವ ಬಂದು ನೆಲ ಹಿಡಿದಿದ್ದು ಅವನ ಮನಸ್ಸಿ ನೋವಾಗಿತ್ತು.

ಒಂದು ಸಲ ಜ್ವರದ ಮಂಪರಿನಲ್ಲಿದ್ದಾ ಹಣೆಯ ಮೇಲೆ ಯಾರೋ ಮೃದುವಾಗಿ ಕೈ ಆಡಿಸಿದಂತಾಯಿತು. ಮೆಲ್ಲನೆ ಕಣ್ಣು ತೆರೆದ ಜಡೆಸಿದ್ದನ ಹೆಂಡತಿ ಹಣೆಯ ಮೇಲಿನ ಬೆ ರನ್ನು ಒರೆಸಿ ತಣ್ಣೀರಿನ ಬಟ್ಟೆಯ ತುಂಡನ್ನು ಹಣೆಯ ಮೇಲಿಟ್ಟಳು. ಜಡೆಸಿದ್ದ ಕಾಡಿ ಹೋಗಿದ್ದ. ಸಿದ್ದೇಗೌಡ ತಂದಿಟ್ಟಿದ್ದ ಹಸಿರ ಎಲೆಗಳನ್ನು ಜಜ್ಜಿ ನನ್ನ ತುಟಿ ಬಿಡಿಸಿ ಬಾಯಿ

# ಜಡಭರತ

ಪ್ರಸಿದ್ಧ ಸೂಫಿ ಸಂತ ಷಮ್ಸ್-ಎ-ತಬ್ರೀಜಿ ತನ್ನ ಪ್ರಶಾಂತತೆಗೆ ಹೆಸರಾಗಿದ್ದ. ಈ ಶಾಂತಿಯ ಗುಟ್ಟೇನು ಎಂದು ಯಾರೋ ಕೇಳಿದಾಗ, ಆ ತನ್ನ ಚಿಕ್ಕಂದಿನ ವಿಷಯವನ್ನು ವಿವರಿಸಿದ.

ಚಿಕ್ಕ ಹುಡುಗನಾಗಿದ್ದಾಗಿನಿಂದ ಆತ ಜಡಭರತ. ಯಾವ ಕೆಲಸಕ್ಕೂ ಬಾರದ, ಎಲ್ಲೂ ಸರಿಹೋಗದ ಇವನನ್ನು ಒಂದು ಸಂದರ್ಭದಲ್ಲಿ ಹೊಡೆದು ಹೊಡೆದು ಸುಸ್ತಾದ ತಂದೆ ಕೊನೆಗೆ ಉದ್ಗರಿಸಿದ, "ನಿನ್ನ ಹುಚ್ಚಾಸ್ಪತ್ರೆಗೆ ಸೇರಿಸುವಾ ಎಂದರೆ ಪೂರ್ತಿ ತಲೆ ಕೆಟ್ಟ ಮೂರ್ಖನಂತೆ ಆಡೋದಿಲ್ಲ. ಮಠಕ್ಕೆ ಸೇರಿಸುವಾ ಎಂದರೆ ಪೂರ್ತಿ ಅಂತರ್ಮುಖಿಯೂ ಆಗಿಲ್ಲ, ನಿನ್ನ ಕಟ್ಟಿಕೊಂಡು ನಾನು ಏನು ಮಾಡಲಿ?"

ಮಂಕು ತಿಮ್ಮನಂತೆ ಏಟುತಿನ್ನುತ್ತಾ ಸುಮ್ಮನಿದ್ದ ತಬ್ರೀಜಿ. "ಅಪ್ಪಾ, ತಾಯಿ ಕೋಳಿಯ ಅಡಿ ಬಾತಿನ ಮೊಟ್ಟೆ ಇಟ್ಟಿದ್ದರು. ನಿಧಾನವಾಗಿ ಮೊಟ್ಟೆ ಒಡೆದು ಮರಿಯಾಯಿತು. ತಾಯಿ ಕೋಳಿಯ ಜತೆ ನಡೆಯುತ್ತಾ ಕೆರೆಯ ದಂಡೆಗೆ ಹೋಯಿತು. ಸೀದಾ ನೀರೊಳಕ್ಕೆ ನಡೆಯಿತು. ತಾಯಿ ಕೋಳಿ ಕಂಗಾಲಾಗಿ ತುಂಬಾ ಕಾಳಜಿಯಿಂದ ಮರಿಯನ್ನು ಕರೆಯುತ್ತಾ ದಂಡೆಯ ಮೇಲೇ ನಿಂತಿತು.

"ಅಪ್ಪಾ! ನಾನೂ ಈಗ ನೀರೊಳಕ್ಕೆ ನಡೆದು, ನನ್ನ ಮನೆ ನೋಡಿಕೊಂಡಿದ್ದೇನೆ. ನೀನು ದಂಡೆಯ ಮೇಲೇ ನಿಲ್ಲಲು ಇಷ್ಟಪಟ್ಟರೆ ಅದು ನನ್ನ ತಪ್ಪೇ?"

ಸತ್ತರೂ ಕಳೆದುಕೊಳ್ಳಲಾಗದಂತಹ ಅಮೂಲ್ಯನಿಧಿ ಸಿಕ್ಕಮೇಲೆಯೇ ಜೀವನ ಪ್ರಾರಂಭವಾಗುತ್ತದಂತೆ.

*ಸಂಗ್ರಹ: ಎಚ್. ಪಾಂಡುರಂಗ ವಿಠಲ*

...ು ಹಿಂಡಿದಳು. ಹಣೆಯ ಮೇಲಿನ ತಣ್ಣೀರಿನ ...ಟ್ಟೆ ಒಣಗುತ್ತಿದ್ದಂತೆ ಆಗಾಗ ಬಂದು ಒದ್ದೆ ...ಟ್ಟೆಯನ್ನು ಹಣೆಯ ಮೇಲಿಟ್ಟು ಹೋಗುತ್ತಿ...ಳು. ಯಾವ ಜನ್ಮದ ಋಣಾನುಬಂಧವೋ ...ನೋ, ಗೊತ್ತುಗುರಿಯಿಲ್ಲದೆ ಬಂದ ನನ್ನಂಥ ...ಪರಿಚಿತನಿಗೆ ಈ ಮುಗ್ಧಜನ ಆದರದಿಂದ, ...ತ್ಮೀಯತೆಯಿಂದ ಉಪಚರಿಸುತ್ತಿದ್ದರು. ಇದ...ಂದಾಗಿ ನಾನು ಸಂಕೋಚದಿಂದ ಕುಗ್ಗಿ ...ಹೋಗುತ್ತಿದ್ದೆ.

ಅಂತೂ ಸಿದ್ದೇಗೌಡನ ಸತತವಾದ ಹಸಿರಿನ ...ಕಿತ್ಸೆಯಿಂದ, ಜಡೆಸಿದ್ದನ ಹೆಂಡತಿಯ ಶುಶ್ರೂ...ಯಿಂದ ಕೆಲವೇ ದಿನಗಳಲ್ಲಿ ನಾನು ಗುಣ...ಮುಖನಾಗಿ ಊರಿಗೆ ಮರಳಲು ಸಿದ್ಧನಾದೆ. ...ನು ಕನಸಿನಲ್ಲಿ 'ಕುಂಭಪ್ಪ, ಕುಂಭಪ್ಪ' ಎಂದು ಚೀರುತ್ತಿದ್ದುದನ್ನು ಕಂಡು ಪೋಡಿಗ ಹಿರಿಯ ಸೋಲಿಗರು ಪೋಡಿಗೆ ಬಂದ ಆಗಂತುಕನಾದ ನನ್ನನ್ನು ಎಲ್ಲಿ ಆನೆ ಕುಂಭಪ್ಪ ಬಲಿ ತೆಗೆದುಕೊಳ್ಳುವನೋ ಎಂದು ಹೆದರಿ ನನ್ನನ್ನು ಕಾಪಾಡುವಂತೆ ಆನೆಮಲೆಯ ಉರಿಕಾತಿ ಮಾರಿಗೆ ಹರಕೆ ಹೊತ್ತರೆಂದು ಜಡೆಸಿದ್ದ ಅನಂತರ ನನಗೆ ತಿಳಿಸಿದಾಗ ನನಗೆ ನಗು ಬಂತು. ಆದರೂ ಕನಸಿನಲ್ಲಿ ಕಂಡ ಆನೆ ಕುಂಭಪ್ಪನ ಭೀಕರಾಕೃತಿಯನ್ನು ನೆನೆದು ಮೈ ಜುಮ್ಮೆಂದಿತು.

ಗೇರುಮಾಳದ ಜಡೆಸ್ವಾಮಿಯ ಜಾತ್ರೆ ಮುಗಿಸಿಕೊಂಡು ಹೋಗಲು ತೀರ್ಮಾನಿಸಿದ್ದ ಅವರು ಗುಳೆ ಹೋಗಲು ಇನ್ನೂ ತಿಂಗಳ ಸಮಯವಿತ್ತು. ಅಷ್ಟರಲ್ಲಿ ಇದುವರೆಗೆ ಸಂಗ್ರಹಿಸಿದ್ದ

ಜೇನನ್ನು ಮಾರಿ ಬಟ್ಟೆಬರೆ ಹಂಚಿಕೊಳ್ಳಬೇಕಿತ್ತು. ಜೇನು ಕೊಳ್ಳಲು ಸತ್ಯಮಂಗಲದಿಂದ ಸೆಟ್ಟಿ ಬರುತ್ತಿದ್ದುದು ಗೇರುಮಾಳದ ಜಾತ್ರೆಯ ಸಮಯದಲ್ಲಿ.

ಧೂಪದಮಲೆ ಕಿಬ್ಬಿಗೆ ಬಂದು ಆಗಲೇ ಹತ್ತು ದಿನಗಳು ಉರುಳಿ ಹೋಗಿದ್ದವು. ಸೋಲಿಗರ ಜಾನಪದ ಹಾಡುಗಳನ್ನು ಸಂಗ್ರಹಿಸಲೆಂದು ಬಂದ ನನ್ನ ಉದ್ದೇಶವೇನೋ ಪೂರ್ಣವಾಗಿ ಈಡೇರಲಿಲ್ಲ. ಆದರೆ ನಿಸರ್ಗದ ಕೂಸುಗಳಾದ ಸೋಲಿಗರ ಬದುಕಿನ ಹಲವು ಹತ್ತು ಮುಖಗಳ ಪರಿಚಯವಂತೂ ಸಾಕಷ್ಟಾಯಿತು. ಅಲ್ಲಿನ ಕೆಲವೇ ದಿನಗಳ ನನ್ನ ವಾಸ್ತವ್ಯದಲ್ಲಿ ಪೋಡಿನ ಸೋಲಿಗರೆಲ್ಲಾ ಸ್ವಂತ ಬಂಧುಗಳಿಗಿಂತ ಆತ್ಮೀಯರೆನಿಸಿದ್ದರು. ಮೂಢನಂಬಿಕೆಗಳ ದಾಸರಾಗಿದ್ದ ಈ ಸೋಲಿಗ ಬಂಧುಗಳಲ್ಲಿ ಅವ್ಯಕ್ತವಾಗಿ ಅಡಗಿದ್ದ ಹೃದಯ ಶ್ರೀಮಂತಿಕೆಯನ್ನು ಕಂಡು ನಾನು ಪುಲಕಿತನಾದೆ.

ಸಿದ್ದೇಗೌಡ ತಾನು ಇನ್ನೂ ಕೆಲವಾರು ದಿನಗಳಿದ್ದು ಬಿಳಿಗಿರಿಗೆ ಹಿಂದಿರುಗುವುದಾಗಿ ಹೇಳಿದ. ನಾನು ಸಂಕನಪೋಡಿನಿಂದ ಹೊರಟು ನಿಂತ... ಸೋಲಿಗ ಬಂಧುಗಳು ತಾವು ಬೆಳೆದ ಕುಂ... ಸೋರೆಕಾಯಿಗಳನ್ನು ತಂದಿಟ್ಟು ಊರಿಗೆ ತೆ... ಕೊಂಡು ಹೋಗುವಂತೆ ಪ್ರೀತಿಯಿಂದ ಒ... ಯಿಸಿದರು. ಅವುಗಳನ್ನು ಹೊತ್ತು ಸಾಕ... ದೂರ ನಡೆಯಬೇಕಿದ್ದರಿಂದ ವಿನಯದಿಂದ ಅವುಗಳನ್ನು ನಿರಾಕರಿಸಿದೆ. ಜಡೆಸಿದ್ದ ತಂ... ಕೊಟ್ಟ ಒಂದು ನೆಸರಿ ಜೇನಿನ ಸೀಸೆಯ... ಮತ್ತು ಒಂದು ಸೇರಿನಷ್ಟು ಕಾನುಧೂಪವ... ಮಾತ್ರ ತೆಗೆದುಕೊಂಡೆ.

ಸಂಕನಪೋಡಿನಿಂದ ಸೋಲಿಗರೆ... ಹೊಳೆಯತನಕ ಬಂದು ನನ್ನನ್ನು ಆತ್ಮೀ... ವಾಗಿ ಬೀಳ್ಕೊಟ್ಟರು. ಅವರಿಂದ ಬೀಳ್ಕೊಂ... ಹೊರಡುವಾಗ ಈ ಆತ್ಮೀಯರನ್ನು ಇನ್ನೆಂದ... ಕಾಣಲಾರೆನೇನೋ ಎಂಬ ಅಗಲಿಕೆಯ ನೋ... ನನ್ನ ಹೃದಯವನ್ನು ಹಿಂಡತೊಡಗಿತು. ಗೇ... ಮಾಳದವರೆಗೆ ನನ್ನ ಜೊತೆಯಲ್ಲೇ ಬಂದ ... ಸಿದ್ದ ಜಡೆಸ್ವಾಮಿಯ ಗುಡಿಗೆ ಹೋಗಿ ದೈವ... ದರ್ಶನ ಮಾಡಿ ಅಡ್ಡಬಿದ್ದೆವು. ಗುಡಿಯ ಸ...



ಬಜೆಟ್: ಪಠ್ಯಪುಸ್ತಕ ಧಮದಸ್ತಿ ಇಲ್ಲ:

ದ ಅಂಗಡಿಯೊಂದರಲ್ಲಿ ಕಡಲೆಪುರಿಯನ್ನು ಂಡು ಪೋಡಿನ ಹುಡುಗರಿಗೆ ಕೊಡುವಂತೆ ಡೆಸಿದ್ದನಿಗೆ ಕೊಟ್ಟೆ. ಮತ್ತೊಂದು ಅಂಗಡಿ ಲ್ಲಿ ಬಣ್ಣಬಣ್ಣದ ಮಣಿಗಳ ಸರವನ್ನು ಗು ಹಾಕಿದ್ದರು. ಉರುಟಾಗಿದ್ದ ದಪ್ಪನೆಯ ಪು ಹವಳದ ಸರವೊಂದು ನನ್ನ ಕಣ್ಣಿಗೆ ತು. ಅದೇ ಸಮಯದಲ್ಲಿ ಜಡೆಸಿದ್ದನ ಹೆಂಡ ಯ ನೆನಪಾಯಿತು. ಅದು ನಕಲಿ ಹವಳದ ರವಾದ್ದರಿಂದ ಅದರ ಬೆಲೆಯೂ ಹೆಚ್ಚಿರಲಿಲ್ಲ. ದನ್ನು ಕೊಂಡು ಜಡೆಸಿದ್ದನ ಕೈಗಿತ್ತಾಗ ಅವನ ಮುಖ ಸಂತಸದಿಂದ ಅರಳಿತು.

ಬಿದಿರು ಬೊಂಬುಗಳನ್ನು ತುಂಬಿಕೊಂಡು ೇರುಮಾಳದಿಂದ ಸತ್ಯಮಂಗಲಕ್ಕೆ ಹೊರಟಿದ್ದ ಾರಿಯೊಂದರಲ್ಲಿ ನನಗೆ ಸ್ಥಳ ಸಿಕ್ಕಿತು. ಲಾರಿ ಹೊರಟಾಗ ಜಡೆಸಿದ್ದ ಬಿಕ್ಕಳಿಸಿಕೊಂಡು ಅತ್ತು ಬಿಟ್ಟ. ಲಾರಿಯಲ್ಲಿ ಕುಳಿತು ಸತ್ಯಮಂಗಲವನ್ನು ತಲುಪುವವರೆಗೆ ಅಳುತ್ತಿದ್ದ ಜಡೆಸಿದ್ದನ ಮುಖ ನನ್ನ ಮನಸ್ಸಿನಿಂದ ಮರೆಯಾಗಲಿಲ್ಲ.

ಸತ್ಯಮಂಗಲದಿಂದ ಚಾಮರಾಜನಗರಕ್ಕೆ ಒಡನೆ ಬಸ್ಸು ಸಿಕ್ಕಿತು. ಬೆಂಗಳೂರಿಗೆ ಬಂದು ದಿನನಿತ್ಯದ ಯಾಂತ್ರಿಕ ಬದುಕಿನಲ್ಲಿ ಸಿಲುಕಿ ತಿಂಗಳುಗಳು ಉರುಳಿಹೋದರೂ ಆಗಾಗ ಸಂಕನ ಪೋಡಿನ ಸೋಲಿಗರ ಮುಖಗಳು ಕನಸಿನಲ್ಲಿ ಕಾಣಿಸಿಕೊಳ್ಳುತ್ತಿದ್ದವು. ಒಮ್ಮೆ ಜಡೆಸಿದ್ದನ ಸ್ನೇಹಭರಿತ ಮುಖ ಕಾಣಿಸಿದರೆ ಮತ್ತೊಮ್ಮೆ ಕೆಂಪುಹವಳದ ಸರವನ್ನು ಕೊರಳಲ್ಲಿ ಧರಿಸಿದ ಅವನ ಹೆಂಡತಿಯ ಮುಗ್ಧವಾದ ಕಪ್ಪು ಮುಖ ಕಾಣಿಸಿಕೊಳ್ಳುತ್ತಿತ್ತು - ಆನೆ ಕುಂಭಪ್ಪನ ಭೀಕರಾಕೃತಿ ಕನಸಿನಲ್ಲಿ ಕಾಣಿಸಿಕೊಂಡ ದಿನಗಳಿಗೂ ಲೆಕ್ಕವಿಲ್ಲ. ●

**ಹಿಂ**ದಿಯ ಪ್ರಸಿದ್ಧ ಸಾಹಿತಿ ಶ್ರೀ ಭಗವತಿ ಚರಣ ವರ್ಮಾ ಆ ದಿನಗಳಲ್ಲಿ ಅಲಹಾಬಾದಿನಲ್ಲಿದ್ದರು. ತಮ್ಮ ಲೇಖಕ-ಮಿತ್ರರೊಡನೆ ತಮಾಷೆಯಾಗಿ ಮಾತಾಡುವುದೆಂದರೆ ಅವರಿಗೆ ಬಹಳ ಇಷ್ಟ. ಒಮ್ಮೆ ಮಹಾಕವಿ ಶರತ್ ದಾರಿಯಲ್ಲಿ ಭೇಟಿಯಾದರು. ಅವರ ಕೈಯಲ್ಲಿ ಆಗ ತಾನೆ ಪ್ರಕಟಗೊಂಡ ಮಹಾಕಾವ್ಯದ ಪುಸ್ತಕಗಳಿದ್ದವು. ಅವರು ಒಂದು ಪ್ರತಿಯನ್ನು ವರ್ಮಾರವರ ಕೈಗೆ ಕೊಡುತ್ತಾ, ''ಮನೆ ಮನೆಗೂ ಹೋಗಿ ಮಾರುತ್ತಿದ್ದೇನೆ. ನೀನೊಂದು ಪ್ರತಿ ತೆಗೆದುಕೋ; ಇದರ ವಿಮರ್ಶೆ ಚೆನ್ನಾಗಿ ಬರಿ,'' ಎಂದರು.

ವರ್ಮಾರವರು ಅವರಿಗೆ ಧನ್ಯವಾದ ಅರ್ಪಿಸಿ ತಮ್ಮ ಮಿತ್ರ ರಾಜಾಭಾದುಡಿಯ ಮಹಲಿಗೆ ಬಂದರು. ಅವರಿಲ್ಲವಾದ್ದರಿಂದ ತಮ್ಮ ಇನ್ನೊಬ್ಬ ಶ್ರೀಮಂತ ಮಿತ್ರರ ಮನೆಗೆ ಬಂದರು. ಅವರಿಗೆ ಸ್ವಾಗತ ಬಯಸಿದ ಆತ, ''ಈಚೆಗೆ ಹಿಂದಿಯಲ್ಲಿ ಯಾವ ಪುಸ್ತಕ ಬಂದಿದೆ?'' ಎಂದು ಕೇಳಿದರು. ಆ ಕೂಡಲೇ ವರ್ಮಾ ತಮ್ಮ ಕೈಯಲ್ಲಿದ್ದ ಮಹಾಕಾವ್ಯವನ್ನು ಚೆನ್ನಾಗಿ ಹೊಗಳಿ, ''ನಾನು ಇನ್ನೊಂದು ಪ್ರತಿ ತೆಗೆದುಕೊಳ್ಳುತ್ತೇನೆ,'' ಎಂದು ಹೇಳಿ ಅದನ್ನು ಅವರಿಗೆ ಮಾರಿಬಿಟ್ಟರು.

ಸ್ವಲ್ಪ ಹೊತ್ತಿನ ನಂತರ ಮಹಾಕಾವ್ಯವನ್ನು ಮಾರಲು ಆ ಶ್ರೀಮಂತರ ಮನೆಗೇ ಶರತ್ ಬಂದುಬಿಡಬೇಕೆ?

*ಕೆ. ಶಾಂತಮಣಿ*

*Printed and Published by V.G.VAIDYA on behalf of Loka Shikshana Trust at "Samyukta Karnataka Press", Koppikar Road Hubli-580020. Phone:64303 - No. 2 Residency Road, Bangalore - 560025, Phone:213265 Managing Editor: K.SHAMA RAO, Representatives: Bombay - V.Satyamurthy, Phone: 5510592, Madras: S.K.Murthi, Phone: 414870, New Delhi: V.K.Chopra, Phone: 7114785 Registered with the Registrar of Newspapers for India under No. 35/3957.*

